# ಬಸವೇಶ್ವರನ

## ವಚನಗಳು.





ಬಾ ಗೇ ವಾ ಡಿ ಯ

ಶ್ರೀ ಬಸವೇಶ್ವರ ದೇವಾಲಯದ ದಕ್ಷಿಣ ಭಾಗ.

ಶಿವಾನುಭವ ಗ್ರಂಥಮಾಲಾ ನಂ॥ ೧

# ಬಸವೇಶ್ವರನ ವಚನಗಳು.



ಸಂಪಾದಕರು.

ರಾ॥ ಸಾ॥ ಫ. ಗು. ಹಳಕಟ್ಟಿ.
ಬಿ. ಏ. ಎಲ್. ಎಲ್. ಬಿ. ವಕೀಲ.

ವಿಜಾಪುರ.
೧೯೩೦

ಬೆಲೆ ೧। ರೂಪಾಯಿ.

೨ ನೇ ಆವೃತ್ತಿ.

ಇದನ್ನು ವಿಜಾಪುರದಲ್ಲಿ
ರಾ॥ ಸಾ॥ ಫ. ಗು. ಹಳಕಟ್ಟಿ ಇವರು ತಮ್ಮ
“ಹಿತಚಿಂತಕ ಪ್ರಿಂಟಿಂಗ ಪ್ರೆಸ್ಸಿ” ನಲ್ಲಿ ಮುದ್ರಿಸಿದರು.
ಮತ್ತು ಆವರು ವಿಜಾಪುರದಲ್ಲಿ
ಉಪಲಿ ಬುರುಜದ ಹತ್ತರ ತಮ್ಮ ೧೬೧೦ (ಅ) ನೇ ಮನೆಯಲ್ಲಿ
ಪ್ರಕಟಿಸಿದರು.

# ಪ್ರಸ್ತಾವನೆ.

ಬಸವೇಶ್ವರನ ವಚನಗಳ ಎರಡನೇ ಆವೃತ್ತಿಯನ್ನು ನಾವು ಈಗ ವಾಚಕರೆದುರಿಗೆ ಇಡುವ ಪ್ರಸಂಗವು ಬಂದದ್ದಕ್ಕೆ ನಾವು ದಯಾನ್ವಿತ ವಾದ ಪರಮಾತ್ಮನನ್ನು ಸಹೃದಯತೆಯಿಂದ ಸ್ಮರಿಸುತ್ತೇವೆ. ನಾವು ಆರಂಭಿಸಿದ ಶಿವಾನುಭವ ಗ್ರಂಥಮಾಲೆಯ ಪ್ರಥಮ ಪುಸ್ತಕವು ಇದಾ ಗಿದ್ದಿತು. ಅದನ್ನು ಅಚ್ಚುಹಾಕಿ ಇಂದಿಗೆ ನಾಲ್ಕುವರೆ ವರ್ಷಗಳಾದವು. ಅದನ್ನು ನಾವು ಒಂದೇ ಒಂದು ಕೈ ಬರಹದ ಪ್ರತಿಯಿಂದ ಸಿದ್ಧಗೊಳಿ ಸಿದೆವು. ಪುರಾತನ ಗ್ರಂಥಗಳನ್ನು ಹೀಗೆ ಒಂದೇ ಒಂದು ಪ್ರತಿಯ ಸಹಾಯದಿಂದ ಶುದ್ಧವಾಗಿ ಪ್ರಕಟಿಸುವದು ಎಷ್ಟು ಅಶಕ್ಯವೆಂಬುದು ಯಾರಿಗಾದರೂ ತಿಳಿಯುವಂತೆ ಇದೆ. ಆದರೆ ಶುದ್ಧಮಾಡಿಯೇ ಪ್ರಕ ಟನೆಮಾಡಬೇಕೆಂದು ನಾವು ಹಾಗೆಯೇ ಕುಳಿತಿದ್ದಾದರೆ ಈ ಮಹತ್ವದ ಕಾರ್ಯವು ಅನಿಶ್ಚಯಾತ್ಮಕವಾಗಿ ಬಹು ದಿವಸ ಉಳಿಯಬಹುದೆಂದೆಣಿಸಿ ನಾವು ಸಾಹಸದಿಂದ ಈ ಕಾರ್ಯವನ್ನು ಆರಂಭಿಸಿದೆವು. ಆದರೆ ಹೀಗೆ ಮಾಡಿದ್ದರಿಂದ ಪರಿಣಾಮದಲ್ಲಿ ಕಡೆಗೆ ಉಚಿತವಾಯಿತೆಂತಲೇ ನಮಗೆ ಎನಿಸುತ್ತದೆ. ಯಾಕೆಂದರೆ ಅನೇಕರು ಈ ಮಹಾತ್ಮನ ವಚನಗಳನ್ನು ನೋಡ ಲು ಅನುಕೂಲವಾಯಿತು. ಮತ್ತು ಇದು ಮೈಸೂರು ವಿಶ್ವವಿದ್ಯಾಲಯದ ಎಮ್. ಏ. ಪರೀಕ್ಷೆಗೆ ಪಠ್ಯ ಪುಸ್ತಕವಾಗಿ ಉಪಯೋಗಿಸಲ್ಪಟ್ಟಿತು. ಅನೇಕ ವಿದ್ಯಾವಂತರು ಅದನ್ನು ವಿಮರ್ಶಕ ಬುದ್ಧಿಯಿಂದಲೂ ಐತಿಹಾಸಿಕ ಸಂ ಶೋಧಕ ವೃತ್ತಿಯಿಂದಲೂ ಅಭ್ಯಾಸಮಾಡಲಿಕ್ಕೆ ಪ್ರಾರಂಭಿಸಿದರು. ಮತ್ತು ಅವರು ಈ ಬಗೆಯಾಗಿ ಬರೆದ ಲೇಖಗಳು ಪ್ರಬುದ್ಧ ಕರ್ನಾಟಕ ಮೊದಲಾದ ಮಾಸ ಮತ್ತು ವಾರಪತ್ರಿಕೆಗಳಲ್ಲಿ ಬರಲಿಕ್ಕೆ ಹತ್ತಿದವು. ಇಷ್ಟೇ ಅಲ್ಲ, ಮಹಾ ರಾಷ್ಟ್ರ ಪ್ರಾಂತದಲ್ಲಿದ್ದ ವೀರಶೈವರು ಅವುಗಳೊಳಗಿನ ಸುಂದರ ಉಕ್ತಿಗಳನ್ನು ಆರಿಸಿ ತೆಗೆದು ಬಾಲಬೋಧ ಲಿಪಿಯಿಂದ ಅವುಗಳನ್ನು ಅಚ್ಚುಹಾಕಿಸಿ ಚಿಕ್ಕ ಪುಸ್ತಕಗಳನ್ನು ರಚಿಸಿ ಅವುಗಳನ್ನು ತಮ್ಮ ಪ್ರಾಂತದಲ್ಲೆಲ್ಲ ಪ್ರಸಾರ ಪಡಿಸಿದರು. ಮತ್ತು ಅನೇಕರು ಅವರಲ್ಲಿಯ ಉಕ್ತಿಗಳನ್ನು ಎತ್ತಿ ತಮ್ಮ ಪ್ರಕಟನೆಗಳಲ್ಲಿಯೂ ಭಾಷಣಗಳಲ್ಲಿಯೂ ಆಗಿಂದಾಗ್ಗೆ ಉಪಯೋಗಿಸುತ್ತ ಲಿರುವದು ಕಂಡುಬರುತ್ತದೆ. ಅನೇಕ ಮಠಾಧಿಕಾರಿಗಳು ತಮ್ಮ ಶಿವಾ

ನುಭವ ಸದ್ಗೋಷ್ಠಿಯ ಕಾಲಕ್ಕೆ ಇವುಗಳ ಉಪಯೋಗವನ್ನು ಮಾಡುತ್ತ ಲಿರುವರು. ಹೀಗೆ ಈ ೧ ನೇ ಆವೃತ್ತಿಯ ಸುಪರಿಣಾಮಗಳು ಎಲ್ಲ ಕಡೆಗೂ ಉಂಟಾದದ್ದು ತೋರಿಬರುತ್ತದೆ. ಆದ್ದರಿಂದ ಈ ಪ್ರತಿಯನ್ನು ಹೊರಪ ಡಿಸುವ ಸಾಹಸ ಮಾಡಿದ್ದಕ್ಕೆ ಅದರ ಅಂತ್ಯ ಪರಿಣಾಮಗಳು ಶುಭದಾ ಯಕವಾಗಿಯೇ ಆದವೆಂದು ನಮಗೆ ತೋರುತ್ತದೆ. ಆದರೆ ನಾವು ಈಗ ವಿಶೇಷ ಸಮಾಧಾನ ಪಡತಕ್ಕದ್ದೇನೆಂದರೆ, ಈ ೧ ನೇ ಆವೃತ್ತಿಯನ್ನು ಹೊರಡಿಸಿದ್ದರ ಮೂಲಕ ಇದಕ್ಕೂ ಹೆಚ್ಚಿಗೆ ಶುದ್ಧ ಪ್ರತಿಯನ್ನು ಈಗ ನಾವು ಕರ್ನಾಟಕಸ್ಥರ ಮುಂದಿಡಲಿಕ್ಕೆ ಬಹಳ ಅನುಕೂಲವಾಯಿತು. ಇದು ಎಲ್ಲಕ್ಕೂ ಹೆಚ್ಚಿನ ಲಾಭವಾಗಿದೆ.

ಈ ಎರಡನೇ ಆವೃತ್ತಿಯು ಮೂರು ಕೈಬರಹದ ಗ್ರಂಥಗಳ ಸಹಾ ಯದಿಂದ ಸಿದ್ಧಗೊಳಿಸಲ್ಪಟ್ಟಿದೆ. ಇವುಗಳಲ್ಲಿ ಎರಡು ಗ್ರಂಥಗಳು ಶ್ರೀ ಶಿವಯೋಗಮಂದಿರದಿಂದ ದೊರಕಿದವುಗಳು. ೩ ನೆಯ ಪ್ರತಿಯು ಶ್ರೀ ಶಿವ ಬಸವ ಸ್ವಾಮಿಗಳು ಹುಕ್ಕೇರಿಮಠ ಮುಕ್ಕಾಮ ಹಾವೇರಿ ಇವರದು ಇರು ತ್ತದೆ. ಈ ಪ್ರತಿಯು ಟೀಕೆಯುಳ್ಳದ್ದಿದ್ದು, ಇದರಿಂದ ಶುದ್ಧ ಪಾಠಗಳನ್ನು ಕಂಡು ಹಿಡಿಯಲು ನಮಗೆ ಬಹಳ ಅನುಕೂಲವಾಯಿತು. ಈ ಮೂರು ಹಸ್ತಲಿಖಿತ ಗ್ರಂಥಗಳ ಸಹಾಯದಿಂದ ಈ ಎರಡನೇ ಆವೃತ್ತಿಯು ಈಗ ಸಿದ್ಧಗೊಳಿಸಲ್ಪಟ್ಟಿರುವದರಿಂದ, ಈ ಪ್ರತಿಯು ಬಹು ಮಟ್ಟಿಗೆ ಶುದ್ಧವಾಗಿ ದೆಂದು ಹೇಳಬಹುದಾಗಿದೆ. ಆದರೆ ಇದು ಸಂಪೂರ್ಣ ಶುದ್ಧವಾಗಿದೆಂದು ನಾವು ಇನ್ನೂ ಹೇಳಲು ಧೈರ್ಯಮಾಡಲಾರೆವು. ಯಾಕಂದರೆ ಅನೇಕ ವಚನಗಳು ವಿಶೇಷಾರ್ಥವುಳ್ಳವಾಗಿ ಬೆಡಗಿನಿಂದ ತುಂಬಿಕೊಂಡಿರುವದ ರಿಂದಲೂ ಅನೇಕ ಕಡೆಗೆ ಶಬ್ದ ರೂಪಗಳು ಈ ಕಾಲಕ್ಕೆ ಅಪರಿಚಿತ ವಾದವುಗಳಿರುವದರಿಂದಲೂ ಅವುಗಳ ನಿಜವಾದ ಪಾಠಗಳನ್ನು ಕಂಡು ಹಿಡಿಯುವದು ಇನ್ನೂ ದುಸ್ತರವಾಗಿರುತ್ತದೆ. ಈ ಕಾರ್ಯವನ್ನು ಇನ್ನು ಮೇಲೆ ಕನ್ನಡ ಭಾಷಾಶಾಸ್ತ್ರಜ್ಞರೂ ಶಿವಾನುಭವ ವಿದ್ಯಾಸಂಪನ್ನರೂ ಕೈಕೊಂಡು ಶುದ್ಧ ಪಾಠಗಳಾವವೆಂಬದನ್ನು ನಮಗೆ ತಿಳಿಸಿದಲ್ಲಿ ನಾವು ಅವರಿಗೆ ಉಪಕೃತರಾಗುವೆವು. ಮತ್ತು ಅವುಗಳನ್ನು ಮುಂದಿನ ಆವೃತ್ತಿ ಯಲ್ಲಿ ಸೇರಿಸುವೆವು.

ಅನೇಕರು ಈ ಆವೃತ್ತಿಗೆ ಸಂಪೂರ್ಣ ಟೀಕೆಯನ್ನು ನಾವು ಬರೆ ಯಬೇಕೆಂದು ನಮಗೆ ಸೂಚಿಸಿದರು. ಮತ್ತೆ ಕೆಲವರು ಬಸವೇಶ್ವರರ

ವಚನಗಳಿಗೆ ಈಗ ಉಪಲಬ್ಧವಿರುವ ಹಳೇ ಟೀಕೆಯನ್ನೇ ಇದ್ದಕ್ಕಿದ್ದಹಾಗೆ ಇದರಲ್ಲಿ ಅಚ್ಚುಹಾಕಬೇಕೆಂತಲೂ ಹೇಳಿವರು. ಆದರೆ ಈ ಎರಡನೇ ಸೂಚನೆಯು ಅಸಾಧ್ಯವೂ ಅಲ್ಪ ಪ್ರಯೋಜ ನಕರವೂ ಎಂದು ನಮಗೆ ತೋರಿದ್ದರಿಂದ ಈ ಸಮಗ್ರ ಟೀಕೆಯನ್ನು ನಾವು ಹಾಕಲಿಲ್ಲ. ಯಾಕಂದರೆ ಅದನ್ನು ಇದ್ದಕ್ಕಿದ್ದ ಹಾಗೆ ಹಾಕಿದ್ದರೆ ಈ ಗ್ರಂಥವು ೧೦೦೦ ೧೨೦೦ ಪುಟಗಳುಳ್ಳದಾಗಿ ಅದರ ಬೆಲೆಯು ಜನ ಸಾಮಾನ್ಯಕ್ಕೆಗ್ರಹಿಸಲು ಅಶಕ್ಯವಾಗುತ್ತಿತ್ತು. ಇದಲ್ಲದೆ ಆ ಟೀಕೆಯಲ್ಲಿ ಪುನರುಕ್ತಿಗಳು ಮಿತಿಮೀರಿ ಇರುವವರಿಂದ ವಾಚಕರಿಗೆ ಬೇಸರಿಕೆಯನ್ನುಂಟು ಮಾಡುವಂತೆ ಇದೆ. ಆದ್ದರಿಂದ ಹಾಗೆ ಮಾಡದೆ ಕಠಿಣ ಭಾಗಗಳ ಅರ್ಥವನ್ನು ಬರೆದರೆ ಮಾತ್ರ ಸಾಕೆಂಬ ಅಭಿಪ್ರಾಯಕ್ಕೆ ಶ್ರೀ ಮನ್ನಿರಂಜನ ಜಗದ್ಗುರು ಮುರುಘಾರಾಜೇಂದ್ರ ಮಹಾಸ್ವಾಮಿಗಳೂ ಹಾವೇರಿ ಶ್ರೀ ಶಿವಬಸವ ಸ್ವಾಮಿಗಳೂ ಅಪ್ಪಣೆ ಕೊಟ್ಟದ್ದರಿಂದ ಈ ಟೀಕೆಯನ್ನೆಲ್ಲ ಅಚ್ಚುಪಡಿಸುವದನ್ನು ನಾವು ಬಿಟ್ಟೆವು. ಆದರೆ ಅವರ ಅಪ್ಪಣೆಯ ಪ್ರಕಾರ ವಚನಗಳಲ್ಲಿಯ ಕಠಿಣ ಶಬ್ದಗಳ ಅರ್ಥಗಳು ಕೋಶರೂಪವಾಗಿ ಈ ಆವೃತ್ತಿಯಲ್ಲಿ ಅಂತ್ಯಕ್ಕೆ ಜೋಡಿಸಲ್ಪಟ್ಟವೆ. ಇದಲ್ಲದೆ ಎಲ್ಲೆಲ್ಲಿ ವಚನಗಳ ನುಡಿಗಳೂ ವಾಕ್ಯಗಳೂ ಕಠಿಣವಾಗಿ ತೋರುತ್ತವೋ ಅಲ್ಲಲ್ಲಿ ಅವುಗಳ ವಿವರಣೆಗಳು ಕೊಡಲ್ಪಟ್ಟವೆ. ವಿಚಾರ ಮಾಡಿದರೆ ಗ್ರಂಥಗಳ ಟೀಕೆಟಿಪ್ಪಣೆಗಳು ಓದುಗರ ವಿಚಾರಗಳಿಗೆ ಚಾಲನ ಕೊಡುವಂಥವಿರಬೇಕಲ್ಲದೆ ಅವರು ವಿಚಾರ ಮಾಡುವ ಸ್ವಾತಂತ್ರ್ಯವನ್ನು ಕಸೆದುಕೊಳ್ಳುವಂಥವಿರಬಾರದು. ಇದೇ ಈಗಿನ ಕಾಲಕ್ಕೆ ಶ್ರೇಷ್ಠವೆಂದು ಕಂಡುಬಂದ ಪದ್ಧತಿಯಾಗಿದೆ. ಇದನ್ನೇ ಇಲ್ಲಿ ಅನುಸರಿಸಿದೆ. ಈ ಪದ್ಧತಿಯಿಂದ ಮೂಲ ವಚನಕಾರನ ಅರ್ಥಸ್ವಾರಸ್ಯವು ಚನ್ನಾಗಿ ಮನಸ್ಸಿಗೆ ಬಿಂಬಿಸುತ್ತದೆ. ಪಾಶ್ಚಿಮಾತ್ಯ ಟೀಕಾಕಾರರ ತರಹವು ಹೀಗೆಯೇ ಇರ.ತ್ತದೆ. ಆದ್ದರಿಂದ ಈ ರೀತಿಯನ್ನು ಅನುಸರಿಸಿ ಟೀಕೆ ಟಿಪ್ಪಣೆಗಳು ಇದರಲ್ಲಿ ಬರೆಯಲ್ಪಟ್ಟವೆ.

ಈ ಟೀಕೆಟಿಪ್ಪಣೆಗಳು ನಮ್ಮ ಹತ್ತಿರವಿದ್ದ ೩ ನೇ ಕೈಬರಹದ ಗ್ರಂಥದ ಸಹಾಯದಿಂದ ಬರೆಯಲ್ಪಟ್ಟವೆ. ಈ ಟಿಪ್ಪಣೆಗಳಲ್ಲಿಯ ವಿಚಾರಗಳು ನಮ್ಮ ವಿರದೆ ಸಾಂಪ್ರದಾಯಾನುಸಾರವಾಗಿ ಅವುಗಳಿಗಿದ್ದ . ಅರ್ಥವನ್ನು ಅವು ಬೋಧಿಸುತ್ತವೆ. ಈ ಅರ್ಥಗಳು ಓದುಗರಿಗೆ ಸರಿ ಎನಿಸದಿ

ದ್ದರೆ, ಅದರ ಜವಾಬದಾರಿಯು ನಮ್ಮದಲ್ಲ. ಮತ್ತು ಅದಕ್ಕೋಸ್ಕರ ಅವರು ನಮ್ಮನ್ನು ದೂಷಿಸಬಾರದೆಂತಲೂ ನಮ್ಮ ನಮ್ರ ಸೂಚನೆ ಇದೆ.

ಈ ಬಸವೇಶ್ವರನ ವಚನ ಗ್ರಂಥದ ಎರಡನೇ ಆವೃತ್ತಿಯನ್ನು ಹೊರಪಡಿಸಲು ಕೈ. ವಾ. ಮಸಗಿ ಮರಿಶಾಂತಪ್ಪನವರ ಮೃತ್ಯುಪತ್ರವು ನಮಗೆ ಸಕಾಲಕ್ಕೆ ಬಹಳ ಸಹಾಯ ಮಾಡಿತು. ಈ ಸಹಾಯವು ಇಂತಿಷ್ಟೇ ಎಂದುಹೇಳಲು ಶಕ್ಯವಿಲ್ಲ. ಈ ಸಹಾಯವು ನಮಗಿರದಿದ್ದರೆ, ಬಹು ದಿವಸ ಈ ಆವೃತ್ತಿಯನ್ನು ಹೊರಪಡಿಸಲು ನಮಗೆ ಶಕ್ಯವಾಗುತ್ತಿರಲಿಲ್ಲ ಇದಕ್ಕೋಸ್ಕರ ನಾವು ಅವರಿಗೆ ಚಿರ ಋಣಿವಾಗಿದ್ದೇವೆ. ಈ ಮಹಾನುಭಾವರು ಚರಿತ್ರೆಯನ್ನು ನಾವು ಮುಂದೆ ಕೊಟ್ಟಿದ್ದೇವೆ.

ಈ ಕಾರ್ಯದಲ್ಲಿ ನಮಗೆ ವಿಶೇಷ ಪ್ರೋತ್ಸಾಹವನ್ನು ಕೊಟ್ಟವರೆಂದರೆ ಚಿತ್ರಕಲ್‌ದುರ್ಗದ ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಜಯದೇವ ಮುರುಘರಾಜೇಂದ್ರ ಮಹಾಸ್ವಾಮಿಗಳೇ ಇದ್ದಾರೆ. ಶ್ರೀ ಮಹಾಸ್ವಾಮಿಗಳವರು ನಾವು ಕೈಕೊಂಡ ಈ ಕಾರ್ಯಕ್ಕೆ ಯಾವಾಗಲೂ ಸಹಾನುಭೂತಿಪರರಾಗಿ ಕಾಲಕಾಲಕ್ಕೆ ತಕ್ಕ ಸಲಹೆಗಳನ್ನು ಕೊಡುತ್ತ ಬಂದದ್ದಕ್ಕೆ ನಾನು ಅವರಿಗೆ ಅತ್ಯಂತ ಕೃತಜ್ಞರಾಗಿದ್ದೇವೆ. ಅದೇ ಮೇರೆಗೆ ಅಜ್ಜಂಪುರದ ರಾ|| ರಾ|| ಸಿದ್ದಪ್ಪ ಶೆಟ್ಟರಿಗೂ ನಾವು ಬಹಳ ಆಭಾರಿಯಾಗಿದ್ದೇವೆ. ಅವರು ತಮ್ಮ ಮಾವಂದಿರಾದ ಕೈ. ವಾ. ಮಸಗಿ ಮರಿಶಾಂತಪ್ಪನವರ ಚರಿತ್ರೆಯ ವಿಷಯಗಳನ್ನು ಸಂಶೋಧಿಸಿ ಕೊಟ್ಟದ್ದಲ್ಲದೆ, ಈ ಕಾರ್ಯದಲ್ಲಿ ನಮಗೆ ಎಲ್ಲ ವಿಧವಾಗಿಯೂ ಸಹಾಯ ಮಾಡಿದರು. ಅದರಂತೆಯೇ ಮ. ರಾ. ರಾ. ಬಳ್ಳಾರಿ ಪಡ್ಡಿನಶಟ್ರು ಗುರುಲಿಂಗಯ್ಯನವರೂ ಮ. ರಾ. ಮಂಡಾಸದ ವೀರಪ್ಪನವರೂ ಬಹಳ ಪ್ರೋತ್ಸಾಹಕರಾಗಿ ವರ್ತಿಸಿದರು. ಇವರೆಲ್ಲರಿಗೆ ನನ್ನ ಸಪ್ರೇಮವಂದನೆಗಳಿವೆ.

ನನ್ನ ಕೆಲಮಿತ್ರರು ವಚನಗಳ ಭಾವವನ್ನು ತಿಳಿಯಲಿಕ್ಕೆ ಅನುಕೂಲವಾಗುವಂತೆ ಷಟ್‌ಸ್ಥಲದ ಸಾಮಾನ್ಯ ತತ್ವಗಳನ್ನು ಕೆಲಮಟ್ಟಿಗೆ ಇದರಲ್ಲಿ ವಿವೇಚಿಸಬೇಕೆಂತಲೂ ನನಗೆ ಸೂಚಿಸಿದರು. ಮತ್ತು ಅದರಂತೆಯೇ ಬಸವಣ್ಣನವರ ಸವಿಸ್ತಾರ ಚರಿತ್ರೆಯನ್ನು ಇದರಲ್ಲಿ ಸೇರಿಸಬೇಕೆಂತಲೂ ನನಗೆ ತಿಳಿಸಿದರು. ಆದರೆ ಈ ಎರಡೂ ವಿಷಯಗಳು ವಿಸ್ತೀರ್ಣವಾದವುಗಳೂ ತೊಡಕುಳ್ಳವೂ ಇದ್ದದರಿಂದ ಇವುಗಳನ್ನು ಇಲ್ಲಿ ಜೋಡಿಸಿಲ್ಲ. ಇದಲ್ಲದೆ ಈ ವಿಷಯು

ಗಳು ಇನ್ನೂ ಸಂಶೋಧನ ಸ್ಥಿತಿಯಲ್ಲಿವೆ. ಅವನ್ನೆಲ್ಲ ಸಂಪೂರ್ಣ ತಿಳಿಯಲು ಕೆಲವು ಕಾಲಬೇಕು. ಆದ್ದರಿಂದ ಅವುಗಳನ್ನು ನಾವು ಇಲ್ಲಿ ಹಾಕಿಲ್ಲ. ಆದರೆ ಬೆಳಗಾವ ಜಿಲ್ಹಾ ಹುಕ್ಕೇರಿ ತಾಲೂಕು ಅರ್ಜುನವಾಡ ಗ್ರಾಮದ ಹತ್ತಿರ ಒಂದು ಶಿಲಾಲೇಖವಿದ್ದು ಇದರಲ್ಲಿ ಬಸವಣ್ಣನ ಸಂಬಂಧವಾಗಿ ಕೆಲವು ಮಹತ್ವದ ಉಲ್ಲೇಖಗಳಿರುತ್ತವೆ. ಆದ್ದರಿಂದ ಅದನ್ನು ಮಾತ್ರ ನಾವು ಎತ್ತಿ ಇದರಲ್ಲಿ ಅರ್ಥ ಸಹಿತ ಕೊಟ್ಟಿದ್ದೇವೆ.

ಪುರಾತನ ಗ್ರಂಥ ಸಂಶೋಧನ ಕಾರ್ಯವು ಇಂಥಲ್ಲಿಗೆ ಪೂರ್ಣ ವಾಯಿತೆಂದು ಹೇಳುವದು ದುಸ್ತರವು. ಅದು ಯಾವಾಗಲೂ ಅಪೂರ್ಣ ಸ್ಥಿತಿಯಲ್ಲಿರುವದು ಸಹಜವು. ಆದ್ದರಿಂದ ಈಗಿನ ಆವೃತ್ತಿಯಲ್ಲಿಯೂ ಕೂಡ ವಾಚಕರು ಇನ್ನೂ ಅನೇಕ ದೋಷಗಳನ್ನು ಕಾಣಬಹುದು. ಆದರೂ ಅವರು ಅವುಗಳಿಗೋಸ್ಕರ ನಮ್ಮನ್ನು ಕ್ಷಮಿಸಿ ಆ ದೋಷಗಳನ್ನು ನಮಗೆ ತಿಳಿಸಿದಲ್ಲಿ ಅವರಿಂದ ನಾವು ಬಹಳ ಉಪಕೃತರಾಗುವೆವು. ಮತ್ತು ಅವುಗಳನ್ನು ನಾವು ಗ್ರಹಿಸಿ ಮುಂದಿನ ಆವೃತ್ತಿಯಲ್ಲಿ ಸೇರಿಸುವೆವು. ಅವರು ಹೀಗೆ ಮಾಡಿದ್ದಾದರೆ ಈ ಮಹತ್ವದ ಕಾರ್ಯದಲ್ಲಿ ನಮಗೆ ಬಹಳ ಸಹಾಯ ಮಾಡಿದಂತೆ ಆಗುವದು.



# ಕೈ. ವಾ. ಮುಸಗಿ ಮರಿಶಾಂತಪ್ಪನವರ ಚರಿತ್ರೆಯು.

ಈ ೨ನೇ ಆವೃತ್ತಿಯು ದಾವಣಗೆರೆಯ ಕೈ. ವಾ. ಮುಸಗಿ ಮರಿಶಾಂತಪ್ಪನವರ ಸಹಾಯದಿಂದ ಪ್ರಚುರಪಡಿಸಲ್ಪಟ್ಟಿದೆ. ಇದಕ್ಕೋಸ್ಕರ ಈ ಮಹನೀಯರನ್ನು ನಾವು ಎಷ್ಟು ಮನ್ನಿಸಿದರೂ ಅಲ್ಪವೇ ಸರಿ. ಕೈ. ವಾ. ಮುಸಗಿ ಮರಿಶಾಂತಪ್ಪನವರು ಪ್ರಮಥ ವಿಚಾರಪ್ರೇಮಿಗಳಾಗಿದ್ದರು. ಮತ್ತು ಅವರು ವಾಙ್ಮಯ ಪ್ರೋತ್ಸಾಹಕರೂ ಆಗಿದ್ದರು. ಅವರು ಲಿಂಗೈಕ್ಯರಾಗಿ ಇಂದಿಗೆ ೫ ವರುಷಗಳಾದವು. ಅವರು ತಮ್ಮ ಮರಣದ ಪೂರ್ವದಲ್ಲಿ ತಾ|| ೨೯ ನೇ ಸಪ್ಟೆಂಬರ ೧೯೨೪ ನೇ ದಿವಸ ಒಂದು ಮೃತ್ಯುಪತ್ರವನ್ನು ಮಾಡಿಟ್ಟಿದ್ದರು. ಇದರಲ್ಲಿ ಅವರು ತಮ್ಮ ಆಸ್ತಿಯಲ್ಲಿ ಒಂದುವರೆ ಸಹಸ ರೂಪಾಯಿಗಳನ್ನು ಶ್ರೀ ಬಸವೇಶ್ವರನ ವಚನಶಾಸ್ತ್ರ ಪ್ರಿಂಟುಪಡಿಸಿ ಪ್ರಚುರಪಡಿಸಲಿಕ್ಕೆ ವಿನಿಯೋಗಿಸಬೇಕೆಂದು ಲಿಖಿಸಿದ್ದರು. ಆ ಮೇರೆಗೆ ಅವರಿಂದ ಸಹಾಯವನ್ನು ಹೊಂದಿ ಈ ಗ್ರಂಥವು ಪ್ರಕಟಿಸಲ್ಪಟ್ಟಿರುತ್ತದೆ. ಇಂಥ ಮಹನೀಯರ ಚರಿತ್ರೆಯನ್ನು ಇದರಲ್ಲಿ ಕೊಡುವದು ಅತ್ಯಂತ ಅವಶ್ಯವಿದ್ದು ಅದನ್ನು ನಾವು ಇಲ್ಲಿ ವಿವರಿಸುತ್ತೇವೆ.

ಕೈ. ವಾ. ಮುಸಗಿ ಮರಿಶಾಂತಪ್ಪನವರು ಮೊದಲು ಬಳ್ಳಾರಿ ಪಟ್ಟಣಸ್ಥರು. ಅವರ ತಂದೆಯವರ ಹೆಸರು ಮುಸಗಿ ನಾಗಪ್ಪನವರು. ತಾಯಿಂದಿರ ಹೆಸರು ಪಾರ್ವತೆಮ್ಮನವರು. ಉಭಯದಂಪತಿಗಳು ಸಾಮಾನ್ಯ ಸ್ಥಿತಿಯಲ್ಲಿದ್ದುಕೊಂಡು ಬಳ್ಳಾರಿಯಲ್ಲಿಯೇ ವ್ಯವಹಾರ ಮಾಡುತ್ತ ಚರಿತಾರ್ಥ ಸಾಗಿಸುತ್ತಿದ್ದರು. ಆದರೆ ಕೈ. ವಾ. ಮರಿಶಾಂತಪ್ಪನವರು ಚಿಕ್ಕವಯಸ್ಸಿನವರಿರುವಾಗಲೇ ಅವರ ತಂದೆಯವರು ತೀರಿಕೊಂಡರು. ಆಗ ಕುಟುಂಬದ ಸಂರಕ್ಷಣೆಯ ಭಾರವೆಲ್ಲ ಕೈ. ವಾ. ಮರಿಶಾಂತಪ್ಪನವರ ತಾಯಿಂದಿರು ಮತ್ತು ಅವರ ಅಣ್ಣಂದಿರಾದ ಶಾಂತವೀರಪ್ಪನವರ ಮೇಲೆ ಬಂದು ಬಿದ್ದಿತು. ಈ ಶಾಂತವೀರಪ್ಪನವರು ಬಳ್ಳಾರಿಯಲ್ಲಿ ಒಬ್ಬರಲ್ಲಿ ಗುಮಾಸ್ತರಾಗಿದ್ದುಕೊಂಡು ತಮ್ಮ ಪ್ರಪಂಚವನ್ನು ನಡಿಸಿಕೊಳ್ಳುತ್ತ ಬಂದರು.

ಕೈ. ವಾ. ಮರಿಶಾಂತಪ್ಪನವರು ತಮ್ಮ ಕುಟುಂಬದ ಉದ್ಯೋಗವಾದ ವ್ಯಾಪಾರವನ್ನೇ ತಮ್ಮ ಸಹೋದರರ ನಿರೀಕ್ಷಣೆಯಲ್ಲಿ ಸಾಗಿಸಿದರು.



ಕೈ. ವಾ. ಮುಸಗಿ ಮರಿಶಾಂತಪ್ಪನವರು.

ಅವರು ಇದರಲ್ಲಿ ತೀವ್ರವಾಗಿ ಚತುರತೆಯನ್ನು ಹೊಂದಿದರು. ಬಳ್ಳಾರಿಯಲ್ಲಿ ಮಲೆನಾಡ ಪ್ರಾಂತದಲ್ಲಿಯ ಸಾಗರ ತೀರ್ಥಹಳ್ಳಿಗ್ರಾಮಗಳ ಕಡೆಗಿನ ಅಡಿಕೆಯ ವ್ಯಾಪಾರವು ಬಹಳವಿದ್ದು ಇದರಲ್ಲಿ ಅವರು ಮನಸ್ಸು ಹಾಕಿ ಅದರಲ್ಲಿ ವಿಶೇಷ ಲಾಭಹೊಂದಿ ಪಟ್ಟಣದಲ್ಲಿ ಪ್ರಮುಖ ಸ್ಥಾನವನ್ನು ಹೊಂದಹತ್ತಿದರು.

ಕೈ. ವಾ. ಮರಿಶಾಂತಪ್ಪನವರು ಸ್ವಭಾವತಃ ಅತ್ಯಂತ ಗುಣಾಢ್ಯರೂ ಭಕ್ತಿವಂತರೂ ಆಗಿದ್ದರು. ಈ ಗುಣಗಳವರಲ್ಲಿರಲು ಅವರ ತಂದೆಗಳಾದ ನಾಗಪ್ಪನವರ ಸ್ವಭಾವ ಸುವೃತ್ತಿಗಳೇ ಕಾರಣಗಳು. ನಾಗಪ್ಪನವರು ಆಗ ಬಳ್ಳಾರಿಯಲ್ಲಿದ್ದ ಶ್ರೀ ಶಾಂತವೀರ ಸ್ವಾಮಿಗಳೆಂಬ ಶ್ರೇಷ್ಠ ಶಿವಾನುಭಾವಿಗಳ ಅನುಗ್ರಹಕ್ಕೆ ಪಾತ್ರರಾಗಿದ್ದರು. ಇವರ ಸಂಸ್ಕಾರದಿಂದ ಅವರು ಶಿವಶರಣ ಸಾಂಪ್ರದಾಯಕರೂ ಷಟ್‌ಸ್ಥಲಪ್ರೇಮಿಗಳೂ ಆಗಿದ್ದರು. ತಾತಂದಿರ ಈ ವೃತ್ತಿಯು ಅವರ ಪುತ್ರರ ಮನಸ್ಸಿನಲ್ಲಿಯೂ ಒಡಮೂಡಿ ಅವರೂ ಇದೇ ಮಾರ್ಗವನ್ನೇ ಅವಲಂಬಿಸಿದರು. ಅವರು ದಿನಾಲು ಮುಂಜಾವಿನಲ್ಲಿ ಬಳ್ಳಾರಿಯಲ್ಲಿ ಪ್ರಸಿದ್ಧ ಶಿವಶರಣರೆನ್ನಿಸಿಕೊಂಡ ಕೈ. ವಾ. ಸಕ್ಕರೇ ಕರಡೆಪ್ಪನವರು ಕಟ್ಟಿಸಿದ ಪಾಠಶಾಳೆಯ ಚಾಕಿಗೆ ಹೋಗುತ್ತಿದ್ದರು. ಮತ್ತು ಈ ಸ್ಥಳಕ್ಕೆ ಮೇಲಿಂದಮೇಲೆ ಜಂಗಮರೂ ಪಂಡಿತರೂ ಬರುವ ಸಾಂಪ್ರದಾಯವಿದ್ದು ಅಲ್ಲಿ ನಡೆಯುತ್ತಿದ್ದ ಶಿವಾನುಭವ ಪ್ರಸಂಗಗಳ ಲಾಭವನ್ನು ಅವರು ಪಡೆಯುತ್ತಲಿದ್ದರು. ಈ ಪ್ರಕಾರ ಅವರು ಅತ್ಯಂತ ಸದ್ವರ್ತನೆ ಸದಾಚಾರಗಳಿಂದ ಕೂಡಿಕೊಂಡವರಾಗಿ ೧೯ಗಳನೇ ಇಸ್ವಿಯ ವರೆಗೆ ಬಳ್ಳಾರಿಯಲ್ಲಿ ಕಾಲ ಕಳೆದು ಇವರ ತರುವಾಯ ಅವರು ಬಳ್ಳಾರಿಯನ್ನು ಬಿಟ್ಟು ವ್ಯಾಪಾರೋದ್ಯೋಗಗಳಲ್ಲಿ ಮಹತ್ವದ ಸ್ಥಾನವಾಗಿರುವ ದಾವಣಗೆರೆಯಲ್ಲಿ ಇರಬೇಕೆಂದು ಅಪೇಕ್ಷಿಸಿ ತಮ್ಮ ತಾಯಿ, ಹೆಂಡತಿ ಮತ್ತು ಮೂವರು ಹೆಣ್ಣುಮಕ್ಕಳೊಡನೆ ಇಲ್ಲಿಗೆ ಬಂದು ವ್ಯಾಪಾರದಲ್ಲಿ ತೊಡಗಿದರು. ಈ ಕಾಲಕ್ಕೆ ಅಲ್ಲಿಯ ರಾ॥ ರಾ॥ ಮಾಗಾನಹಳ್ಳಿ ಸಂಗಪ್ಪನವರೂ ರಾ॥ ರಾ॥ ಮುಂಡಾಸದ ವೀರಪ್ಪನವರೂ ಅವರಿಗೆ ವಿಶೇಷ ಸಹಾಯ ಮಾಡಿದರು. ಕೈ. ವಾ. ಮರಿಶಾಂತಪ್ಪನವರು ದಾವಣಗೆರೆಗೆ ಬಂದ ಬಳಿಕ ತಮ್ಮ ವ್ಯಾಪಾರ ಚಾತುರ್ಯದ ಮೂಲಕ ಅಲ್ಲಿ ಸ್ವಲ್ಪ ಕಾಲದಲ್ಲಿಯೇ ಅವರು ವಿಶೇಷ ಅಭಿವೃದ್ಧಿ ಸ್ಥಿತಿಯನ್ನು ಹೊಂದಿದರು. ಮತ್ತು ಅಲ್ಲಿಯ ವರ್ತಕ ಮಂಡಲಿಯಲ್ಲಿ ಗಣ್ಯರೆನಿಸಿಕೊಳ್ಳಹತ್ತಿದರು.

ಕೈ. ವಾ. ಮರಿಶಾಂತಪ್ಪನವರು ದಾವಣಗೆರೆಗೆ ಬಂದ ಮರು ವರುಷವೇ ಅವರ ಹೆಂಡತಿಯು ತೀರಿಕೊಂಡಳು. ಅವರಿಗೆ, ಆಗ ಪುತ್ರ ಸಂತಾನವಿರಲಿಲ್ಲ. ಕೇವಲ ಮೂವರು ಹೆಣ್ಣು ಮಕ್ಕಳು ಮಾತ್ರ ಉಳಿದಿದ್ದರು. ಆದರೂ ಅವರು ಪುನಃ ಲಗ್ನವಾಗುವದನ್ನು ಅಪೇಕ್ಷಿಸದೆ ಮರಣಾಂತ್ಯದವರೆಗೂ ಅವಿವಾಹಿತರಾಗಿಯೇ ಉಳಿದರು. ಮುಂದೆ ೧೯೧೯ ನೇ ಇಸ್ವಿಯಲ್ಲಿ ಅವರ ತಾಯಂದಿರೂ ಸಹ ತೀರಿಕೊಂಡರು.

ಈ ಕಾಲಕ್ಕೆ ಬಸವಾದಿ ಪ್ರಮಥರ ಮಾರ್ಗವನ್ನು ನಿಂದಿಸುವುದೊಂದು ಪಂಗಡವು ದೇಶ ಮಧ್ಯದಲ್ಲಿ ಉತ್ಪನ್ನವಾಗಿತ್ತು. ಆದರೆ ಕೈ. ವಾ. ಮಸಗಿ ಮರಿಶಾಂತಪ್ಪನವರು ಪ್ರಮಥರ ಉದಾತ್ತ ವಿಚಾರಗಳನ್ನು ಚಿಕ್ಕಂದಿನಿಂದಲೂ ಅಬ್ಯಾಸ ಮಾಡಿದವರಾದ್ದರಿಂದ ಅವರಲ್ಲಿ ಅತ್ಯಂತ ಭಕ್ತಿ ವಿಶ್ವಾಸಗಳಿಂದೊಡಗೂಡಿ ವರ್ತಿಸುತ್ತಿದ್ದರು. ಆದ್ದರಿಂದ ಈ ನಿಂದೆಗಳು ಅವರಿಗೆ ಅಸಹ್ಯಕರವಾದವು. ಆದರೆ ಅವರು ಇಂಥವುಗಳನ್ನು ಕೇಳಿಕೊಂಡು ಉಪೇಕ್ಷಾಭಾವದಿಂದ ವರ್ತಿಸುವದು ಅವರಿಗೆ ಸೈರಿಸುವದಾಗುತ್ತಿರಲಿಲ್ಲ. ಪ್ರಮಥನಿಂದಕರು ಹೊರಡಿಸುತ್ತಿದ್ದ ಅವಾಚ್ಯ ಮತ್ತು ಅಪ್ರಶಸ್ತ ಪ್ರಕಟನೆಗಳನ್ನು ಇವರು ಆಗಿಂದಾಗ್ಗೆ ಖಂಡಿಸಿ ಇದಿರುತ್ತರಗಳನ್ನು ಬರೆಯಿಸುವದರಲ್ಲಿಯೂ ಪ್ರಮಥರ ಕೀರ್ತನೆ ಭಜನೆಗಳನ್ನು ಏರ್ಪಡಿಸುವರಲ್ಲಿಯೂ ಹೆಚ್ಚಾಗಿ ಮನಸ್ಸುಹಾಕಿದರು. ಆಗ ಅವರ ಮನಸ್ಸಿನಲ್ಲಿ ಪ್ರಮಥ ಸೇವಾ ಕಾರ್ಯವೇ ಹೆಚ್ಚಿನದಾಗಿ ಭಾಸವಾಗುತ್ತಿತ್ತು. ಮತ್ತು ಇವರಲ್ಲಿಯೇ ಅವರು ಶ್ರೇಷ್ಠತೆಯು ಇದೆ ಎಂದು ತಿಳಿಯುತ್ತಿದ್ದರು. ಒಂದು ಕಾಲಕ್ಕೆ ಅವರು ಚಿತ್ರಕಲ್‌ದುರ್ಗದ ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಜಯದೇವ ಮುರುಘಾರಾಜೇಂದ್ರ ಮಹಾಸ್ವಾಮಿಗಳನ್ನು ಕಂಡಾಗ್ಗೆ ಮಹಾಸ್ವಾಮಿಗಳವರು ಈ ಬಗೆಯ ಪ್ರಕಟನಾ ಕಾರ್ಯಗಳಿಂದ ಯಾವ ಫಲ ಪ್ರಯೋಜನಗಳಿಲ್ಲವು, ಆದರೆ ದೇಶ ಮಧ್ಯದಲ್ಲಿ ಹರಡಿರುವ ಈ ಬಗೆಯ ಕುಹಕ ವಿಚಾರಗಳನ್ನು ಹಿಂದಕ್ಕೊತ್ತಲು ಪ್ರಮಥರ ಶ್ರೇಷ್ಠ ಮಾರ್ಗವನ್ನು ವ್ಯಕ್ತಗೊಳಿಸುವ ಅವರ ಮಹತ್ವದ ವಾಙ್ಮಯವನ್ನು ಪ್ರಕಟನೆಗೊಳಿಸುವದೊಂದೇ ಮುಖ್ಯ ಸಾಧನವೆಂದು ತಿಳಿಹೇಳಲು ಅವರು ಈ ಅಪ್ಪಣೆಯನ್ನು ಶಿರಸಾ ವಹಿಸಿ ಆ ಮಾರ್ಗದಿಂದಲೇ ಪ್ರಯತ್ನಿಸಲು ಪ್ರವೃತ್ತರಾದರು. ಆದರೆ ಈ ಸಂಗತಿಯು ವರ್ತಿಸಿದ ತರುವಾಯ ಅವರು ಬಹಳ ದಿವಸ ಬಾಳುವ ಪ್ರಸಂಗವು ದೈವೇಚ್ಛೆಯಿಂದ

ಬರಲಿಲ್ಲ. ಅವರು ವಿಷಮಶೀತಜ್ವರದಿಂದ ಪೀಡಿತರಾದರು. ಆಗ ಅವರು ತಮ್ಮ ಅವಸಾನ ಕಾಲವು ಪ್ರಾಪ್ತವಾಯಿತೆಂದು ತಿಳಿದು ತಾ. ೨೯-೯-೨೪ ನೆಯ ದಿವಸ ತಮ್ಮ ಆಸ್ತಿಯ ಬಗ್ಗೆ ಒಂದು ಮೃತ್ಯುಪತ್ರವನ್ನು ಮಾಡಿದರು. ಅದರಲ್ಲಿ ಅವರು "ನನ್ನ ಮರಣಾನಂತರ ಸದ್ರಿ ಲೆಖ್ಖದ ಪ್ರಕಾರ ಉಳಿಯುವ ಆಸ್ತಿಯಲ್ಲಿ ಒಂದುವರೆ ಸಾವಿರ ರೂಪಾಯಿಗಳನ್ನು ಶ್ರೀ ಬಸವೇಶ್ವರ ವಚನಶಾಸ್ತ್ರ ಪ್ರಿಂಟು ಮಾಡಿಸಿ ಪ್ರಚುರಪಡಿಸತಕ್ಕ ಕಾರ್ಯಕ್ಕೆ ವಿನಿಯೋಗಿಸತಕ್ಕದ್ದು. ಉಳಿದ ಯಾವತ್ತು ಆಸ್ತಿಗೂ ಮೇಲ್ಕಂಡ ನನ್ನ ಹೆಣ್ಣುಮಕ್ಕಳು ಮರಿಶಾಂತಮ್ಮ ಒಂದು ಗಂಗಮ್ಮ ಒಂದು ಈ ಉಭಯತರೇ ಸಮಭಾಗವಾಗಿ ಬಾಧ್ಯಸ್ತರಾಗಿದ್ದಾರೆ ಹೊರ್ತು ಮತ್ಯಾರಿಗೂ ನನ್ನ ಆಸ್ತಿಯ ಮೇಲೆ ಹಕ್ಕು ಇರುವದಿಲ್ಲ." ಎಂದು ವ್ಯವಸ್ಥೆ ಮಾಡಿದರು. ಈ ಮೃತ್ಯುಪತ್ರವನ್ನು ನಡೆಯಿಸಲಿಕ್ಕೆ ಅವರು ದಾವಣಗೆರೆಯ ಅಜ್ಜಂಪುರ ಶೆಟ್ರು ರಾ|ರಾ| ಶಿವನಾಗಪ್ಪನವರ ಮಕ್ಕಳು ಶಿದ್ರಾಮಣ್ಣನವರನ್ನೂ ದಾವಣಗೆರೆಯಲ್ಲಿರುವ ರಾ|ರಾ| ಪಟ್ಟಣಶೆಟ್ಟಿ ಮರಿಗೆಪ್ಪನವರ ಮಕ್ಕಳು ಮುಪ್ಪಣ್ಣನವರನ್ನೂ ಟ್ರಸ್ಟಿಗಳಾಗಿ ನೇಮಿಸಿದರು. ಈ ಪ್ರಕಾರ ನೇಮಿಸಿ ಅವರು ಲಿಂಗೈಕ್ಯರಾದರು.

ಕೈ. ವಾ. ಮರಿಶಾಂತಪ್ಪನವರಿಗೆ ಇಬ್ಬರು ಮಾತ್ರ ಪುತ್ರಿಯರಿದ್ದು ಅವರಲ್ಲಿ ಮರಿಶಾಂತಮ್ಮನವರು ಟ್ರಸ್ಟಿಗಳಲ್ಲಿ ಒಬ್ಬರಾದ ಶಿದ್ರಾಮಣ್ಣನವರ ತಮ್ಮಂದಿರಾದ ರಾ|ರಾ| ಸಿದ್ದಪ್ಪನವರ ಭಾರ್ಯೆಯಾಗಿದ್ದಾರೆ. ಇನ್ನೊಬ್ಬ ಪುತ್ರಿಯರಾದ ಗಂಗಮ್ಮನವರು ಚನ್ನಗಿರಿ ತಾಲೂಕು ಹೊದಿಗೆರೆಯ ರಾ| ರಾ| ಲಕ್ಷ್ಮೇಶ್ವರ ಮುರಿಗೇಂದ್ರಪ್ಪನವರ ಭಾರ್ಯೆಯಾಗಿದ್ದಾರೆ.

ಕೈ. ವಾ. ಮರಿಶಾಂತಪ್ಪನವರ ಈ ಚರಿತ್ರೆಯಿಂದ ಮತಗೌರವವನ್ನು ಕಾಯಲಿಕ್ಕೆ ಅತ್ಯುತ್ಕೃಷ್ಟ ಸಾಧನಗಳಾದ ಮತಗ್ರಂಥಗಳನ್ನು ಪ್ರಸಾರಪಡಿಸಲಿಕ್ಕೆ ಉತ್ತೇಜನ ಕೊಡುವದರಿಂದ ನಿಜವಾದ ಧರ್ಮಾಭಿವೃದ್ಧಿಗೂ ಶಾಶ್ವತ ಕೀರ್ತಿಗೂ ಹ್ಯಾಗೆ ಭಾಜನರಾಗಿ ಉಳಿಯಲು ಆಸ್ಪದವಾಗುತ್ತದೆಂಬದು ಎಲ್ಲರಿಗೂ ದೃಗ್ಗೋಚರವಾಗದೆ ಇರದು. ಈ ವಿಷಯದಲ್ಲಿ ಕೈ. ವಾ. ಮರಿಶಾಂತಪ್ಪನವರು ಎಲ್ಲರಿಗೂ ಅನುಕರಣೀಯರಾಗಿದ್ದಾರೆ. ಇವರಂತೆಯೇ ಸಮಾಜದಲ್ಲಿಯ ಹಣವಂತರು ವರ್ತಿಸಿದ್ದಾದರೆ ಕ್ಷೀಣತೆಗೆ ಬಂದ ವೀರಶೈವ ಧಾರ್ಮಿಕ ವಾಙ್ಮಯವು ತನ್ನ ಮೊದಲಿನ ಅತ್ಯುಚ್ಚ ವಿಚಾರಪ್ರವಾಹವನ್ನು ದಿಗಂತರವೂ ಪಸರಿಸುವದರಲ್ಲಿ ಯಾವ ಸಂದೇಹವೂ ಇರಲಾರದು.



ಬಾ ಗೇ ವಾ ಡಿ ಯ

ಶ್ರೀ ಬಸವೇಶ್ವರ ದೇವಾಲಯದ ವಾಯುವ್ಯ ಭಾಗ.

# ಬಸವೇಶ್ವರನ ವಚನಗಳು.

## ಪಿಂಡಸ್ಥಲ.

೧. ಉದಕದೊಳಗೆ ಬೈಚಿಟ್ಟ ಬಯಕೆಯ ಕಿಚ್ಚಿನಂತಿದ್ದಿತ್ತು. ಶಶಿಯೊಳಗಣ ರಸದ ರುಚಿಯಂತೆ ಇದ್ದಿತ್ತು. ನನೆಯೊಳಗಣ ಪರಿಮಳದಂತೆ ಇದ್ದಿತ್ತು. ಕೂಡಲಸಂಗಮದೇವರ ನಿಲವು ಕನ್ನೆಯ ಸ್ನೇಹವಂತಿದ್ದಿತ್ತು.

## ಪಿಂಡಜ್ಞಾನಸ್ಥಲ.

೧. ಕಾಳಿಯ ಕಂಕಾಳದಿಂದ ಮುನ್ನ, ತ್ರಿಪುರ ಸಂಹಾರದಿಂವ ಮುನ್ನ, ಹರಿವಿರಿಂಚಿಗಳಿಂದ ಮುನ್ನ, ಉಮೆಯ ಕಲ್ಯಾಣದಿಂವ ಮುನ್ನ. ಮುನ್ನ, ಮುನ್ನ, ಮುನ್ನ, ಅಂದಿಂಗೆಳೆಯ ನೀನು ಹಳೆಯ ನಾನು, ಮಹಾದಾನಿ ಕೂಡಲಸಂಗಮದೇವಾ.

೨. ಅಯ್ಯಾ, ನೀನು ನಿರಾಕಾರವಾಗಿದ್ದಲ್ಲಿ, ನಾನು ಜ್ಞಾನವೆಂಬ ವಾಹನವಾಗಿರ್ದೆ ಕಾಣಾ! ಅಯ್ಯಾ, ನೀನು ನಾಟ್ಯಕ್ಕೆ ನಿಂದಲ್ಲಿ ನಾನು ಚೈತನ್ಯವೆಂಬ ವಾಹನವಾಗಿರ್ದ್ದೆ ಕಾಣಾ! ಅಯ್ಯಾ, ನೀನು ಆಕಾರವಾಗಿರ್ದ್ದಲ್ಲಿ, ನಾನು ವೃಷಭನೆಂಬ ವಾಹನವಾಗಿರ್ದ್ದೆ ಕಾಣಾ! ಅಯ್ಯಾ, ನೀನೆನ್ನ ಭವವ ಕೊಂದಿಹೆನೆಂದು ಜಂಗಮ ಲಾಂಛನವಾಗಿ ಬಂದರೆ, ನಾನು ಭಕ್ತನೆಂಬ ವಾಹನವಾಗಿರ್ದ್ದೆ ಕಾಣಾ, ಕೂಡಲಸಂಗಮದೇವಾ.

೩. ಅಯ್ಯಾ ಏಳೇಳು ಜನ್ಮದಲ್ಲಿ ಶಿವಭಕ್ತನಾಗಿ ಬಾರದಿದ್ದರೆ, ನಿಮ್ಮಾಣೆ, ನಿಮ್ಮ ಪ್ರಮಥರಾಣೆ. ನಿಮ್ಮ ಪ್ರಸಾದಕ್ಕಲ್ಲದೆ, ಬಾಯ್ದೆರೆಯೆನಯ್ಯಾ. ಪ್ರಥಮ ಭವಾಂತರದಲ್ಲಿ ಶಿಲಾದನೆಂಬ ಗಣೇಶ್ವರನ ಮಾಡಿ, ಹೆಸರಿಟ್ಟು ಕರೆದು, ನಿಮ್ಮ ಭೃತ್ಯನ ಮಾಡಿ, ಎನ್ನನಿರಿಸಿಕೊಂಡಿದ್ದಿರಯ್ಯಾ! ಎರಡನೆಯ ಭವಾಂತರದಲ್ಲಿ ಸ್ಕಂದನೆಂಬ ಗಣೇಶ್ವರನ

ಮಾಡಿ, ಹೆಸರಿಟ್ಟು ಕರೆದು, ನಿಮ್ಮ ಕಾರುಣ್ಯವ ಮಾಡಿಕೊಂಡಿದ್ದಿರಯ್ಯಾ! ಮೂರನೆಯ ಭವಾಂತರದಲ್ಲಿ ನೀಲಲೋಹಿತನೆಂಬ ಗಣೇಶ್ವರನ ಮಾಡಿ, ಹೆಸರಿಟ್ಟು ಕರೆದು, ನಿಮ್ಮ ಲೀಲಾ ವಿನೋದದಿಂದಿರಿಸಿ ಕೊಂಡಿದ್ದಿರಯ್ಯಾ! ನಾಲ್ಕನೆಯ ಭವಾಂತರದಲ್ಲಿ ಮನೋಹರನೆಂಬ ಗಣೇಶ್ವರನ ಮಾಡಿ ಹೆಸರಿಟ್ಟು ಕರೆದು, ನಿಮ್ಮ ಮನಃಪ್ರೇರಕನಾಗಲೆಂದು ಇರಿಸಿಕೊಂಡಿದ್ದಿರಯ್ಯಾ! ಐದನೆಯ ಭವಾಂತರದಲ್ಲಿ ಕಾಲಲೋಚನನೆಂಬ! ಗಣೇಶ್ವರನ ಮಾಡಿ ಹೆಸರಿಟ್ಟು ಕರೆದು, ಸರ್ವಕಾಲ ಸಂಹಾರವ ಮಾಡಿಸುತಿದ್ದಿರಯ್ಯಾ. ಆರನೆಯ ಭವಾಂತರದಲ್ಲಿ ವೃಷಭನೆಂಬ ಗಣೇಶ್ವರನ ಮಾಡಿ, ಹೆಸರಿಟ್ಟು ಕರೆದು ನಿಮಗೇರಲು ವಾಹನವಾಗಲೆಂದಿರಿಸಿಕೊಂಡಿದ್ದಿರಯ್ಯಾ! ಏಳನೆಯ ಭವಾಂತರದಲ್ಲಿ ಬಸವನೆಂಬ ಗಣೇಶ್ವರನ ಮಾಡಿ, ಹೆಸರಿಟ್ಟು ಕರೆದು ನಿಮ್ಮ ಒಕ್ಕುದ ಮಿಕ್ಕುದಕ್ಕೆ ಯೋಗ್ಯನಾಗಲೆಂದು ಇರಿಸಿಕೊಂಡಿದ್ದಿರಯ್ಯಾ! ಇದು ಕಾರಣ ಕೂಡಲಸಂಗಮದೇವಾ ನೀವು ಬರಿಸಿದ ಭವಾಂತರದಲ್ಲಿ ನಾನು ಬರುತಿರ್ದೆನಯ್ಯಾ .

೪. ಅಯ್ಯಾ, ನಿಮ್ಮ ಶರಣನ ಮರ್ತ್ಯಕ್ಕೆ ತಂದೆಯಾಗಿ, ನೆನನೆನೆದು ಸುಖಿಯಾಗಿ, ಆನು ಬದುಕಿದೆನಯ್ಯಾ! ಅದೇನು ಕಾರಣ ತಂದೆ ಎಂದರಿದೆನಯ್ಯಾ? ಎನ್ನ ಕಾರಣ ತಂದೆ ಎಂದರಿದೆನಯ್ಯಾ. ಅರಿದರಿದು ನಿಮ್ಮ ಶರಣನು ಆಚರಿಸುವಾಚರಣೆಯ ಕಂಡು ಕಣ್ದೆರೆದೆನಯ್ಯಾ ಕೂಡಲಸಂಗಮದೇವಾ.

೫. ಕರಿಘನ, ಅಂಕುಶ ಕಿರಿದೆನ್ನಬಹುದೆ? ಬಾರದಯ್ಯಾ. ಗಿರಿ ಘನ, ವಜ್ರ ಕಿರಿದೆನ್ನಬಹುದೇ? ಬಾರದಯ್ಯಾ! ತಮಂಧ ಘನ, ಜ್ಯೋತಿ ಕಿರಿದೆನ್ನ ಬಹುದೆ? ಬಾರದಯ್ಯಾ! ಮರಹು ಘನ, ನಿಮ್ಮ ನೆನೆವ ಮನ ಕಿರಿದೆನ್ನ ಬಹುದೇ? ಬಾರದಯ್ಯಾ ಕೂಡಲಸಂಗಮದೇವಾ.

## ಸಂಸಾರ ಹೇಯಸ್ಥಲ.

೧. ಭವಬಂಧನ ಭವ ಪಾಶವಾದ ಕಾರಣವೇನಯ್ಯಾ? ಹಿಂದಣ ಜನ್ಮದಲ್ಲಿ ಲಿಂಗವ ಮರೆದೆನಾಗಿ, ಹಿಂದಣ ಸಿರಿಯಲ್ಲಿ ಜಂಗಮವ ಮರೆದೆನಾಗಿ, ಅರಿದಡೀ ಸಂಸಾರವ ಹೊದ್ದಲೀವೆನೆ ಕೂಡಲಸಂಗಮದೇವಾ?

೨. ಸಂಸಾರ ಸಾಗರದ ತೆರೆ ಕೊಬ್ಬಿ, ಮುಖದ ಮೇಲೆ ಅಲೆವುತಿದ್ದುದೇ? ಸಂಸಾರ ಸಾಗರ ಉರದುದ್ದವೇ ಹೇಳಾ? ಸಂಸಾರ ಸಾಗರ ಕೊರಳುದ್ದವೇ ಹೇಳಾ? ಸಂಸಾರ ಸಾಗರ ಸಿರದುದ್ದವಾದ ಬಳಿಕ, ಏನ ಹೇಳುವೆನಯ್ಯಾ? ಅಯ್ಯಾ, ಅಯ್ಯಾ, ಎನ್ನ ಹುಯ್ಯಲ ಕೇಳಯ್ಯಾ. ಕೂಡಲಸಂಗಮದೇವಾ ನಾನೇವೆನೇವೆನಯ್ಯಾ?

೩. ಚಂದ್ರಮನಂತೆ ಕಳೆ ಸಮನಿಸಿತ್ತೆನಗೆ. ಸಂಸಾರವೆಂಬ ರಾಹು ಸರ್ವಗ್ರಾಸಿಯಾಗಿ ನುಂಗಿತ್ತಯ್ಯಾ. ಇಂದೆನ್ನದೇಹಕ್ಕೆ ಗ್ರಹಣವಾಯಿತ್ತು. ಇನ್ನೆಂದಿಂಗೆ ಮೋಕ್ಷವಹುದೋ ಕೂಡಲಸಂಗಮದೇವಾ?

೪. ಇಲಿಗಡಹನೊಡ್ಡಿದಲ್ಲಿ ಇರ್ಪಂತೆ, ಎನ್ನ ಸಂಸಾರ ಕೆಡುವನ್ನಕ್ಕ ಮಾಣದು. ಹೆರರ ಬಾಧಿಸುವದನು ತನು ಕೆಡುವನ್ನಕ್ಕ ಮಾಣದು. ಹೆರರ ಛಿದ್ರಿಸುವದನು ತನು ಕೆಡುವನ್ನಕ್ಕ ಮಾಣದು. ಅಕಟಕಟ, ಸಂಸಾರಕ್ಕೆ ಆಸತ್ತೆ, ಕೂಡಲಸಂಗಮದೇವಾ.

೫. ಕಪ್ಪೆ ಸರ್ಪನ ನೆಳಲಲ್ಲಿ ಇಪ್ಪಂತೆ ಎನಗಾಯಿತ್ತಯ್ಯಾ! ಅಕಟಕಟ, ಸಂಸಾರ ವೃಥಾ ಹೋಯಿತ್ತಲ್ಲಾ! ಕರ್ತುವೇ ಕೂಡಲಸಂಗಮದೇವಾ, ಇವ ತಪ್ಪಿಸಿ, ಎನ್ನನವ ರಕ್ಷಿಸಯ್ಯಾ.

೬. ಶೂಲದ ಮೇಲಣ ವಿಭೋಗವೇನಾದರೇನೋ. ನಾನಾವರ್ಣದ ಸಂಸಾರ ಹಾವಹಾವಡಿಗನ ಸ್ನೇಹದಂತೆ. ತನ್ನಾತ್ಮ ತನಗೆ ಹಗೆಯಾದಬಳಿಕ, ಬಿನ್ನಾಣ ಉಂಟೇ, ಮಹಾದಾನಿ ಕೂಡಲಸಂಗಮದೇವಾ?

೭. ಸಂಸಾರವೆಂಬ ಬಲೆಯಲ್ಲಿ ಸಿಲುಕಿದೆನಯ್ಯಾ! ಎನ್ನವನು ಕಾಯಯ್ಯಾ, ಕಾಯಯ್ಯಾ. ಹುರುಳಿಲ್ಲ, ಹುರುಳಿಲ್ಲ. ಕೂಡಲಸಂಗಮದೇವಾ, ಶಿವಧೋ ಶಿವಧೋ.

೮. ನಾನೊಂದ ನೆನೆದರೆ, ತಾನೊಂದ ನೆನೆವುದು. ನಾನಿತ್ತಲೆಳೆದರೆ, ತಾನತ್ತಲೆಳೆವುದು. ತಾ ಬೇರೆ ಎನ್ನನಳಲಿಸಿ ಕಾಡಿತ್ತು. ತಾ ಬೇರೆ ಎನ್ನಬಳಲಿಸಿ ಕಾಡಿತ್ತು. ಕೂಡಲಸಂಗನ ಕೂಡಿಹೆನೆಂದರೆ ತಾನೆನ್ನ ಮುಂದುಗೆಡಿಸಿತ್ತು ಮಾಯೆ.

೯. ಜನಿತಕ್ಕೆ ತಾಯಾಗಿ, ಹೆತ್ತಳು ಮಾಯೆ. ಮೋಹಕ್ಕೆ ಮಗುವಾಗಿ ಹುಟ್ಟಿದಳು ಮಾಯೆ. ಕೂಟಕ್ಕೆ ಸ್ತ್ರೀಯಾಗಿ ಕೂಡಿದಳು

ಮಾಯೆ. ಇದಾವ ಪರಿಯಲ್ಲಿ ಕಾಡಿಹಿತು ಮಾಯೆ! ಈ ಮಾಯೆಯ ಕಳೆವರೆ ಎನ್ನಳವಲ್ಲ. ನೀವೇ ಬಲ್ಲಿರಿ, ಕೂಡಲಸಂಗಮದೇವಾ.

೧೦. ಕೊಡೆವಿಡಿಯೆ ಕುದುರೆಯ ದೃಢವುಳ್ಳ ರಾವುತನೇರಿ, ಕೊಡೆಕೋಟಿ ಶೂರರು ಹನ್ನಿಬ್ಬರಯ್ಯಾ! ಚಂದ್ರಕಾಂತದ ಗಿರಿಯ ಬಂದು ಗಜ ಮೂದಲಿಸಿ, ಅರಿದು ಕೊಲ್ಲುವರೆ, ರಿಪುಗಳ ಕಲಿತನವ ನೋಡಾ. ಆವಗೆಯಲೊದವಿದ ಪುಥ್ಥಳಿಯ ರೂಹಿನಂತೆ ಆಯಿತ್ತು, ಕೂಡಲಸಂಗಮದೇವಾ ನಿಮ್ಮ ಹೆಸರಿಲ್ಲದ ಹೆಸರು.

೧೧. ಇಂದಿಂಗೆಂತು, ನಾಳಿಂಗೆಂತು ಎಂದು ಬೆಂದೊಡಲ ಹೊರೆಯ ಹೋಯಿತ್ತೆನ್ನ ಸಂಸಾರ. ಹಿಂದೆ ನಾನಾ ಯೋನಿಯಲ್ಲಿ ಬಂದೆನೆಂಬ ಹೇಯವಿಲ್ಲ. ಮುಂದೆ ಮುಕ್ತಿಯಾಗಬೇಕೆಂಬ ಯುಕ್ತಿ ಇಲ್ಲ. ಎಂದೆಂದು ಸದಾಶಿವನ ಕುಂದದೆ ನೆನೆಯಲೀಯ್ಯದೆ, ಕೊಂದುದಯ್ಯಾ ಈ ಮಾಯೆ ಕೂಡಲಸಂಗಮದೇವಾ.

೧೨. ದಿಟಪುಟ ಭಕುತಿ ಸಂಪುಟ ನೆಲೆಗೊಳ್ಳದಾಗಿ, ಟಂಬಕನನಾಡಿಸುತ್ತಿದ್ದಿತಯ್ಯಾ ನಿನ್ನ ಮಾಯೆ, ಟೀವಕ ಟಂಬಕನ ನಾಡಿಸುತ್ತಿದ್ದಿತಯ್ಯ ನಿನ್ನ ಮಾಯೆ, ಕೂಡಲಸಂಗಮದೇವಯ್ಯಾ, ಹೊನ್ನು, ಹೆಣ್ಣು, ಮಣ್ಣು, ತೋರಿ.

೧೩. ಆಸತ್ತೆನಲಿಸಿದೆನೆಂದರೆ ಮಾಣದು. ಬೇಸತ್ತೆ ಬೆಂಬಿದ್ದೆನೆಂದರೆ ಮಾಣದು. ಏನೆನೇನೆನೆಂದರೆ ಮಾಣದು. ಕಾಯದ ಕರ್ಮದ ಫಲಭೋಗವು. ಕೂಡಲಸಂಗನ ಶರಣರು ಬಂದು, ಹೋ, ಹೋ, ಅಂಜದಿರೆಂದಡಾನು ಬದುಕುವೆನು.

೧೪. ಸಂಸಾರವೆಂಬ ಸರ್ಪ ಮುಟ್ಟಲು, ಪಂಚೇಂದ್ರಿಯ ವಿಷಯವೆಂಬ ವಿಷದಿಂದ ಆನು ಮುಂದುಗೆಟ್ಟೆನಯ್ಯಾ! ಆನು ಹೊರಳಿ ಬೀಳುತ್ತಿದ್ದೆನಯ್ಯಾ! "ಓಂ ನಮಃ ಶಿವಾಯ" ಎಂಬ ಮಂತ್ರವ ಜಪಿಸುತ್ತಿದ್ದೆನಯ್ಯಾ ಕೂಡಲಸಂಗಮದೇವಾ.

೧೫. ಅರಿಯದೆ ಜನನಿಯ ಜಠರದಲ್ಲಿ ಬಾರದ ಭವಂಗಳಲ್ಲಿ ಬರಿಸಿದೆ ತಂದೆ. ಹುಟ್ಟಿತ್ತೆ ತಪ್ಪಾಯಿತ್ತೆ ಎಲೆ ಲಿಂಗವೇ. ಮುನ್ನ ಹುಟ್ಟಿದುದಕ್ಕೆ ಕೃಪೆಯ ಮಾಡು ಎಲೆ ಲಿಂಗವೇ. ಇನ್ನು ಹುಟ್ಟಿದರೆ, ಕೂಡಲಸಂಗಮದೇವ ನಿಮ್ಮಾಣೆ.

೧೬. ಎಂದೋ ಸಂಸಾರದ ದಂದುಗ ಹಿಂಗುವದು. ಎಂದೋ ಮನದಲ್ಲಿ ಪರಿಣಾಮವಹುದೆನಗೆಂದೋ, ಎಂದೋ, ಕೂಡಲಸಂಗಮದೇವಾ ಇನ್ನೆಂದೋ, ಪರಮ ಸಂತೋಷದಲ್ಲಿಹುದೆನಗೆಂದೋ.

೧೭. ಲೇಸ ಕಂಡು, ಮನ ಬಯಸಿ ಬಯಸಿ, ಆಸೆ ಮಾಡಿದಡಿಲ್ಲ, ಕಂಡಯ್ಯಾ. ತಾಳ ಮರಕ್ಕೆ ಕೈಯ್ಯ ನೀಡಿ, ಮೇಲೆ ನೋಡಿ ಗೋಣು ನೊಂದುದಯ್ಯ. ಕೂಡಲಸಂಗಮದೇವ ಕೇಳಯ್ಯಾ, ನೀನೀವ ಕಾಲಕ್ಕಲ್ಲದಿಲ್ಲ ಕಂಡಯ್ಯಾ.

೧೮. ಮುನ್ನ ಮಾಡಿದ ಪಾಪ ಬೆನ್ನ ಬಿಡದನ್ನಕ್ಕ, ಇನ್ನು ಬಯಸಿದರುಂಟೆ? ಭಕ್ತಿಯುಳ್ಳವರ ನೋಡಿ ನೋಢಿ ಬಯಸಿದರುಂಟೆ, ಕೂಡಲಸಂಗಮದೇವರಲ್ಲಿ ಮುನ್ನ ವರವ ಹಡೆಯದನ್ನಕ್ಕ?

೧೯. ಚಂದ್ರೋದಯಕ್ಕೆ ಅಂಬುಧಿ ಹೆಚ್ಚುವದಯ್ಯಾ! ಚಂದ್ರ ಕುಂದೆ, ಕುಂದುವುದಯ್ಯಾ! ಚಂದ್ರಂಗೆ ರಾಹು ಅಡ್ಡಬಂದಲ್ಲಿ, ಅಂಬುಧಿ ಬೊಬ್ಬಿಟ್ಟಿತ್ತೆ? ಅಂಬುಧಿಯ ಮುನಿ ಆಪೋಷಣವ ಕೊಂಬಲ್ಲಿ, ಚಂದ್ರ ಮನಡ್ಡ ಬಂದನೆ? ಆರಿಗಾರು ಇಲ್ಲ, ಕೆಟ್ಟವಂಗೆ ಕೆಳೆ ಇಲ್ಲ. ಜಗದ ನಂಟ ನೀನೇ ಅಯ್ಯಾ ಕೂಡಲಸಂಗಮದೇವಾ.

೨೦. ಒಲೆ ಹತ್ತಿ ಉರಿದಡೆ, ನಿಲ್ಲಬಹುದಲ್ಲದೆ, ಧರೆ ಹತ್ತಿ ಉರಿದಡೆ ನಿಲ್ಲಬಹುದೇ? ಏರಿ ನೀರುಂಬಡೆ, ಬೇಲಿ ಕೆಯಿ ಮೇವಡೆ, ನಾರಿ ತನ್ನ ಮನೆಯಲ್ಲಿ ಕಳವಡೆ, ತಾಯಿ ಮೊಲೆವಾಲು, ನಂಜಾಗಿ ಕೊಲುವಡೆ, ಇನ್ನಾರಿಗೆ ದೂರುವೆ ಕೂಡಲಸಂಗಮದೇವಾ?

೨೧. ಎನ್ನ ಗುಣ ಅವಗುಣವ ಸಂಪಾದಿಸುವೆ ಅಯ್ಯಾ! ಪ್ರತಿಯೇ ಅಪ್ರತಿಮ ಮಹಿಮ, ನಿಮಗಾನುಪ್ರತಿಯೇ? ಕೂಡಲಸಂಗಮದೇವಾ, ನೀವು ಮಾಡಲಾನಾದೆನು.

೨೨. ಬೆದಕದಿರು, ಬೆದಕದಿರು. ಬೆದಕಿದರೆ ಹುರುಳಿಲ್ಲ. ಚಿತ್ತರಟ್ಟೆಯ ಕಾಯಲ್ಲಿ ಮತ್ತೇನನರಸುವಿರಯ್ಯಾ? ನಿಮ್ಮ ಉತ್ತಮಿಕೆಯ ಪೂರೈಸುವುದು ಕೂಡಲಸಂಗಮದೇವಾ.

೨೩. ಎನ್ನ ಚಿತ್ತವು ಅತ್ತಿಯ ಹಣ್ಣು ನೋಡಯ್ಯಾ! ವಿಚಾರಿಸಿದರೆ ಏನು ಹುರುಳಿಲ್ಲವಯ್ಯಾ! ಪ್ರಪಂಚಿನ ಡಂಭಿನಲ್ಲಿ ಎನ್ನನೊಂದು ರೂಪು ಮಾಡಿ, ನೀವಿರಿಸಿದಿರಯ್ಯಾ ಕೂಡಲಸಂಗಮದೇವಾ.

೨೪. ಎನ್ನ ನಡೆಯೊಂದು ಪರಿ, ಎನ್ನ ನುಡಿಯೊಂದು ಪರಿ. ಎನ್ನೊಳಗೇನು ಶುದ್ಧವಿಲ್ಲ, ನೋಡಯ್ಯಾ! ನುಡಿಗೆ ತಕ್ಕ ನಡೆಯ ಕಂಡರೆ, ಕೂಡಲಸಂಗಮದೇವನೊಳಗಿಪ್ಪ ನೋಡಯ್ಯಾ.

೨೫. ಮುಂಗಯ್ಯ ಕಂಕಣಕೆ ಕನ್ನಡಿಯ ತೋರುವಂತೆ, ಎನ್ನ ಮನವು ನಿಧಾನವನೊಲ್ಲದೆ ಜಲಗರವ ಮಚ್ಚಿತ್ತು ನೋಡಾ. ನಾಯಿಗೆ ನಾರಿವಾಣವಕ್ಕುಡೇ ಕೂಡಲಸಂಗಮದೇವಾ?

೨೬. ಕೊಂಬೆಯ ಮೇಲಣ ಮರ್ಕಟನಂತೆ, ಲಂಘಿಸುವುದೆನ್ನ ಮನವು. ನಿಂದಲ್ಲಿ ನಿಲ್ಲಲೀಯದೆನ್ನ ಮನವು. ಹೊಂದಿದಲ್ಲಿ ಹೊಂದಲೀಯದೆನ್ನ ಮನವು. ಕೂಡಲಸಂಗಮದೇವಾ ನಿಮ್ಮ ಚರಣಕಮಲದಲ್ಲಿ ಭ್ರಮರನಾಗಿರಿಸು ನಿಮ್ಮ ಧರ್ಮ.

೨೭. ಮರನನೇರಿದ ಮರ್ಕಟನಂತೆ ಹಲವು ಕೊಂಬಿಂಗೆ ಹಾಯುತ್ತಲಿದ್ದೇನೆ. ಬೆಂದ ಮನವ ನಾನೆಂತು ನಂಬುವೆನಯ್ಯಾ! ಎಂತು ನೆಚ್ಚುವೆನಯ್ಯಾ! ಎನ್ನ ತಂದೆ ಕೂಡಲಸಂಗಮದೇವನಲ್ಲಿಗೆ ಹೋಗಲೀಯದಯ್ಯಾ.

೨೮. ಅಂದಣವನೇರಿದ ಸೊಣಗನಂತೆ, ಕಂಡಡೆ ಬಿಡದು, ಮುನ್ನಿನ ಸ್ವಭಾವವನು. ಸುಡು, ಸುಡು, ಮನವಿದು ವಿಷಯಕ್ಕೆ ಹರಿವುದು. ವೃಥ, ನಿಮ್ಮನನುದಿನ ನೆನೆಯಲೀಯದು. ಎನ್ನೊಡೆಯ ಕೂಡಲಸಂಗಮದೇವಾ, ನಿಮ್ಮ ಚರಣವ ನೆನೆವಂತೆ ಕರುಣಿಸು. ಸೆರೆಗೊಡ್ಡಿ ಬೇಡುವೆ ನಿಮ್ಮ ಧರ್ಮ.

೨೯. ತುಪ್ಪದ ಸವಿಗೆ ಅಲಗ ನೆಕ್ಕುವ ಸೊಣಗನಂತೆ ಎನ್ನ ಬಾಳುವೆ. ಸಂಸಾರಸಂಗವ ಬಿಡದು ನೋಡೆನ್ನ ಮನವು. ಈ ನಾಯಿತನವ ಮಾಣಿಸು, ಕೂಡಲಸಂಗಮದೇವ ನಿಮ್ಮ ಧರ್ಮ.

೩೦. ಒಂದು ಮೊಲಕ್ಕೆ ನಾಯನೊಂಬತ್ತ ಬಿಟ್ಟಂತೆ, ಎನ್ನ ಬಿಡು ತನ್ನಬಿಡೆಂಬುದು ಕಾಯವಿಕಾರ. ಎನ್ನಬಿಡು, ತನ್ನ ಬಿಡೆಂಬುದು ಮನವಿಕಾರ. ಕರಣೇಂದ್ರಿಯಂಗಳೆಂಬ ಸೊಣಗ ಮುಟ್ಟದ ಮುನ್ನ, ಮನ ನಿಮ್ಮನೈದುಗೆ, ಕೂಡಲಸಂಗಮದೇವಾ.

೩೧. ದಂದುಗ ಬಿಡದು, ಮನದ ಸಂದೇಹ ಹಿಂಗದಾಗಿ. ಮುನ್ನ ಲಿಂಗವ ಕಂಡೆನೆಂಬುದು, ಹುಸಿ ನೋಡಾ! ಬೆಂದ ಕರಣಾದಿಗಳು

ಒಂದು ಪಥವನರಿಯವು. ಎಂತು ಶಿವಪಥವೆನಗೆ ಸಾಧ್ಯವಪ್ಪುದಯ್ಯಾ! ಎನ್ನ ತಂದೆ ಕೂಡಲಸಂಗಮದೇವಾ, ನಿಮ್ಮ ಶರಣರ ಬಳಿವಿಡಿದರೆ, ಎನ್ನ ದಂದುಗ ಹಿಂಗುವದು.

೩೨. ತನ್ನ ವಿಚಾರಿಸಲೊಲ್ಲದು, ಇದಿರ ವಿಚಾರಿಸ ಹೋಹುದೀ ಮನವು. ಏನ ಮಾಡುವೆನೀಮನವನು, ಎಂತು ಮಾಡುವೆನೀಮನವನು, ಕೂಡಲಸಂಗಮದೇವನ ಶರಣರ ನಚ್ಚದ ಮಚ್ಚದ ಬೆಂದ ಮನವನು?

೩೩. ತನ್ನಿಚ್ಛೆಯ ನುಡಿದರೆ ಮೆಚ್ಚುವುದೀ ಮನವು. ಇದಿರಿಚ್ಛೆಯ ನುಡಿದರೆ, ಮೆಚ್ಚದೀ ಮನವು. ಕೂಡಲಸಂಗನ ಶರಣರ ನೆಚ್ಚದ ಮನವ ಕಿಚ್ಚಿನೊಳಗಿಕ್ಕು.

೩೪. ಸುಡಲೀ ಮನವೆನ್ನನುಡಹನ ಮಾಡಿತ್ತು. ನಡೆವಲ್ಲಿ ನುಡಿವಲ್ಲಿ ಅಧಿಕನೆಂದೆನಿಸಿತ್ತು. ಬೆಡಗಿನ ಕೀಲ ಕಳೆದು ಕೆಡೆವ ಬಳಿಕ, ಕಡುಗೂಪ ಮಡದಿ ತಾ ಮುಟ್ಟಲಮ್ಮಳು. ಒಡಲನುರಿ ಕೊಂಬುದು. ಒಡವೆಯನರಸು ಕೊಂಬ. ಕಡುಗೂಪ ಮಡದಿಯ ಮತ್ತೊಬ್ಬ ಚನ್ನಿಗ ಕೊಂಬ. ಮುನ್ನ ಮಾಡಿದುದು ತನ್ನ ಬೆನ್ನ ಬಿಡದನಕ್ಕ ಇನ್ನು ಮಾಡಿವರೊಳವೆ ಕೂಡಲಸಂಗಮದೇವಾ?

೩೫. ವಚನದ ಹುಸಿ ನುಸುಳೆಂತು ಮಾಬುದೆನ್ನ? ಮನದ ಮರ್ಕಟತನವೆಂತು ಮಾಬುದೆನ್ನ? ಹೃದಯ ಕಲ್ಮಷವೆಂತು ಮಾಬುದೆನ್ನ? ಕಾಯವಿಕಾರಕ್ಕೆ ತರಸಲ್ಲವೋದೆನು. ಎನಗಿದು ವಿಧಿಯೇ ಕೂಡಲಸಂಗಮದೇವಾ?

೩೬. ಅಂಗದ ನೋಟವು ಸಿಂಗರದ ಗಾತ್ರವು ಹಿಂಗದು ಮನದಲ್ಲಿ. ನಾನಾವಿಕಾರದಿ ಬೆಂದಿಹೆನೆಂದರಿಯಲಿಕ್ಕಿಲ್ಲಾಗಿ, ಸಂದೇಹ ಬಿಡದು. ಮುಂದುಗಾಣದು ಲೋಕ. ಬೆಂದ ಮಾಯಕ್ಕಂಜಿ ನಿಮ್ಮ ಮರೆವೊಕ್ಕೆ ಕೂಡಲಸಂಗಮದೇವಾ.

೩೭. ವಿಕಳನಾದೆನು ಪಂಚೇಂದ್ರಿಯ ಧಾತುವಿಂದ. ಮತಿಗೆಟ್ಟೆನು ಮನದ ವಿಕಾರದಿಂದ. ಧೃತಿಗೆಟ್ಟೆನು ಕಾಯವಿಕಾರದಿಂದ. ಶರಣುವೊಕ್ಕೆನು ಕೂಡಲಸಂಗಮದೇವಯ್ಯ.

೩೮. ಆನು ಒಬ್ಬನು, ಸುಡುವಬ್ಬೈವರು. ಮೇಲೆ ಕಿಚ್ಚು ಘನ. ನಿಲ್ಲಲು ಬಾರದು. ಕಾಡಬಸವನ ಹುಲಿ ಕೊಂಡೊಯ್ವರೆ, ಆರೈಯ್ಯ ಲಾಗದೇ ಕೂಡಲಸಂಗಮದೇವಾ?

೩೯ ಮುನಿದೆಯಾದೊಡೆ ಒಮ್ಮೆ ಜರಿದಡೆ ಸಾಲದೆ? ಅಕಟ ಕಟಾ, ಮದನಂಗೆ ಮಾರುಗುಡುವರೆ? ಹಗೆಗೆ ಮಾರುಗೊಟ್ಟ, ನಿನ್ನವ ರನೊಪ್ಪಿಸುವರೆ ಕೂಡಲಸಂಗಮದೇವ?

೪೦. ಆಸೆಯಾಮಿಷ, ತಾಮಸ, ಹುಸಿ, ವಿಷಯ, ಕುಟಿಲ, ಕುಹಕ, ಕ್ರೋಧ, ಕ್ಷುದ್ರ, ಮಿಥ್ಯೆ, ಇವನೆನ್ನ ನಾಲಿಗೆಯ ಮೇಲಿಂದತ್ತ ತೆಗೆದು ಕಳೆಯಯ್ಯಾ. ಅದೆಂತೆಂದೊಡೆ, ನಿಮ್ಮತ್ತಲೆನ್ನ ಬರಲೀಯವು. ಇದು ಕಾರಣ ಇವೆಲ್ಲವ ಕಳೆದು, ಎನ್ನ ಪಂಚೈವರ ಭಕ್ತರ ಮಾಡು ಕೂಡ ಲಸಂಗಮದೇವಾ.

೪೧. ಎಂತು ಶಿವಭಕ್ತಿಯ ನಾನುಪಮಿಸುವೆನಯ್ಯ! ಎಂತು ಶಿವಾಚಾರವೆನಗೆ ಸಾಧ್ಯವಪ್ಪುದಯ್ಯ! ಕಾಮ, ಕ್ರೋಧ, ಲೋಭ, ಮೋಹ ಮದ ಮತ್ಸರಂಗಳಿಂದ ಕಟ್ಟುವಡೆದೆನು. ಹಸಿವು, ತೃಷೆ, ವ್ಯಸನಗಳಿಂದ ಕುದಿವುತಿದ್ದೇನೆ. ಪಂಚೇಂದ್ರಿಯ ಸಪ್ತಧಾತು ಹಂಚು ಹುರಿ ಮಾಡಿ ಕಾಡಿಹವಯ್ಯ. ಅಯ್ಯಾ ಅಯ್ಯಾ ಎನ್ನ ಹುಯ್ಯಲ ಕೇಳಯ್ಯ ಕೂಡಲಸಂಗಮದೇವಾ ನಾನೇವೆನೇವೆನಯ್ಯ?

೪೨. ಕಾಯ ವಿಕಾರ ಕಾಡಿಹದಯ್ಯಾ! ಮನ ವಿಕಾರ ಕೂಡಿಹು ದಯ್ಯಾ! ಇಂದ್ರಿಯ ವಿಕಾರ ಸುಳಿವುದಯ್ಯಾ! ಸುಳಿವಿನೊಳಗೆ ಸುಳಿವುತ್ತ ಲಿದ್ದೇನೆ. ಸಿಲುಕಿಸದಿರಯ್ಯಾ! ಅನ್ಯ ಚಿತ್ತವಿರಿಸದಿರಯ್ಯಾ ನಿಮ್ಮ ಚಿತ್ತ ವಿರಿಸಯ್ಯ. ಅನುಪಮ ಸುಖ ಸಾರಾಯ ಶರಣರಲ್ಲಿ ಕೂಡಲಸಂಗಮದೇ ವಯ್ಯ ಇದನೆ ಬೇಡುವೆನಯ್ಯಾ.

೪೩. ಬಂದ ಯೋನಿಯನರಿದು ಸಲಹೆನ್ನ ತಂದೆ. ಬೆಂದ ಮನ ವೆನ್ನ ಗತಿಗೆಡಿಸಿ ಕಾಡಿತ್ತು. ಬೆಂದ ಮನವೆನ್ನ ಮತಿಗೆಡಿಸಿ ಕಾಡಿತ್ತು. ಎನ್ನ ತಂದೆ, ಕೂಡಲಸಂಗಮದೇವ ಮಾಣಿಸು ನಿಮ್ಮ ಧರ್ಮ.

೪೪. ಬೆಳೆ ಭೂಮಿಯಲೊಂದು ಪ್ರಳಯದ ಕಸ ಹುಟ್ಟಿ, ತಿಳಿಯ ಲೀಯ್ಯದು, ಎಚ್ಚರಲೀಯ್ಯದು. ಎನ್ನವಗುಣವೆಂಬ ಕಸವ ಕಿತ್ತು, ಸಲ ಹಯ್ಯ ಲಿಂಗತಂಡೆ. ಸುಳಿವೆಗೆದು ಬೆಳೆವೆನು, ಕೂಡಲಸಂಗಮದೇವಾ.

೪೫. ವಿಷಯವೆಂಬ ಪಸರನೆನ್ನ ಮುಂದೆ ತಂದು ಪಸರಿಸಿದೆ
ಯಯ್ಯಾ! ಪಶುವೇನ ಬಲ್ಲುದು, ಹಸುರೆಂದೆಳಸುವುದು. ವಿಷಯ ರಹಿತನ
ಮಾಡಿ, ಭಕ್ತಿರಸವ ದಣಿಯ ಮೇಯಿಸಿ, ಸುಬುದ್ಧಿ ಎಂಬ ಉದಕವನೆ
ರೆದು, ನೋಡಿ ಸಲಹಯ್ಯ, ಕೂಡಲಸಂಗಮದೇವಾ.

೪೬. ಕೆಸರಲ್ಲಿ ಬಿದ್ದ ಪಶುವಿನಂತೆ, ಆಸು ದೆಸೆದೆಸೆಗೆ ಬಾಯಬಿ
ಡುತಿದ್ದೆನಯ್ಯಾ! ಅಯ್ಯಾ ಆನ್ಯೈವರಿಲ್ಲ, ಅಕಟಕಟಾ! ಪಶುವೆಂದೆನ್ನ
ಕೂಡಲಸಂಗಮದೇವ ಕೊಂಬ ಹಿಡಿದೆತ್ತುವನ್ನಕ್ಕ.

೪೭. ಬಡ ಪಶು ಪಂಕದಲ್ಲಿ ಬಿದ್ದರೆ, ಕಾಲ ಬಡಿವುದಲ್ಲದೆ, ಬೇರೆ
ಗತಿಯುಂಟೇ? ಶಿವ, ಶಿವಾ! ಹೋದೆಹೆ ಹೋದೆಹೆನಯ್ಯಾ! ನಿಮ್ಮ
ಮನವತ್ತಲೆನ್ನ ತೆಗೆಯಯ್ಯ. ಪಶುವಾನು, ಪಶುಪತಿ ನೀನು. ತುಡು
ಗುಣಿ ಎಂದು ಎನ್ನ ಹಿಡಿದು ಬಡಿಯದ ಮುನ್ನ, ಒಡೆಯ, ನಿಮ್ಮ
ಬಯ್ಯದಂತೆ ಮಾಡು, ಕೂಡಲಸಂಗಮದೇವಾ.

೪೮. ಅಡವಿಯೊಳಗೆ ಹೊಲಬುಗೆಟ್ಟ ಪಶುವಿನಂತೆ, ಅಂಬಾ,
ಅಂಬಾ, ಎಂದು ಕರೆವುತ್ತಲಿದ್ದೇನೆ. ಅಂಬಾ, ಅಂಬಾ ಎಂದು ಒರ
ಲುತ್ತಲಿದ್ದೇನೆ. ಕೂಡಲಸಂಗಮದೇವಾ! ಬಾಳು ಬಾಳೆಂಬನ್ನಕ್ಕರ.

೪೯. ಸಮುದ್ರದೊಳಗಣ ಸಿಂಪಿನಂತೆ, ಬಾಯ ಬಿಡುತ್ತಿದ್ದೆ
ನಯ್ಯಾ! ನೀವಲ್ಲದೆ ಮತ್ತಾರೂ ಎನ್ನನರಿವರಿಲ್ಲ ನೋಡಯ್ಯ. ಕೂಡ
ಲಸಂಗಮದೇವಾ, ನೀನಲ್ಲದೊಳಕೊಂಬುವರಿಲ್ಲ ನೋಡಯ್ಯ.

೫೦. ಅಯ್ಯಾ! ಅಯ್ಯಾ! ಎಂದು ಕರೆವುತ್ತಲಿದ್ದೇನೆ. ಆಯ್ಯಾ,
ಅಯ್ಯಾ ಎಂದು ಒರಲುತ್ತಲಿದ್ದೇನೆ. ಓ ಎನ್ನಲಾಗದೆ ಅಯ್ಯಾ! ಆವಾ
ಗಳೂ ನಿಮ್ಮುವ ಕರೆವುತ್ತಲಿದ್ದೇನೆ. ಓ ಎನ್ನದೆ ಮೌನವೇ ಕೂಡಲ
ಸಂಗಮದೇವಾ?

೫೧. ನೀವು ಹುಟ್ಟಿಸಿದಲ್ಲಿ ಹುಟ್ಟಿ ನೀ ಕೊಂದಲ್ಲಿ ಸಾಯದೆ,
ಎನ್ನ ವಶವೇ ಅಯ್ಯ! ನೀವಿರಿಸಿವಲ್ಲಿ ಇರದೆ, ಎನ್ನ ವಶವೇ ಆಯ್ಯಾ?
ಅಕಟಕಟಾ, ಎನ್ನವನೆನ್ನವನೆನ್ನಯ್ಯಾ ಕೂಡಲಸಂಗಮದೇವಯ್ಯ.

೫೨. ನರವಿಂಧ್ಯದೊಳಗೆನ್ನ ಹುಲುಗಿಳಿಯ ಮಾಡಿ ಸಲುಹುತ್ತ,
ಶಿವ ಶಿವಾ ಎಂದೋದಿಸಯ್ಯ. ಭಕ್ತಿ ಎಂಬ ಪಂಜರದೊಳಗಿಕ್ಕಿ ಸಲುಹು,
ಕೂಡಲಸಂಗಮದೇವಾ.

೫೩. ಅತ್ತಲಿತ್ತ ಹೋಗದಂತೆ ಹೆಳವನ ಮಾಡಯ್ಯಾ ತಂದೆ! ಸುತ್ತಿ ಸುಳಿದು ನೋಡದಂತೆ ಅಂಧಕನ ಮಾಡಯ್ಯಾ ತಂದೆ. ಮತ್ತೊಂದ ಕೇಳದಂತೆ, ಕಿವುಡನ ಮಾಡಯ್ಯಾ ತಂದೆ. ನಿಮ್ಮ ಶರಣರ ಪಾದವಲ್ಲದೆ ಅನ್ಯ ವಿಷಯಕ್ಕೆಳಿಸದಂತೆ ಇರಿಸು ಕೂಡಲಸಂಗಮದೇವಾ.

೫೪. ಎನ್ನ ವಾಮ ಕ್ಷೇಮ ನಿಮ್ಮದಯ್ಯಾ! ಎನ್ನ ಹಾನಿ ವೃದ್ಧಿ ನಿಮ್ಮದಯ್ಯಾ! ಎನ್ನ ಮಾನಾಪಮಾನವು ನಿಮ್ಮನಯ್ಯಾ! ಬಳ್ಳಿಗೆ ಕಾಯಿ ದಿಮ್ಮಿತ್ತೆ ಕೂಡಲಸಂಗಮದೇವಾ?

೫೫. ಸಟೆ ಇಲ್ಲದಂತೆ, ಪ್ರಪಂಚುವಿಲ್ಲದಂತೆ, ವೈಶಿಕವಿಲ್ಲದಂತೆ, ನಡಿಸಯ್ಯಾ, ಲಿಂಗ ತಂದೆ. ಒಂದು ನಿಮಿಷವಾದರೆಯು, ನಿಮ್ಮ ಶರಣರ ಸಂಗದಲ್ಲಿರಿಸಯ್ಯಾ. ಬೇರೆ ಮತ್ತೆ ಅನ್ಯವ ತೋರದಿರಯ್ಯಾ! ಹೊಲಬುಗೆಟ್ಟೆನಯ್ಯಾ ಕೂಡಲಸಂಗಮದೇವಾ.

೫೬. ಇವನಾರವನಿವನಾರವ ಇವನಾರವನೆಂದೆನಿಸದಿರಯ್ಯಾ! ಇವ ನಮ್ಮವ ಇವ ನಮ್ಮವನೆಂದೆನಿಸಯ್ಯಾ! ಕೂಡಲಸಂಗಮದೇವ ನಿಮ್ಮ ಮನೆಯ ಮಗನೆಂದೆನಿಸಯ್ಯಾ.

೫೭. ಹುಟ್ಟಿಂದು ಲೋಕದಲ್ಲಿ ಹುಟ್ಟಿಸಿ ಇಳಿಯ ಬಿಟ್ಟರೆ, ನಿಮ್ಮ ನಗುವರಯ್ಯಾ. ಶಿವಬಟ್ಟೆಯಲೆನ್ನನು ಇರಿಸಯ್ಯಾ. ಹರನೇ, ಹೊಲಬುಗೆಟ್ಟೆನು. ಬಟ್ಟೆಯ ತೋರಯ್ಯ. ಹುಯ್ಯಲಿಟ್ಟೆನು. ಗಣಂಗಳು ಕೇಳಿರಯ್ಯ! ಕೂಡಲಸಂಗಮದೇವಯ್ಯ ಎನ್ನ ಕಾಡಿಹನಯ್ಯ.

೫೮. ಅಕಟಕಟ, ಶಿವ ನಿನಗಿನಿತು ಕರುಣವಿಲ್ಲ. ಅಕಟಕಟ, ಶಿವ ನಿನಗಿನಿತು ಕೃಪೆ ಇಲ್ಲ. ಏಕೆ ಹುಟ್ಟಿಸಿದೆ ಇಹಲೋಕ ದುಃಖಿಯ, ಪರಲೋಕ ದೂರನ? ಏಕೆ ಹುಟ್ಟಿಸಿದೆ ಕೂಡಲಸಂಗಮದೇವ ಕೇಳಯ್ಯಾ, ಎನಗಾಗಿ ಮತ್ತೊಂದು ತರುಮರಾದಿಗಳಿಲ್ಲವೇ?

೫೯. ನರ ಕೂರಂಬಿನಲ್ಲಿ ಎಚ್ಚವಂಗೊಲಿದೆಯಯ್ಯ! ಅರಳಂಬಿನಲ್ಲೆಚ್ಚ ಕಾಮನನುರುಹಿದೆ, ಇರುಳು ಹಗಲೆನ್ನದೆ ಪ್ರಾಣಘಾತಕವ ಮಾಡುವ ಬೇಡನ ಕೈಲಾಸಕೊಯ್ದೆಯಯ್ಯಾ! ಎನ್ನನೇತಕ್ಕೊಲ್ಲೆ ಕೂಡಲಸಂಗಮದೇವಾ?

೬೦. ನೀನೊಲಿದರೆ, ಕೊರಡು ಕೊನರುವದಯ್ಯಾ! ನೀನೊಲಿದರೆ ಬರಡು ಹಯನಹುದಯ್ಯಾ! ನೀನೊಲಿದರೆ ವಿಷವೆಲ್ಲ ಅಮೃತವ

ಹುದಯ್ಯ! ನೀನೊಲಿದರೆ, ಸಕಲ ಪಡಿ ಪದಾರ್ಥ ಇದಿರಲ್ಲಿಪ್ಪುವು, ಕೂಡಲಸಂಗಮದೇವಾ.

೬೧. ಮೇರು ಗುಣವನರಸುವುದೇ ಕಾಗೆಯಲ್ಲಿ? ಪರುಷ ಗುಣವನರಸುವುದೆ ಕಬ್ಬುನವಲ್ಲಿ? ಸಾಧು ಗುಣವನರಸುವುದೇ ಅವಗುಣಿಯಲ್ಲಿ? ಚಂದನ ಗುಣವನರಸುವವೆ ತರುಗಳಲ್ಲಿ? ಸರ್ವ ಗುಣ ಸಂಪನ್ನ ಲಿಂಗವೇ, ನೀನೆನ್ನಲ್ಲಿ ಅವಗುಣವ ನರಸುವುದೇ ಕೂಡಲಸಂಗಮದೇವಾ?

೬೨. ಭವಭವದಲ್ಲಿ ಎನ್ನ ಮನವು ನೀವಲ್ಲದೆ, ಭವಭವದಲೆನ್ನ ಮನವು ಸಿಲುಕದೆ ಭವಸಾಟಣದೊಳು ತುಂಬದೆ ಕೆಡಹದೆ, ಭವರೋಗ ವೈದ್ಯ ನೀನು, ಭವ ರಹಿತ ನೀನು, ಅವಧಾರು ಕರುಣಿಸುವುದು ಕೂಡಲಸಂಗಮದೇವಾ.

೬೩. ಆಶೆ ಎಂಬ ಪಾಶದಲ್ಲಿ ಭವ ಬಂಧನವಾಗಿರ್ದೆನಯ್ಯಾ! ಸಕೃತು ನಿಮ್ಮ ನೆನೆಯಲು, ಎನಗೆ ತೆರಹಿಲ್ಲವಯ್ಯ! ಕರುಣಾಕರ ಅಭಯಾಕರ ವರದಾನಿ ಕರುಣಿಸಯ್ಯ! ಸಂಸಾರ ಬಂಧನವನು ಮಾಣಿಸಿ ಎನಗೆ ಕೃಪೆ ಮಾಡಿ, ನಿಮ್ಮ ಶ್ರೀಪಾದ ಪದ್ಮದಲ್ಲಿ ಭ್ರಮರನಾಗಿರಿಸು, ಭಕ್ತಜನ ಮನೋವಲ್ಲಭ ಕೂಡಲಸಂಗಮದೇವಾ.

## ಗುರುಕರುಣಸ್ಥಲ.

೧. ಮಡಕೆಯ ಮಾಡುವರೆ ಮಣ್ಣೇ ಮೊದಲು, ತೊಡಿಗೆಯ ಮಾಡುವರೆ, ಹೊನ್ನೇ ಮೊದಲು, ಶಿವಪಥವನರಿವಡೆ ಗುರುಪಥವೇ ಮೊದಲು, ಕೂಡಲಸಂಗಮದೇವರನರಿವಡೆ, ಶರಣರ ಸಂಗವೇ ಮೊದಲು.

೨. ನೋಡಿ, ನೋಡಿ, ಮಾಡುವ ನೇಮ ಸಲ್ಲವು ಸಲ್ಲವು. ತನು ಉದ್ದೇಶ ಮನ ಉದ್ದೇಶವಾಗಿ ಮಾಡುವ ನೇಮ ಸಲ್ಲವು ಸಲ್ಲವು. ಗುರು ಪಥವ ಮೀರಿ ಮಾಡುವ ನೇಮ ಸಲ್ಲವು, ಸಲ್ಲವು. ಕೂಡಲಸಂಗಮದೇವ, ಇವು ನಿಮ್ಮ ನಿಜದೊಳಗೆ ನಿಲ್ಲವು, ನಿಲ್ಲವು.

೩. ಗುರುವಚನವಲ್ಲದೆ ಲಿಂಗವೆಂದೆನಿಸದು. ಗುರುವಚನವಲ್ಲದೆ ನಿತ್ಯವೆಂದೆನಿಸದು. ಗುರುವಚನವಲ್ಲದೆ ನೇಮವೆಂದೆನಿಸದು. ತಳೆ ಇಲ್ಲದಟ್ಟಿಗೆ ಪಟ್ಟವ ಕಟ್ಟುವ ಉಭಯಭ್ರಷ್ಟರ ಮೆಚ್ಚುವನೇ ನಮ್ಮ ಕೂಡಲಸಂಗಮದೇವಾ?

## ವಿಭೂತಿಯ ಸ್ಥಲ.

೧. ಮುನ್ನ ಮಾಡಿದ ಪಾಪನೆಂತು ಹೋಹುದೆಂದು ಚಿಂತಿಸಬೇಡ. ಕಹಿಸೋರೆಯ ಕಾಯ ತಂದು, ವಿಭೂತಿಯ ತುಂಬಿದರೆ ಸಿಹಿಯಾಗದೇ ಮೂರು ದಿವಸಕ್ಕಯ್ಯ! ಹಲವು ಕಾಲ ಕೊಂದ ಸೂನೆಗಾರನ ಕತ್ತಿಯಾದ ರೇನು? ಪರುಷ ಮುಟ್ಟಲಿಕ್ಕೆ ಹೊನ್ನಾಗದೇ ಅಯ್ಯಾ! ಲಲಾಟದಲ್ಲಿ ವಿಭೂತಿಯ ಬರೆಯಲಿಕ್ಕೆ, ಪಾಪ ಪಲ್ಲಟವಾಗದೆ ಕೂಡಲಸಂಗಮದೇವಾ?

೨. ನೀರಿಂಗೆ ನೈದಿಲೆ ಶೃಂಗಾರ, ಸಮುದ್ರಕ್ಕೆ ತೆರೆಯೇ ಶೃಂಗಾರ, ನಾರಿಗೆ ಗುಣವೇ ಶೃಂಗಾರ, ಗಗನಕ್ಕೆ ಚಂದ್ರಮನೇ ಶೃಂಗಾರ, ನಮ್ಮ ಕೂಡಲಸಂಗನ ಶರಣರಿಗೆ ನೊಸಲ ವಿಭೂತಿಯೇ ಶೃಂಗಾರ.

## ಪಂಚಾಕ್ಷರಿಯ ಸ್ಥಲ.

೧. ಕರಿಯಂಜುವುದು ಅಂಕುಶಕಯ್ಯ! ಗಿರಿಯಂಜುವುದು ಕುಲಿಶಕ್ಕಯ್ಯಾ! ತಮಂಧವಂಜುವದು ಜ್ಯೋತಿಗಯ್ಯ! ಕಾನನವಂಜುವುದು ಬೇಗೆಗಯ್ಯಾ! ಪಂಚಮಹಾ ಪಾತಕವಂಜುವದು ಕೂಡಲಸಂಗನ ನಾಮಕ್ಕಯ್ಯಾ.

೨. ಜಪ ತಪ ನಿತ್ಯ ನೇಮವೆನಗುಪದೇಶ. ನಿಮ್ಮ ನಾಮವೆನಗೆ ಮಂತ್ರ, ಶಿವನ ನಾಮವೆನಗೆ ತಂತ್ರ, ಕೂಡಲಸಂಗಮದೇವಯ್ಯ ನಿಮ್ಮ ನಾಮ ಕಾಮಧೇನು ಎನಗೆ.

೩. ಅಕಟಕಟಾ! ಬೆಡಗು ಬಿನ್ನಾಣವೆಂಬುದೇನೋ? ಓಂ ನಮಃ ಶಿವಾಯ ವೆಂಬುದೇ ಮಂತ್ರ, ಓಂ ನಮಃ ಶಿವಾಯ ವೆಂಬುದೇ ತಂತ್ರ, ನಮ್ಮ ಕೂಡಲಸಂಗಮದೇವರ ನೆನೆವುದೇ ಮಂತ್ರ.

೪. ವಶ್ಯವ ಬಲ್ಲೆವೆಂದೆಂಬಿರಯ್ಯಾ! ಬುದ್ಧಿಯನರಿಯದ ಮನುಜರು ಕೇಳಿರಯ್ಯ. ವಶ್ಯವಾವುದೆಂದರಿಯದೆ, ಮರುಳುಗೊಂಬಿರಲೆಗಾವಿಲ ಮನುಜರಿರಾ! ಓಂ ನಮಃ ಶಿವಾಯ ಯೆಂಬುದೇ ಮಂತ್ರ, ಸರ್ವ ಜನ ವಶ್ಯ, ಕೂಡಲಸಂಗಮದೇವಾ.

೫. ಭವಬಂಧನ ದುರಿತಂಗಳ ಗೆಲುವಡೆ, ಓಂ ನಮಶ್ಶಿವಾಯ ಶರಣೆಂಬಡೆ ಸಾಲದೆ? ಹರಹರ ಶಂಕರ, ಶಿವಶಿವ ಶಂಕರ, ಜಯಜಯ

ಶಂಕರ, ಶರಣೆನ್ನುತಿದ್ದೇನೆ, ಎನ್ನ ಪಾತಕ ಪರಿಹರ ಕೂಡಲಸಂಗಮ ದೇವ ಶರಣೆನ್ನುತಿದ್ದೇನೆ.

೬. ಎನ್ನ ಮನದಲ್ಲಿ ಮತ್ತೊಂದನರಿಯೆನಯ್ಯಾ! "ಓಂ ನಮಃ ಶಿವಾಯ" "ಓಂ ನಮಃ ಶಿವಾಯ" ಎನುತಿದ್ದೆನಯ್ಯಾ! ಎನಗಿದೇ ಮಂತ್ರ, ಎನಗಿದೇ ತಂತ್ರ, ಎನಗಿದೇ ಜಪ, ಕೂಡಲಸಂಗಮದೇವ, ನೀನೆ ಬಲ್ಲೆ, ಎಲೆ ಲಿಂಗವೇ.

೭. ಓಂ ನಮಃ ಶಿವಾಯ ಎಂಬ ಮಂತ್ರವ ಮೀರಲಮ್ಮದೆ, ನಿಂದುವು ವೇದ. ಓಂ ನಮಃ ಶಿವಾಯ ಎಂಬ ಮಂತ್ರವ ಮೀರಲಮ್ಮದೆ, ನಿಂದುವು ಶಾಸ್ತ್ರ. ಓಂ ನಮಃ ಶಿವಾಯ ಎಂಬ ಮಂತ್ರವ ಮೀರಲಮ್ಮದೆ, ನಿಂದುವು ತರ್ಕ. ಭಯಂಕರ ಭ್ರಮೆಗೊಂಡಿತ್ತು. ಮಂತ್ರ ತಂತ್ರ ಶಿವ ನಂತುವನರಿಯದೆ, ಚಿಂತಿಸುತಿದ್ದಿತ್ತು ಲೋಕ. ಕೂಡಲಸಂಗಮದೇವ, ಶ್ವಪಚ ಮೆರೆವರೆ, ಜಾತಿಭೇದವ ಮಾಡಲಮ್ಮವು.

೮. ಬಿಳಿಯ ಕರಿಕೆಯ ಕಣಗಿಲೆಲೆಯ, ತೊರೆಯ ತಡಿಯ ಮಳಲ ತಂದು, ಗೌರಿಯ ನೋನುವ ಬನ್ನಿರೆ, ಚಿಕ್ಕ ಚಿಕ್ಕ ಮಕ್ಕಳೆ ಲ್ಲರು ನೆರೆದು, ಅನುಪಮದಾನಿ ಕೂಡಲಸಂಗಮದೇವ ಗಂಡನಾಗಬೇ ಕೆಂದು.

೯. ಎಮ್ಮವರು ಬೆಸಗೊಂಡರೆ, ಶುಭ ಲಗ್ನವೆನ್ನಿರಯ್ಯ! ರಾಶಿ ಕೂಟ ರುಣ ಸಂಬಂಧ ಉಂಟೆಂದು ಹೇಳಿರಯ್ಯ! ಚಂದ್ರ ಬಲ, ತಾರಾ ಬಲ ಉಂಟೆಂದು ಹೇಳಿರಯ್ಯಾ! ನಾಳಿನ ದಿನಕಿಂದಿನ ದಿನ ಲೇಸೆಂದು ಹೇಳಿ ರಯ್ಯಾ! ಕೂಡಲಸಂಗಮದೇವನ ಪೂಜಿಸಿದ ಫಲ ನಿಮ್ಮದಯ್ಯಾ.

## ಲಿಂಗಧಾರಣ ಸ್ಥಲ.

೧. ಪಾತಕ ಕೋಟಿಯನೊರಿಸಲು, ಸಾಲದೆ ಒಂದು ಶಿವನ ನಾಮ? ಸಾಲದೆ ಒಂದು ಹರನ ನಾಮ? ಕೂಡಲಸಂಗಮದೇವ ನಿಮ್ಮ ಉಂಡಿಗೆಯ ಪಶುವ ಮಾಡಿದೆಯಾಗಿ.

೨. ಲಿಂಗದ ಉಂಡಿಗೆಯ ಪಶುವಾನಯ್ಯ! ವೇಷ ಧಾರಿಯಾನು ಉದರ ಪೋಷಕ ನಾನಯ್ಯ. ಕೂಡಲಸಂಗನ ಶರಣರ ಧರ್ಮದ ಕಿವಿ ಲೆಯಾನು.

೩. ನಮಃ ಶಿವಾಯ, ನಮಃ ಶಿವಾಯ, ನಮಃ ಶಿವಾಯ ಶರಣೆಂದಿತ್ತು. ಲಲಾಟ ಲಿಖಿತ ಬರೆದ ಬಳಿಕ ಪಲ್ಲಟವ ಮಾಡಬಾರದು. ಎನ್ನ ಉರವಲುಂಡಿಗೆ ಶಿರದಲಕ್ಷರ ಕೂಡಲಸಂಗಯ್ಯ ಶರಣೆಂದಿತ್ತು.

೪. ಅಡ್ಡ ವಿಭೂತಿ ಇಲ್ಲದವರ ಮುಖ ಹೊಲ್ಲ. ನೋಡಲಾಗದು. ಲಿಂಗ ದೇವನಿಲ್ಲದ ಠಾವು ನರವಿಂಧ್ಯ. ಹೊಗಲಾಗದು. ದೇವ ಭಕ್ತನಿಲ್ಲದೂರು ಸಿನೆ ಹಾಳು, ಕೂಡಲಸಂಗಮದೇವ.

೫. ಅಡ್ಡ ತ್ರಿಪುಂಡ್ರ ಮಣಿ ಮಕುಟದ ವೇಷದ ಶರಣರ ಕಂಡಡೆ ನಂಬುವುದೆನ್ನ ಮನವು. ನಚ್ಚುವುದೆನ್ನ ಮನವು. ಸಂದೇಹವಿಲ್ಲದೆ ಇವಿಲ್ಲದವರ ಕಂಡಡೆ ನಂಬೆ ಕೂಡಲಸಂಗಮದೇವಾ.

## ತಾಮಸ ನಿರಸನ ಸ್ಥಲ.

೧. ಆರಾಧ್ಯ ಪ್ರಾಣಲಿಂಗನೆಂದರಿದು, ಪೂರ್ವ ಗುಣವಳಿದು, ಪುನರ್ಜಾತನಾದ ಬಳಿಕ, ಸಂಸಾರ ಬಂಧುಗಳೆನ್ನವರೆಂದರೆ, ನಂಟುಭಕ್ತಿ ನಾಯಕ ನರಕ ಇಂತೆಂದುದು ಕೂಡಲಸಂಗನ ವಚನ.

೨. ತಾಳ ಮರದ ಕೆಳಗೆ ಒಂದು ಹಾಲ ಹರವಿ ಇದ್ದರೆ, ಅದ ಹಾಲ ಹರವಿ ಎನ್ನರು. ಸುರೆಯ ಹರವಿ ಎಂಬರು. ಈ ಭಾವ ನಿಂದೆಯ ಮಾಣಿಸಾ ಕೂಡಲಸಂಗಮದೇವಾ.

೩. ಸುಪಥ ಮಂತ್ರದುಪದೇಶವ ಕಲಿತು, ಯುಕ್ತಿಗೆಟ್ಟು ನಡೆವಿರಯ್ಯಾ. ತತ್ವಮಸಿ ಎಂಬುದನರಿಮು ಕತ್ತಲೆದೊಡಹಿರಯ್ಯಾ! ವೇದ ವಿಪ್ರ ವಿಚಾರಿಸಿ ನೋಡಲು, ಉಪದೇಶ ಪರೀಕ್ಷೆ ನಾಯಕ ನರಕವೆಂದುದು ಕೂಡಲಸಂಗನ ವಚನದ ಸೂಚನೆ.

೪. ಕುಂಬಳದ ಕಾಯಿಗೆ ಕಬ್ಬುನದ ಕಟ್ಟು ಕೊಟ್ಟರೆ ಕೊಳೆವುದಲ್ಲದೆ ಬಲುಹಾಗ ಬಲ್ಲುದೆ? ಅಳಿಮನದವಂಗೆ ಶಿವದೀಕ್ಷೆಯ ಕೊಟ್ಟರೆ, ಭಕ್ತಿ ಎಂತಹುದೊ? ಮುನ್ನಿನಂತೆ. ಕೂಡಲಸಂಗಯ್ಯ ಮನಹೀನನ ಮಾಸಲೆ ಕಾಯ್ದಿರಿಸಿದಂತೆ.

೫. ಸಗಣಿಯ ಬೆನಕಂಗೆ ಸಂಪಿಗೆಯರಳಿನಲ್ಲಿ ಪೂಜಿಸಿದರೆ, ರಂಜನೆಯಲ್ಲದೆ, ಅದರ ಗಂಜಳ ಬಿಡದಣ್ಣ. ಪುಣ್ಣ ಪುಥ್ಥಳಿಯ ಮಾಣದೆ

ಜಲವಲ್ಲಿ ತೊಳೆದರೆ, ನಿಚ್ಚ ಕೆಸರಲ್ಲದೆ, ಅವರಚ್ಚುಗ ಬಿಡವಣ್ಣ. ಲೋಕದ ಮಾನವಂಗೆ ಶಿವದೀಕ್ಷೆಯ ಕೊಟ್ಟರೆ, ಕೆಟ್ಟವನೇಕೆ ಸದ್ಭಕ್ತನ ಹನು ಕೂಡಲಸಂಗಮದೇವಾ?

೬. ಕಬ್ಬುನದ ಕೋಡಗವ ಪರುಷ ಮುಟ್ಟಲು, ಹೊನ್ನಾದರೇನು, ಮತ್ತೇನಾದರೇನು, ತನ್ನ ಮುನ್ನಿನ ರೂಹ ಬಿಡದನ್ನಕ್ಕ ಕೂಡಲಸಂಗಮದೇವ ನಿಮ್ಮ ನಂಬಿಯೂ ನಂಬದ ಡಂಭಕರಿಗಯ್ಯಾ?

೭. ತನುವಿನಲೊಂದಿಟ್ಟು ಮನದಲೆರಡಿಟ್ಟಡೆ, ಬಲ್ಲನೊಲ್ಲನಯ್ಯ ಲಿಂಗವು. ಬಲ್ಲನೊಲ್ಲನಯ್ಯಾ. ಪರಚಿಂತೆಯನೊಲ್ಲ ಕೂಡಲಸಂಗಮದೇವಾ.

೮. ಒಳಗೆ ಕುಟಿಲ, ಹೊರಗೆ ವಿನಯವಾಗಿ, ಭಕ್ತರೆನಿಸಿಕೊಂಬವರ ಬಲ್ಲನೊಲ್ಲನಯ್ಯಾ ಲಿಂಗವು. ಅವರು ಪಥಕ್ಕೆ ಸಲ್ಲರು, ಸಲ್ಲರಯ್ಯ. ಒಳಹೊರಗೊಂದಾಗದವರಿಗೆ, ಆಳಿಯಾಸೆದೋರಿ, ಬೀಸಾಡುವನವರ ಕೂಡಲಸಂಗಮದೇವ.

೯. ಮನೆಯೊಳಗೆ ಮನೆಯೊಡೆಯನಿದ್ದಾನೋ, ಇಲ್ಲವೊ? ಹೊಸ್ತಿಲಲ್ಲಿ ಹುಲ್ಲು ಹುಟ್ಟಿ, ಮನೆಯೊಳಗೆ ರಜ ತುಂಬಿ, ಮನೆಯೊಳಗೆ ಮನೆಯೊಡೆಯನಿದ್ದಾನೋ, ಇಲ್ಲವೊ? ತನುವಿನಲಿ ಹುಸಿ ತುಂಬಿ, ಮನದೊಳಗೆ ವಿಷಯ ತುಂಬಿ, ಮನೆಯೊಳಗೆ ಮನೆಯೊಡೆಯನಿಲ್ಲ ಕೂಡಲಸಂಗಮದೇವಾ.

೧೦. ಓಡೆತ್ತ ಬಲ್ಲುದು ಅವಲಕ್ಕಿಯ ಸವಿಯ? ಕೋಡಗನೆತ್ತ ಬಲ್ಲುದು ಸೆಳೆಮಂಚದ ಸುಖವ? ಕಾಗೆ ನಂದನವನದೊಳಗಿದ್ದರೇನೋ, ಕೋಗಿಲೆಯಾಗಬಲ್ಲುದೆ ಹೇಳಾ? ಕೊಳನ ತಡಿಯಲೊಂದು ಬಕ ಕುಳಿತಿದ್ದರೇನು, ಕಳಹಂಸನಾಗಬಲ್ಲುದೆ ಕೂಡಲಸಂಗಮದೇವಾ?

೧೧. ಎನಿಸು ಕಾಲ ಕಲ್ಲು ನೀರೊಳಗಿದ್ದರೇನು? ನೆನೆದು ಮೃದುವಾಗಬಲ್ಲುದೆ? ಎನಿಸು ಕಾಲ ನಿಮ್ಮ ಪೂಜಿಸಿ ಏವೆನಯ್ಯಾ, ಮನದಲ್ಲಿ ದೃಢವಿಲ್ಲದನ್ನಕ್ಕ? ನಿಧಾನವ ಕಾಯಿದಿದ್ದ ಬೆಂತರನಂತೆ, ಅವರ ವಿಧಿ ಎನಗಾಯಿತ್ತು ಕೂಡಲಸಂಗಮದೇವಾ.

೧೨. ಸಂತವಿದ್ದ ಮನೆಗೆ ಕೊಂತವ ತಂದಂತೆ, ಇದನೆಂತು ಸಂತೈಸುವೆನು? ಸಂತೆಯ ಗುಡಿಸಲ ಸೂಳೆಗೆ ಕೊಂತವಳವಡುವವೆ? ಕೂಡಲಸಂಗಮದೇವರ ಮಹತ್ವ ಆರಿಗೆಯೂ ಅಳವಡದು.

೧೩. ಕೂಸುಳ್ಳ ಸೂಳೆ ಧನದಾಸೆಗೆ ಒತ್ತೆಯ ಕೊಂಡರೆ, ಕೂಸಿಂಗಲ್ಲ, ಬೊಜಗಂಗಲ್ಲ. ಕೂಸಿನೊಮ್ಮೆ ಸಂತವಿಸುವಳು, ಬೊಜಗನನೊಮ್ಮೆ ನೆರೆವಳು. ಧನದಾಸೆ ಬಿಡದು ಕೂಡಲಸಂಗಮದೇವ.

೧೪. ಎರೆದೆಲೆಯಂತೆ ಒಳಗೊಂದು ಹೊರಗೊಂದಾದರೆ, ಮೆಚ್ಚುವನೆ? ಬಾರವ ಭವಂಗಳ ಬರಿಸುವನಲ್ಲದೆ ಮೆಚ್ಚುವನೆ? ಅಘೋರ ನರಕವನುಣಿಸುವನಲ್ಲದೆ ಮೆಚ್ಚುವನೆ? ಉಡುವಿನ ನಾಲಿಗೆಯಂತೆ ಎರಡಾದರೆ, ಕೂಡಲಸಂಗಯ್ಯ ಮೆಚ್ಚುವನೆ?

೧೫. ಭಕ್ತರ ಕಂಡರೆ ಬೋಳರಪ್ಪಿರಯ್ಯ! ಸವಣರ ಕಂಡರೆ, ಬತ್ತಲೆಯಪ್ಪಿರಯ್ಯ! ಹಾರುವರ ಕಂಡರೆ, ಹರಿ ನಾಮವೆಂಬಿರಯ್ಯ! ಅವರವರ ಕಂಡರೆ, ಅವರವರಂತೆ. ಸೂಳೆಗೆ ಹುಟ್ಟಿದವರ ತೋರದಿರಯ್ಯ! ಕೂಡಲಸಂಗಮದೇವರ ಪೂಜಿಸಿ ಅನ್ಯದೈವಂಗಳಿಗೆರಗಿ ಭಕ್ತರೆನಿಸಿಕೊಂಬ ಅಜ್ಞಾನಿಗಳನೇನೆಂಜೆನಯ್ಯ?

೧೬. ಗಂಡ ಶಿವಲಿಂಗದೇವರ ಭಕ್ತ. ಹೆಂಡಿತಿ ಮಾರಿ ಮಸಣಿಯ ಭಕ್ತೆ. ಗಂಡ ಕೊಂಬುದು ಪಾದೋದಕ ಪ್ರಸಾದ. ಹೆಂಡಿತಿ ಕೊಂಬುದು ಸುರೆ ಮಾಂಸ. ಭಾಂಡ ಭಾಜನ ಶುದ್ಧಿ ಇಲ್ಲದವರ ಭಕ್ತಿ, ಹೆಂಡದ ಮಡಿಕೆಯ ಹೊರಗೆ ತೊಳೆದಂತೆ, ಕೂಡಲಸಂಗಮದೇವಾ.

೧೭. ಹಾವಡಿಗನು ಮೂಕೊರತಿಯು ತನ್ನ ಮಗನ ಮದುವೆಗೆ ಶಕುನವ ನೋಡ ಹೋಹಾಗ, ಇದಿರಿಲೊಬ್ಬ ಮೂಕೊರತಿಯು ಹಾವಡಿಗನ ಕಂಡು ಶಕುನ ಹೊಲ್ಲೆಂಬ ಚದುರನ ನೋಡಾ! ತನ್ನ ಸತಿಯು ಮೂಕೊರಿತೆ, ತನ್ನ ಕೈಯ್ಯಲು ಹಾವು ತನ್ನ ಭಿನ್ನವನರಿಯದೆ ಅನ್ಯರನೆಂಬ ಕುನ್ನಿಯನೇನೆಂಬೆ ಕೂಡಲಸಂಗಮದೇವಾ?

೧೮. ಅಂಗದಿಚ್ಛೆಗೆ ಮದ್ಯಮಾಂಸವ ತಿಂಬರು. ಕಂಗಳಿಚ್ಛೆಗೆ ಪರವಧುವ ನೆರೆವರು. ಲಿಂಗ ಲಾಂಛನ ಧಾರಿಯಾದಲ್ಲಿ ಫಲವೇನು? ಲಿಂಗ ಪಥವ ತಪ್ಪಿ ನಡೆವರು ಜಂಗಮ ಮುಖದಿಂದ ನಿಂದೆಯು ಬಂದರೆ ಕೊಂಡ ಮಾರಿಂಗೆ ಹೋಹುದು ತಪ್ಪದು ಕೂಡಲಸಂಗಮದೇವಾ.

೧೯. ಶಿವಜನ್ಮದಲ್ಲಿ ಹುಟ್ಟಿ ಲಿಂಗೈಕ್ಯರಾಗಿ, ತಮ್ಮಂಗದ ಮೇಲೆ ಲಿಂಗವಿರಲು, ಅನ್ಯರನೆ ಹಾಡಿ, ಅನ್ಯರನೆ ಹೊಗಳಿ, ಅನ್ಯರ ವಚನವ ಕೊಂಡಾಡಲು ಕರ್ಮ ಬಿಡದು. ಭವಬಂಧನ ಶ್ವಾನಯೋನಿಯಲ್ಲಿ

ಬಪ್ಪುದು ತಪ್ಪದು. ಇದು ಕಾರಣ, ಕೂಡಲಸಂಗಮದೇವ, ನಿಮ್ಮ ನಂಬಿಯೂ ನಂಬದ ಡಂಭಕರಿಗಯ್ಯ ಮಳಲ ಗೋಡೆಯನಿಕ್ಕಿ ನೀರಲ್ಲಿ ತೊಳೆದಂತಾಯಿತ್ತಯ್ಯಾ.

೨೦. ಅರ್ಥರೇಖೆ ಇದ್ದಲ್ಲಿ ಫಲವೇನೋ ಆಯುಷ್ಯರೇಖೆ ಇಲ್ಲದನ್ನಕ್ಕ? ಹಂದೆಯ ಕೈಯ್ಯಲ್ಲಿ ಚಂದ್ರಾಯುಧವಿದ್ದು ಫಲವೇನು? ಅಂಧಕನ ಕೈಯ್ಯಲ್ಲಿ ದರ್ಪಣವಿದ್ದು ಫಲವೇನು? ಮರ್ಕಟನ ಕೈಯ್ಯಲ್ಲಿ ಮಾಣಿಕವಿದ್ದು ಫಲವೇನು? ನಮ್ಮ ಕೂಡಲಸಂಗನ ಶರಣರನರಿಯದವರ ಕೈಯ್ಯಲ್ಲಿ ಲಿಂಗವಿದ್ದು ಫಲವೇನು, ಶಿವಪಥವನರಿಯುವನ್ನಕ್ಕರ?

೨೧. ಗಂಡನ ಮೇಲೆ ಸ್ನೇಹವಿಲ್ಲದ ಹೆಂಡತಿ, ಲಿಂಗವ ಮೇಲೆ ನಿಷ್ಠೆ ಇಲ್ಲದ ಭಕ್ತ ಇದ್ದರೇನೊ ಶಿವಶಿವಾ? ಹೋದರೇನೋ ಶಿವಶಿವ? ಕೂಡಲಸಂಗಮದೇವಯ್ಯ, ಊಡದ ಆವಿಂಗೆ ಉಣ್ಣದ ಕರುವ ಬಿಟ್ಟಂತೆ.

೨೨. ಅವಳ ವಚನ ಬೆಲ್ಲದಂತೆ. ಹೃದಯದಲ್ಲಿಪ್ಪುದು ನಂಜು ಕಂಡಯ್ಯ! ಕಂಗಳಲೊಬ್ಬನ ಕರೆವಳು. ಮನದಲೊಬ್ಬನ ನೆನೆವಳು. ಕೂಡಲಸಂಗಮದೇವ, ಕೇಳಯ್ಯ ಮಾನಿಸಗಳ್ಳಿಯ ನಂಬದಿರಯ್ಯ.

೨೩. ಹಾದರಕ್ಕೆ ಹೋದರೆ, ಕಳ್ಳ ದಮ್ಮನಾಯಿತ್ತು. ಹಾಳು ಗೋಡೆಗೆ ಹೋದರೆ ಚೇಳೂರಿತ್ತು. ಅಬ್ಬರವ ಕೇಳಿ ತಳವಾರನುಟ್ಟ ಸೀರೆಯ ಸುಲಿದ. ನಾಚಿ ಹೋದರೆ, ಮನೆಯ ಗಂಡ ಬೆನ್ನಬಾರನೆತ್ತಿದ. ಅರಸು ಕೂಡಲಸಂಗಮದೇವ ದಂಡವ ಕೊಂಡ.

೨೪. ಗರಿದೊರೆ ಗಂಡರೆಂಬವರ ಕಾಣೆ. ನಿರಿ ಸೋಂಕಲು, ಮುನಿಯುಲ್ಲ, ನೋಡಯ್ಯ! ಸಂಟುತನವೇನವನ ಬಂಟತನವೇನವನ? ಹುಲ್ಲಗಿಚ್ಚು ಹೊಲೆಯನ ಮೇಳಾಪ. ಅಲ್ಲಿ ಹುರುಳಿಲ್ಲ, ಕೂಡಲ ಸಂಗಮದೇವಾ.

೨೫. ಅಳವುತ್ತಳವುತ್ತ ಬಳಲುವರಲ್ಲದೆ, ಕೊಳಗ ಬಳಲುವದೆ? ನಡೆವುತ್ತ ನಡೆವುತ್ತ ಬಳಲುವರಲ್ಲದೆ, ಬಟ್ಟೆ ಬಳಲುವದೆ? ಶ್ರಮವ ಮಾಡುತ್ತ, ಮಾಡುತ್ತ ಬಳಲುವರಲ್ಲದೆ, ಕೋಲು ಬಳಲುವದೆ? ನಿಜವನರಿಯದ ಭಕ್ತ ಬಳಲುವನಲ್ಲದೆ, ಲಿಂಗ ಬಳಲುವದೆ? ಕೂಡಲ ಸಂಗಮದೇವ ಅರಸರಿಯದ ಬಿಟ್ಟಿಯೋ.

## ಭಕ್ತ ಜ್ಞಾನಿ.

೧. ಒಳೆಯ ಬೂದಿಯ ಬರೆಯಲು ಬೇಡ. ಒಲಿದಂತೆ ಹೊಸಿಕೊಂಡಿಪ್ಪುದು ಹುಸಿ. ಏನು ಫಲ, ಮನವಲ್ಲಿ ಲೇಸಿಲ್ಲವನ್ನಕ್ಕ? ಒಂದನಾಡಹೋಗಿ ಒಂಬತ್ತನಾಡುವ ಡಂಭಕರ ಮೆಚ್ಚನು ಕೂಡಲಸಂಗಮದೇವ.

೨. ಧರಣಿಯ ಮೇಲೊಂದು ಹಿರಿದಪ್ಪ ಅಂಗಡಿಯನಿಕ್ಕಿ, ಹರದ ಕುಳ್ಳಿರ್ದ ನಮ್ಮ ಮಹಾದೇವಿಸೆಟ್ಟಿ. ಒಮ್ಮನವಾದಡೆ, ಒಡನೆ ನುಡಿವನು. ಇಮ್ಮನವಾದಡೆ ನುಡಿಯನು. ಕಾಣಿಯ ಸೋಲ. ಅರ್ಧಗಾಣಿಯ ಗೆಲ್ಲ. ಜಾಣ ನೋಡವ್ವಾ, ನಮ್ಮ ಕೂಡಲಸಂಗಮದೇವಾ.

೩. ನಂಬರು, ನೆಚ್ಚರು, ಬರಿದೆ ಕರೆವರು, ನಂಬಲರಿಯದೆ ಲೋಕದ ಮನುಜರು. ನಂಬಿ ಕರೆವಡೋ ಎನ್ನನೆ ಶಿವನು? ನಂಬದೆ, ನೆಚ್ಚದೆ, ಬರಿದೆ ಕರೆವರ ಕೊಂಬೆ ಮೆಟ್ಟಿ ಕೂಗೆಂದ ಕೂಡಲಸಂಗಮದೇವಾ.

೪. ಹುತ್ತವ ಬಡಿದಡೆ, ಹಾವು ಸಾಯಬಲ್ಲುದೇ ಅಯ್ಯ? ಅಘೋರ ತಪವ ಮಾಡಿದಡೇನು? ಅಂತರಂಗ ಆತ್ಮಶುದ್ಧವಿಲ್ಲದವರನೆಂತು ನಂಬುವನಯ್ಯ ಕೂಡಲಸಂಗಮದೇವಾ?

೫. ಕಾಮವೇಕೊ ಲಿಂಗಪ್ರೇಮಿ ಎನಿಸುವಂಗೆ? ಕ್ರೋಧವೇಕೊ ಶರಣವೇದ್ಯನೆನಿಸುವಂಗೆ? ಲೋಭವೇಕೊ ಭಕ್ತಿಯ ಲಾಭವ ಬಯಸುವಂಗೆ? ಮೋಹವೇಕೊ ಪ್ರಸಾದ ವೇದ್ಯನೆನಿಸುವಂಗೆ? ಮದ ಮತ್ಸರವುಳ್ಳವಂಗೆ ಹೃದಯ ಶುದ್ಧವೆಲ್ಲಿಯದೊ? ಹದುಳಿಗರಾದವರಲ್ಲಿಪ್ಪ ಕೂಡಲಸಂಗಮದೇವಾ.

೬. ಸಾರ ಸಜ್ಜನರ ಸಂಗವ ಮಾಡುವುದು. ದೂರ ದುರ್ಜನರ ಸಂಗ ಬೇಡವಯ್ಯ! ಆವ ಹಾವಾದಡೇನು, ವಿಷ ಒಂದೆ. ಅಂತವರ ಸಂಗ ಬೇಡವಯ್ಯ! ಅಂತರಂಗದ ಶುದ್ಧವಿಲ್ಲದವರ ಸಂಗ ಸಿಂಗಿಕಾಳಕೂಟ ವಿಷವು, ಕೂಡಲಸಂಗಮದೇವಾ.

೭. ಹಸಿದು ಎಕ್ಕೆಯ ಕಾಯ ಮೆಲಬಹುದೆ? ನೀರಡಿಸಿ ವಿಷವ ಕುಡಿಯಬಹುದೆ? ಸುಣ್ಣ ತುಯ್ಯಲ ಬಣ್ಣ ಒಂದೆಂದರೆ ನಂಟುತನಕ್ಕೆ

ಉಣಬಹುದೆ? ಲಿಂಗಸಾರಾಯ ಸಜ್ಜನರಲ್ಲದವರ ಕೂಡಲಸಂಗಮ ದೇವರೆಂತೊಲಿವ?

೮. ಯೆಲವದ ಮರ ಹೂತು ಫಲವಾದ ತೆರನಂತೆ, ಸಿರಿಯಾದರೇನು, ಶಿವಭಕ್ತಿ ಇಲ್ಲದನ್ನಕ್ಕೆ? ಫಲವಾದರೇನು ಹಾವು ಮೆಕ್ಕೆಯ ಕಾಯಿ? ಕುಲವಿಲ್ಲದ ರೂಹು ಎಲ್ಲಿದ್ದರೇನು? ಬಚ್ಚಲ ನೀರು ತಿಳಿದಲ್ಲಿ ಫಲವೇನು? ಅವಗುಣಿಗಳನು ಮೆಚ್ಚ ಕೂಡಲ ಸಂಗಮದೇವಾ.

೯. ಬಚ್ಚಲ ನೀರು ತಿಳಿದಿದ್ದರೇನು? ಸಲ್ಲದ ಹೊನ್ನು ಮತ್ತೆಲ್ಲಿದ್ದರೇನು? ಆಕಾಶದ ಮಾವಿನ ಫಲವೆಂದರೇನು? ಕೊಯ್ಯಲಿಲ್ಲ, ಮೆಲ್ಲಲಿಲ್ಲ. ಕೂಡಲಸಂಗನ ಶರಣರ ಅನುಭಾವವಿಲ್ಲದವರೆಲ್ಲಿದ್ದರೇನು, ಎಂತಾದರೇನು?

೧೦. ಗಿಳಿಯೋದಿ ಫಲವೇನು? ಬೆಕ್ಕು ಬಹುದ ಹೇಳಲರಿಯದು. ಜಗವೆಲ್ಲ ಕಾಂಬ ಕಣ್ಣು ತನ್ನ ಕೊಂಬ ಕೊಯಿಲೆಯ ಕಾಣಲರಿಯದು. ಇದಿರ ಗುಣವ ಬಲ್ಲೆವೆಂಬರು. ತಮ್ಮ ಗುಣವ ತಾವರಿಯರು, ಕೂಡಲ ಸಂಗಮದೇವಾ.

೧೧. ಲೋಕದ ಡೊಂಕ ನೀವೇಕೆ ತಿದ್ದುವಿರಿ? ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ, ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ. ನೆರೆಮನೆಯ ದುಃಖಕ್ಕೆ ಅಳುವರ ಮೆಚ್ಚ ಕೂಡಲಸಂಗಮದೇವ.

೧೨. ಏತ ತಲೆವಾಗಿದರೇನು, ಗುರುಭಕ್ತನಾಗಬಲ್ಲುದೆ? ಇಕ್ಕುಳ ಕೈಮುಗಿದರೇನು, ಭೃತ್ಯಾಚಾರಿಯಾಗಬಲ್ಲುದೆ? ಗಿಳಿಯೋದಿದರೇನು, ಲಿಂಗವೇದಿಯಾಗಬಲ್ಲುದೆ? ಕೂಡಲಸಂಗನ ಶರಣರು ಬಂದ ಬರವ ನಿಂದ ನಿಲುವ ಅಂಗಸಂಗಿಗಳೆತ್ತ ಬಲ್ಲರು?

೧೩. ಒಲವಿಲ್ಲದ ಪೂಜೆ, ನೇಹವಿಲ್ಲದ ಮಾಟ, ಆ ಪೂಜೆಯು, ಆ ಮಾಟವು ಚಿತ್ರದ ರೂಹು ಕಾಣಿರಣ್ಣ! ಚಿತ್ರದ ರಬ್ಬು ಕಾಣಿರಣ್ಣ. ಅಪ್ಪಿದರೆ ಸುಖವಿಲ್ಲ. ಮೆಲಿದರೆ ಸವಿ ಇಲ್ಲ. ಕೂಡಲ ಸಂಗಮದೇವ ನಿಜವಿಲ್ಲದವನ ಭಕ್ತಿ.

೧೪. ಸ್ನೇಹ ತಪ್ಪಿದ ಠಾವಿನಲ್ಲಿ ಗುಣವನರಸುವರೇ ಅಯ್ಯ? ಹೂ ಬಾಡಿದಲ್ಲಿ ಪರಿಮಳವನರಸುವರೆ ಅಯ್ಯಾ? ಎನ್ನ ತಂದೆ ಕೂಡಲ ಸಂಗಮದೇವ, ತೊರೆ ಇಳಿದರೆ ಅಂಬಿಗಂಗೇನುಂಟು?

೧೫. ಆಸೆಗೆ ಹುಟ್ಟಿದ ಪ್ರಾಣಿ ಆಸೆಯನೆ ಕಲಿತು, ಪುಣ್ಯ ಪದವಿಯ ಬಯಸಿದರೆ, ಭವಮಾಲೆಯ ಬರವು ತಪ್ಪದು. ಬೇಡಲು ಹುಟ್ಟಿದ ಪ್ರಾಣಿಗೆ ಬೇಡಲು ವಿಧಿಯೆ? ಸೂಳೆಗೆ ಹುಟ್ಟಿದ ಪ್ರಾಣಿಗೆ ನಿಜಗುಣ ಸಜ್ಜನಗುಣವಪ್ಪುದೇ? ಲಿಂಗ ಉದಯ ಶರಣ ವಿಸ್ತಾರವು ಬಯಸಿದರೊಳವೆ ಕೂಡಲ ಸಂಗಮದೇವಾ, ನಿಮ್ಮಲ್ಲಿ?

೧೬. ಹಬ್ಬಕ್ಕೆ ತಂದ ಹರಿಕೆಯ ಕುರಿ ತೋರಣಕ್ಕೆ ತಂದ ತಳಿರ ಮೇಯಿತ್ತು. ಕೊಂದಿಹರೆಂಬುದನರಿಯದೆ, ಬೆಂದೊಡಲ ಹೊರೆವುತ್ತಲಿದೆ. ಅದಂದೆ ಹುಟ್ಟಿತ್ತು, ಅದಂದೆ ಹೊಂದಿತ್ತು, ಕೊಂದವರುಳಿದರೆ ಕೂಡಲ ಸಂಗಮದೇವಾ?

೧೭. ಹಾವಿನ ಬಾಯ ಕಪ್ಪೆ ಹಸಿದು ಹಾರುವ ನೊಣಕ್ಕೆ ಆಸೆ ಮಾಡುವಂತೆ, ಶೂಲವನೇರುವ ಕಳ್ಳನು ಹಾಲು ತುಪ್ಪವ ಕುಡಿದು ಮೇಲೇಸು ಕಾಲ ಬದುಕುವನೋ? ಕೆಡೆ ಒಡಲ ನೆಚ್ಚಿ, ಕಡು ಹುಸಿಯನೆ ಹುಸಿದು, ಒಡಲ ಹೊರೆವವರ ಕೂಡಲಸಂಗಮದೇವಯ್ಯನವರನೊಲ್ಲ ಕಾಣಿರಣ್ಣ.

೧೮. ಅರ್ಥವಡಗದು. ಕ್ರೋಧ ತೊಲಗದು. ಕ್ರೂರ ಕುಭಾಷೆ ಕುಹಕ ಬಿಡದನ್ನಕ್ಕ ನೀನೆತ್ತಲು ಶಿವನೆತ್ತಲು, ಹೋಗತ್ತ ಮರುಳೆ. ಭವರೋಗವೆಂಬ ತಿಮಿರ ತಿಳಿಯದನ್ನಕ್ಕ, ಕೂಡಲಸಂಗಯ್ಯನೆತ್ತ ನೀನೆತ್ತ ಮರುಳೇ.

೧೯. ಹಾವ ತಿಂದವರ ನುಡಿಸಬಹುದು. ಗರ ಹೊಡೆದವರ ನುಡಿಸಲುಬಹುದು. ಸಿರಿ ಗರ ಹೊಡೆದವರ ನುಡಿಸಲುಬಾರದು, ನೋಡಯ್ಯ! ಬಡತನವೆಂಬ ಮಂತ್ರವಾದಿ ಹೊಗಲು, ಒಡನೆ ನುಡಿವರಯ್ಯಾ, ಕೂಡಲ ಸಂಗಮದೇವಾ.

೨೦. ಅರೆಭಕ್ತರಾದವರ ನೆರೆ ಬೇಡ, ಹೊರೆ ಬೇಡ, ದಾರಿಸಂಗಡ ಬೇಡ, ಮೂರ ನುಡಿಯಲು ಬೇಡ. ಕೂಡಲಸಂಗನ ಶರಣರಲ್ಲಿ ಅಚ್ಚ ಲಿಂಗೈಕ್ಯಂಗೆ ತೊತ್ತಾಗಿಹುದಯ್ಯ.

೨೧. ಸಾರ ಸಜ್ಜನರ ಸಂಗ ಲೇಸು ಕಂಡಯ್ಯ! ದೂರ ದುರ್ಜನರ ಸಂಗವದು ಭಂಗವಯ್ಯ! ಸಂಗವೆರಡುಂಟು. ಒಂದ ಬಿಟ್ಟು ಒಂದ ಹಿಡಿ ಮಂಗಳಮೂರ್ತಿ ನಮ್ಮ ಕೂಡಲಸಂಗನ ಶರಣರ.

೨೨. ಪೊಲೆಯ ಹೊಲಬಿಗನಾದೊಡೆ, ಅವನ ಹೊರೆಯಲಿಪ್ಪುದು ಲೇಸು ಕಂಡಯ್ಯ. ಹೊಲಬುಗೆಡದೆ ಲಿಂಗ ಶರಣೆನ್ನಿರಯ್ಯ! ಹೊಲಬು ಗೆಡಬೇಡ. ಶಿವಶರಣೆನ್ನಿರಯ್ಯಾ! ನಮ್ಮ ಕೂಡಲಸಂಗನ ಮಹಾ ಮನೆಯಲು ಮಾದಾರ ಚನ್ನಯ್ಯ ಹೊಲಬಿಗನಯ್ಯಾ.

೨೩. ದೂಷಕನವನೊಬ್ಬ ದೇಶವ ಕೊಟ್ಟಡೆ, ಆಸೆಮಾಡಿ ಅವನ ಹೊರೆಯಲ್ಲಿರಬೇಡ. ಪಾಪರ ಶಿವಭಕ್ತನಾದಡೆ, ಆತನ ಹೊರೆಯಲ್ಲಿ ಭೃತ್ಯನಾಗಿಪ್ಪುದು ಕರ ಲೇಸಯ್ಯಾ! ಕಾಡಸೊಪ್ಪ ತಂದು, ಓಡಿನಲ್ಲಿ ಹುರಿದಿಟ್ಟು ಕೂಡಿಕೊಂಡಿಪ್ಪುದೀಗ ನಮ್ಮ ಕೂಡಲಸಂಗನ ಶರಣರ.

೨೪. ಪರುಷ ಮುಟ್ಟಿದ ಬಳಿಕ, ಕಬ್ಬುನವಾಗದು ನೋಡಾ! ಲಿಂಗ ಮುಟ್ಟಿದ ಬಳಿಕ, ಕುಚಿತ್ತಾಚಾರವಾಗದು. ಕೂಡಲಸಂಗನ ಶರಣರು ಅನ್ಯವನರಿಯರಾಗಿ.

೨೫. ಪಟ್ಟವ ಕಟ್ಟಿದ ಬಳಿಕ, ಲಕ್ಷಣವನರಸುವರೆ? ಲಿಂಗ ದೇವನ ಪೂಜಿಸಿ ಕುಲವನರಸುವರೆ, ಅಯ್ಯಾ? ಕೂಡಲಸಂಗಮದೇವ ಭಕ್ತಕಾಯ ಮಮಕಾಯವೆಂದುದಾಗಿ.

೨೬. ದೇವಲೋಕ ಮರ್ತ್ಯಲೋಕವೆಂಬುದು ಬೇರೆ ಮತ್ತುಂಟೆ? ಈ ಲೋಕದೊಳಗೆ ಮತ್ತನಂತಲೋಕ. ಶಿವಲೋಕ ಶಿವಾಚಾರವಯ್ಯಾ. ಶಿವಭಕ್ತನಿದ್ದ ಠಾವೇ ದೇವಲೋಕ. ಭಕ್ತನಂಗಣವೇ ವಾರಣಾಸಿ. ಕಾಯವೇ ಕೈಲಾಸ. ಇದು ಸತ್ಯ ಕೂಡಲಸಂಗಮದೇವಾ.

೨೭. ಕಟ್ಟಿದಿರಲ್ಲಿ ಶಿವಭಕ್ತನ ಕಂಡು, ದೃಷ್ಟಿಯಾರೆ ಶರಣೆಂದಡೆ, ಹುಟ್ಟಿದೇಳು ಜನ್ಮದ ಪಾಪ ಬಿಟ್ಟು ಹಿಂಗುವುದು ನೋಡಾ! ಮುಟ್ಟಿ ಚರಣಕ್ಕೆರಗಿದಡೆ, ತನು ಒಪ್ಪಿದಂತಹುದು, ಪರುಷ ಮುಟ್ಟಿದಂತೆ. ಕರ್ತು ಕೂಡಲಸಂಗನ ಶರಣರ ಸಂಗವು ಮತ್ತೆ ಭವಮಾಲೆಯ ಹೊದ್ದಲೀ ಯ್ಯದು ನೋಡಾ.

೨೮. ಆರಾರ ಸಂಗವೇನೇನ ಮಾಡದೈಯ್ಯ? ಕೀಡಿ ಕುಂಡ ಲಿಗನಾಗದೇನಯ್ಯ? ಚಂದನದ ಸನ್ನಿಧಿಯಲ್ಲಿ ಪರಿಮಳ ತಾಗಿ ಬೇವು ಬೊಬ್ಬಿಲಿ ತರಿಯ ಗಂಧಂಗಳಾಗವೆ? ನಮ್ಮ ಕೂಡಲಸಂಗನ ಶರಣರ ಸನ್ನಿಧಿಯಿಂದ ಕರ್ಮ ನಿರ್ಮಳವಾಗದಿಹುದೇ ಅಯ್ಯಾ?

೨೯. ಎಂತವನಾದೊಡೇನು? ಲಿಂಗ ಮುಟ್ಟಿದವನೇ ಕೇಳು ಜಾತಿ. ಕುಲವಹುದು ತಪ್ಪದು, ಲಿಂಗವ ಮುಟ್ಟಲೊಡನೆ. ಶಿವಕುಲವಹುದು ತಪ್ಪದು. ಪರುಷ ಮುಟ್ಟಲೊಡನೆ, ಕಬ್ಬುನ ಹೊನ್ನಹುದು ತಪ್ಪದು. ಕೂಡಲಸಂಗಮದೇವನೊಲ್ಲ ಸರ್ವ ಸಂದೇಹಿಗಳಾ.

೩೦. ಓದಿದರೇನು, ಕೇಳಿದರೇನು, ಶಿವಪಥವನರಿಯದನ್ನಕ್ಕರ? ಓದಿತ್ತು ಕಾಣಿರೋ ಶುಕನು. ಶಿವಜ್ಞಾನವನರಿಯದನ್ನಕ್ಕೆ, ಓದಿದ ಫಲವು ಮಾದಾರ ಚನ್ನಯ್ಯಂಗಾಯಿತ್ತು, ಕೂಡಲಸಂಗಮದೇವಾ.

೩೧. ಥಾವಿನ ಡೊಂಕು ಹುತ್ತಕ್ಕೆ ಸಸಿನ. ನದಿಯ ಡೊಂಕು ಸಮುದ್ರಕ್ಕೆ ಸಸಿನ. ನಮ್ಮ ಕೂಡಲಸಂಗನ ಶರಣರ ಡೊಂಕು ಲಿಂಗಕ್ಕೆ ಸಸಿನ.

೩೨. ಭಕ್ತನ ಮುಖದರ್ಪಣದಲ್ಲಿ ಲಿಂಗವ ಕಾಣಬಹುದು. ಭಕ್ತ ದೇಹಿಕದೇವ ಅನುಮಿಷನಾಗಿ ಕೂಡಲಸಂಗಮದೇವ ಭಕ್ತನ ನುಡಿಯ ನಡುವೆ ರಾಶಿಯಾಗಿಪ್ಪನು.

೩೩. ಭಕ್ತಿ ಎಂತಹದಯ್ಯ? ದಾಸಯ್ಯ ಮಾಡಿದಂತಹದಯ್ಯ! ಭಕ್ತಿ ಎಂತಹದಯ್ಯ? ಸಿರಿಯಾಳ ಮಾಡಿದಂತಹದಯ್ಯ! ಭಕ್ತಿ ಎಂತ ಹದಯ್ಯ? ಸಿಂಧು ಬಲ್ಲಾಳ ಮಾಡಿದಂತಹದಯ್ಯ! ಭಕ್ತಿ ಎಂತಹ ದಯ್ಯ? ಕೂಡಲಸಂಗಮದೇವಾ, ನೀ ಬಾಣನ ಬಾಗಿಲ ಕಾಯಿದಂತ ಹದಯ್ಯ.

೩೪. ಮುನ್ನಿನವರು ಹೋದ ದಾರಿ ಭಯ ಕಾಣಿರಣ್ಣಾ. ಬಲ್ಲಾಳನ ವಧುವಿನೊಡನೆ ಸರಸವಾಡಿದಂದಿಂದ ಭಯ ಕಾಣಿರಣ್ಣಾ. ಸಿರಿಯಾಳನ ಮಗನ ಬೇಡಿದಂದಿಂದ ಭಯ ಕಾಣಿರಣ್ಣಾ. ದಾಸನ ವಸ್ತ್ರವ ಸೀಳಿದಂದಿಂದ ಭಯ ಕಾಣಿರಣ್ಣಾ. ಅಘಟಿತ ಘಟಿತರು ವಿಪರೀತ ಚರಿತ್ರರು ಕೂಡಲಸಂಗನ ಶರಣರು ಹೋದ ದಾರಿ ಭಯ ಕಾಣಿರಣ್ಣಾ.

೩೫. ದೇವನೊಳ್ಳಿದನೆಂದು ಮುಯ್ಯಿನಲು ಬೇಡ. ತರಕಟ ಕಾಡಿ ಹನೊಳ್ಳಿದನೆ? ಅಳಿಸುವ ನಗಿಸುವನೊಳ್ಳಿದನೆ? ಬೆಚ್ಚದೆ ಬೆದರದೆ ತೊತ್ತುತನವ ಮಾಡಲು, ತನ್ನನೀವ ಕೂಡಲಸಂಗಮದೇವ.

೩೬. ನೆರೆನಂಬೋ, ನೆರೆನಂಬೋ, ಧರಮುರವಿಲ್ಲದೆ ಸಾಮವೇದಿಗಳಂತೆ. ನೆರೆನಂಬೋ, ನೆರೆನಂಬೋ, ದಾಸಮುಗ್ಗಳೆಯಂತೆ. ನೆರೆ

ನಂಬೋ, ನೆರೆನಂಬೋ, ಸಿರಿಯಾಳ ಚಂಗಳೆಯಂತೆ. ನೆರೆನಂಬೋ, ನೆರೆನಂಬೋ, ಸಿಂಧು ಬಲ್ಲಾಳನಂತೆ. ನಂಬಿದೆಯಾದರೆ, ತನ್ನನೀವ ಕೂಡಲಸಂಗಮದೇವ.

೩೭. ಬಲ್ಲಿದರೊಡನೆ ಬವರವಾದಡೆ ಗೆಲ್ಲಲುಂಟು. ಸೋಲಲುಂಟು. ಕಳ್ಳನೊಡನೆ ಭಾಷೆ ಪೂರಾಯವಯ್ಯ! ನಮ್ಮ ಕೂಡಲಸಂಗನ ಶರಣರಿಗೆ ಮಾಡಿ ಮಾಡಿ, ಧನ ಸವೆದು ಬಡವಾದರೆ ಆ ಭಕ್ತನಾಲಿಂಗಕ್ಕೆ ಪೂಜೆಯಹನು.

೩೮ ಗಿರಿಗಳ ಮೇಲೆ ಹಲವು ತರುಮರಾದಿಗಳಿದ್ದು, ಶ್ರೀಗಂಧದ ಸನ್ನಿಧಿಯಲು ಪರಿಮಳವಾಗವೆ? ಲಿಂಗವಂತನ ಸನ್ನಿಧಿಯಿಂದ ಹಿಂದಣ ದುಸ್ಸಂಗ ಕೆಡುವುದು. ಕೂಡಲಸಂಗಮದೇವಯ್ಯ! ಸಿರಿಯಾಳನ ಸಾರಿರ್ದ ನರರೆಲ್ಲ ಸುರರಾಗರೆ?

೩೯. ಪರುಷದ ಹೊರೆಯಲ್ಲಿ ಕಬ್ಬುನವಿದ್ದು ಹೊನ್ನಾಯಿತ್ತು ನೋಡಿರೆ. ಅಪ್ಪೆ ಚಂಗಳೆ, ನೀನಿಪ್ಪೇಳು ಕೇರಿಯವರು, ಲಿಂಗದ ನೋಂಪಿಯ ನೋಂತರೇ ಹೇಳಾ? ಕೂಡಲಸಂಗಮದೇವಂಗೆ ಬಿಲ್ಲಾಳನೆಂಬ ಬಾಯಿ ನವನಿಕ್ಕಿದರೆ ಹೇಳಾ?

೪೦. ಗೀತವ ಬಲ್ಲಾತ ಜಾಣನಲ್ಲ. ಮಾತ ಬಲ್ಲಾತ ಜಾಣನಲ್ಲ. ಜಾಣನು ಜಾಣ, ಆತ ಜಾಣನು. ಲಿಂಗವ ನೆರೆನಂಬಿದಾತ ಜಾಣನು. ಜಂಗಮಕ್ಕೆ ಸವಿಸುವಾತ ಆತ ಜಾಣನು, ಜವನ ಬಾಯಲು ಬಾಲವ ಕೊಯ್ದು ಹೋದಾತ ಜಾಣನು. ನಮ್ಮ ಕೂಡಲಸಂಗನ ಶರಣನು.

೪೧. ಲೇಸೆನಿಸಿಕೊಂಡು ಐದು ದಿನ ಬದುಕಿದರೇನು? ಲೇಸೆನಿಸಿಕೊಂಡು ನಾಲ್ಕು ದಿನ ಬದುಕಿದರೇನು? ಲೇಸೆನಿಸಿಕೊಂಡು ಮೂರು ದಿನ ಬದುಕಿದರೇನು ? ಲೇಸೆನಿಸಿಕೊಂಡು ಎರಡು ದಿನ ಬದುಕಿದರೇನು ?

ಶ್ಲೋಕ॥ ಜೀವಿತಂ ಶಿವಭಕ್ತಾನಾಂ । ವರಂ ಪಂಚ ದಿನಾನಿ ಚ।
ಅಜಕಲ್ಪ ಸಹಸ್ರೇಭ್ಯೋ । ಭಕ್ತಿಹೀನಂತು ಶಾಂಕರೀ॥

ಎಂದುದಾಗಿ ಕೂಡಲಸಂಗನ ಶರಣರ ವಚನದಲ್ಲಿ, ಲೇಸೆನಿಸಿಕೊಂಡು, ಒಂದು ದಿನ ಬದುಕಿದರೇನೋ?

೪೨. ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯಾ! ಇಲ್ಲಿ ಸಲ್ಲುವರು, ಅಲ್ಲಿಯೂ ಸಲ್ಲುವರಯ್ಯ! ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯ, ಕೂಡಲಸಂಗಮದೇವಾ.

೪೩. ಶಿವಚಿಂತೆ ಶಿವಜ್ಞಾನವಿಲ್ಲದ ಮನುಜರು, ಸಗಣಕ್ಕೆ ಸಾಸಿರ ಹುಳು ಹುಟ್ಟವೇ ಅಯ್ಯಾ? ಕಾಡಮೃಗ ಒಂದಾಗಿರಲಾಗವೇ ದೇವಾ? ಊರ ಮೃಗ ಒಂದಾಗಿರಲಾಗದೇ ಹರನೇ? ನಮ್ಮ ಕೂಡಲಸಂಗನ ಶರಣರಿಲ್ಲವ ಊರು ನರವಿಂಧ್ಯ ಕಾಣಿರಣ್ಣಾ.

೪೪. ಹೊತ್ತಾರೆ ಎದ್ದು ಲಿಂಗದೇವನ ದೃಷ್ಟಿಯಾರೆ ನೋಡದವನ, ಸಂಸಾರವೇನವನ, ಬಾಳುವೇನವನ, ಬೀಳುವೇನವನ, ಸಂಸಾರವೇನವನ, ನಡೆಯೇನವನ, ನುಡಿಯೇನವನ, ಸಂಸಾರವೇನವನ, ಕರ್ತು ಕೂಡಲಸಂಗಮದೇವ, ನಿಮ್ಮ ತೊತ್ತುಗೆಲಸವ ಮಾಡದವನ ಸಂಸಾರವೇನವನ?

೪೫. ವ್ಯಾಧನೊಂದು ಮೊಲನ ತಂದರೆ, ಸಲುವ ಹಾಗಕ್ಕೆ ಬೆಲೆವರಯ್ಯ! ನೆಲನಾಳ್ವನ ಹೆಣನೆಂದರೆ, ಅಂದಡಿಕೆಗೆ ಕೊಂಬವರಿಲ್ಲ, ನೋಡಯ್ಯ! ಮೊಲನಿಂದ ಕರಕಷ್ಟ ನರನ ಬಾಳುವೆ. ಸಲೆನಂಬು ನಮ್ಮ ಕೂಡಲಸಂಗಮದೇವನ.

೪೬. ಉತ್ಪತ್ತಿ ಶುಕ್ಲ ಶೋಣಿತದಿಂದಾದ ಲಜ್ಜೆ ಸಾಲದೆ? ಮತ್ತೆ ದುರಿತಂಗಳ ಹೊರೆವ ಎಗ್ಗತನವೇಕಯ್ಯಾ! ಮೃತ್ಯುವಿನ ಬಾಯಿಗೆ ಒಳಗಾಗಲೇಕೆ? ಒತ್ತೊತ್ತೆಯ ಜನನವ ಗೆಲುವರೆ, ಕರ್ತನ ಪೂಜಿಸು ನಮ್ಮ ಕೂಡಲಸಂಗಮದೇವನ.

೪೭. ಮನವೇ ಸರ್ಪ ತನುವೇ ಹೇಳಿಗೆ. ಹಾವಿನೊಡತಣ ಹುದುವಾಳಿಗೆ. ಇನ್ನಾವಾಗ ಕೊಂದಿಹುದೆಂದರಿಯೆ. ಇನ್ನಾವಾಗ ತಿಂದಿಹುದೆಂದರಿಯೆ. ನಿಜಕ್ಕೆ ನಿಮ್ಮ ಪೂಜಿಸಬಲ್ಲರೆ, ಅದೇ ಗಾರುಡ ಕೂಡಲಸಂಗಮದೇವಾ.

೪೮. ನೆರೆ ಕೆನ್ನೆಗೆ, ತೆರೆ ಗಲ್ಲಕ್ಕೆ, ಶರೀರ ಗೂಡುವೋಗದಮುನ್ನ, ಹಲ್ಲು ಹೋಗಿ, ಬೆನ್ನು ಬಾಗಿ, ಅನ್ಯರಿಗೆ ಹಂಗಾಗದ ಮುನ್ನ, ಕಾಲ ಮೇಲೆ ಕೈಯ್ಯನೂರಿ, ಕೋಲ ಹಿಡಿಯುದಮುನ್ನ, ಮುಪ್ಪಿಂದೊಪ್ಪವಳಿ

ಯದ ಮುನ್ನ, ಪ್ರತ್ಯ ಮುಟ್ಟದ ಮುನ್ನ, ಪೂಜಿಸು ಕೂಡಲಸಂಗಮ ದೇವನ.

೪೯. ನೀರ ಬೊಬ್ಬುಳಿಕೆಗೆ ಕಬ್ಬುನದ ಕಟ್ಟ ಕೊಟ್ಟು ಸುರಕ್ಷಿತವ ಮಾಡುವ ಭರವ ನೋಡಾ! ಮಹಾದಾನಿ ಕೂಡಲಸಂಗಯ್ಯನ ಪೂಜಿಸಿ ಬದುಕೋ ಕಾಯವ ನಿಶ್ಚಯಿಸದೇ.

೫೦ ಹಂಜರ ಬಲ್ಲಿತ್ತೆಂದು ಅಂಜದೆ ಓದುವ ಗಿಳಿಯೇ, ಎಂದೆಂದು ಅಳಿಯೆನೆಂದು ಗುಡಿಗಟ್ಟಿದೆಯಲ್ಲಾ! ನಿನ್ನ ಮನದಲ್ಲಿ ಮಾಯಾ ಮಂಜರ ಕೊಲುವರೆ, ನಿನ್ನ ಹಂಜರ ಕಾವುದೆ ಕೂಡಲಸಂಗಮದೇವನಲ್ಲವೆ?

೫೧. ಸಂಸಾರವೆಂಬುದೊಂದು ಗಾಳಿಯ ಸೊಡರು. ಸಿರಿಯೆಂಬು ದೊಂದು ಸಂತೆಯ ಮಂದಿ ಕಂಡೈಯ್ಯ. ಇದ ನೆಚ್ಚಿ ಕೆಡಬೇಡ, ಸಿರಿ ಎಂಬುದ. ಮರೆಯದೆ ಪೂಜಿಸು ನಮ್ಮ ಕೂಡಲಸಂಗಮದೇವನ.

೫೨. ಎಲೆ ಎಲೆ ಮಾನವ, ಅಳಿಯಾಸೆ ಬೇಡವೋ. ಕಾಳಬೆಳ ದಿಂಗಳ ಸಿರಿ ಸ್ಥಿರವಲ್ಲ. ಕೇಡಿಲ್ಲದ ಪದವಿ. ಕೂಡಲಸಂಗಮದೇವನ ಮರೆಯದೆ ಪೂಜಿಸು.

೫೩. ಎಂತಕ್ಕೆ? ಎಂತಕ್ಕೆ? ಹಡಿವ ಕಾಯ ಬೀಯವಾಗದ ಮುನ್ನ, ಅಟ್ಟಣ್ಣೋ. ಬೆರಣಿಯುಳ್ಳಲ್ಲಿ, ಹೊತ್ತು ಹೋಗದ ಮುನ್ನ, ಅಟ್ಟಣ್ಣೋ. ಮರಳಿ ಭವಕ್ಕೆ ಬಾಹೆ, ಬಾರದಿಹೆ. ಕರ್ತು ಕೂಡಲಸಂಗಂಗೆ ಶರ ಣೆನ್ನಿ ಭೋ.

೫೪. ಶಕುನವೆಂಬೆಂಬೆ, ಅವಶಕುನವೆಂದೆಂಬೆ. ನಿಮ್ಮವರು ಅಳ ಲಿಕೆ ಅಂದೇಕೆ ಬಂದೆ? ನಿಮ್ಮವರು ಅಳಲಿಕೆ ಇಂದೇಕೆ ಹೋದೆ? ನೀ ಹೋಹಾಗಳಕ್ಕೆ, ಬಾಹಾಗಳಕ್ಕೆ. ಅಕ್ಕೆ ಬಾರದ ಮುನ್ನ ಪೂಜಿಸು, ಕೂಡಲಸಂಗಮದೇವನ.

೫೫. ನಿಮಿಷದ ನಿಮಿಷೆಂಬೋ. ಕ್ಷಣದೊಳಗರ್ಥೆಂಬೋ. ಕಣ್ಣ ಮುಚ್ಚಿ ಬಿಚ್ಚುವೈಸು ಬೇಗೆಂಬೋ. ಸಂಸಾರದಾಗೆಂಬೋ. ಸಂಸಾರದ ಹೋಗೆಂಬೋ. ಸಂಸಾರದೊಪ್ಪಂಬೋ. ಕೂಡಲಸಂಗಮದೇವ ನೀ ಮಾಡಿದ ಮಾಯೆಂಬೋ. ಅಭ್ರಚ್ಛಾಯೆಂಬೋ.

೫೬. ಹರನೀವ ಕಾಲಕ್ಕೆ ಸಿರಿಯು ಬೆನ್ನಲಿ ಬಕ್ಕು. ಹರಿವು ಹೆದ್ದೊರೆಯ ಕೆರೆ ತುಂಬಿದಂತಯ್ಯಾ. ನೆರೆಯದ ವಸ್ತು ನೆರೆವುದು ನೋಡಯ್ಯ. ಅರಸು ಪರಿವಾರ ಕೈವಾರ ನೋಡಯ್ಯ. ಪರಮ ನಿರಂಜನನ ಮರೆವ ಕಾಲಕ್ಕೆ ತುಂಬಿದ ಹರವಿಯ ಕಲ್ಲು ಕೊಂಡಂತೆ, ಕೂಡಲ ಸಂಗಮದೇವಾ.

೫೭. ಹೊಯ್ದರೆ ಹೊಯ್ಗಳು ಕೈ ಮೇಲೆ. ಬಯ್ದರೆ, ಬಯ್ಗಳು ಕೈ ಮೇಲೆ. ಹಿಂದಣ ಜನನವೇನಾದಡಾಗಲಿ. ಇಂದಿನ ಭೋಗವು ಕೈ ಮೇಲೆ. ಕೂಡಲಸಂಗಮದೇವಯ್ಯ, ನಿಮ್ಮ ಪೂಜಿಸಿದ ಫಲವು ಕೈ ಮೇಲೆ.

೫೮. ಆದ್ಯರ ವಚನ ಪರುಷ ಕಂಡಯ್ಯ! ಸದಾಶಿವನೆಂಬ ಲಿಂಗವ ನಂಬುವುದು. ನಂಬಲೊಡನೆ ನೀ ವಿಜಯ ಕಂಡಯ್ಯ! ಅಧರಕ್ಕೆ ಕಹಿ, ಉದರಕ್ಕೆ ಸಿಹಿ. ಕೂಡಲಸಂಗನ ಶರಣರ ವಚನ ಬೇವ ಸವಿದಂತೆ.

೫೯. ಹೊತ್ತಾರೆ ಎದ್ದು ಅಗ್ಗವಣಿ ಪತ್ತರೆಯ ತಂದು, ಹೊತ್ತು ಹೋಗದ ಮುನ್ನ, ಪೂಜಿಸು ಲಿಂಗವ. ಹೊತ್ತು ಹೋದ ಬಳಿಕ ನಿನ್ನನಾರು ಬಲ್ಲರು? ಹೊತ್ತು ಹೋಗದ ಮುನ್ನ, ಮೃತ್ಯು ಒಯ್ಯದ ಮುನ್ನ, ತೊತ್ತುಗೆಲಸವ ಮಾಡು ಕೂಡಲಸಂಗಮದೇವನ.

೬೦. ಅಚ್ಚುಗವೇಕಯ್ಯ ಸಂಸಾರದೊಳಗೆ? ನಿಚ್ಚ ನಿಚ್ಚ ಶಿವ ರಾತ್ರಿಯ ಮಾಡುವದು, ಬೇಗ ಬೇಗ ಅರ್ಚನೆ ಪೂಜೆಯ ಮಾಡುವದು, ಕೂಡಲಸಂಗನ ಕೂಡುವದು.

೬೧. ಅಂದು, ಇಂದು, ಮತ್ತೊಂದೆನಬೇಡ. ದಿನ ಒಂದೇ ಶಿವ ಶರಣೆಂಬುವಂಗೆ. ದಿನ ಒಂದೆ ಹರ ಶರಣೆಂಬುವಂಗೆ. ದಿನ ಒಂದೇ ನಮ್ಮ ಕೂಡಲಸಂಗನ ಮಾಣದೆ ನೆನೆವಂಗೆ.

೬೨. ಅಷ್ಟ ವಿಧಾರ್ಚನೆ ಷೋಡಶೋಪಚಾರವ ಮಾಡುವುದು, ಮಾಡಿದ ಪೂಜೆಯ ನೋಡುವುದಯ್ಯ, ಶಿವತತ್ವಗೀತವ ಪಾಡುವುದು, ಶಿವನ ಮುಂದೆ ನಲಿದಾಡುವುದಯ್ಯ, ಭಕ್ತಿ ಸಂಭಾಷಣೆಯ ಮಾಡುವುದು ನಮ್ಮ ಸಂಗಯ್ಯನ ಕೂಡುವುದು.

೬೩. ಅಳಿಗೊಂಡಿಹರೆಂದು ಅಂಜಲದೇಕೆ? ನಾಸ್ತಿಕವಾಡಿಹರೆಂದು, ನಾಚಲದೇಕೆ? ಆರಾದಡಾಗಲಿ, ಶ್ರೀ ಮಹಾದೇವಂಗೆ ಶರಣೆನ್ನಿ. ಏನೂ ಅರಿಯನೆಂದು ಮೌನಗೊಂಡಿರಬೇಡ. ಕೂಡಲಸಂಗಮದೇವರ ಮುಂದೆ ದಂದಣ, ದತ್ತಣ ಎನ್ನಿ.

೬೪. ಸುಪ್ರಭಾತ ಸಮಯದಲ್ಲಿ ಅರ್ಥಿಯಲ್ಲಿ ಲಿಂಗವ ನೆನೆದರೆ ತಪ್ಪುವುದು ಅಪಮೃತ್ಯು, ಕಾಲಕರ್ಮಂಗಳಯ್ಯ! ದೇವ ಪೂಜೆಯ ಮಾಟ, ದುರಿತ ಬಂಧನದೋಟ. ಶಂಭು ನಿಮ್ಮಯ ನೋಟ ಹೆರೆ ಹಿಂಗದ ಕಣ್ಬೇಟ. ಸದಾ ಸನ್ನಿಹಿತನಾಗಿ ಶರಣೆಂಬುವುದು, ನಂಬುವುದು. ಜಂಗಮಾರ್ಚನೆಯ ಮಾಟ ಕೂಡಲಸಂಗನ ಕೂಟ.

೬೫. ಅಂಕ ಕಳನೇರಿ ಕೈಮರೆದಿರ್ದಡೆ, 'ಮಾರಾಂಕ ಬಂದಿರಿವುದ ಮಾಬನೇ? ನಿಮ್ಮ ನೆನೆವ ಮತಿ ಮರೆದಿರ್ದರೆ, ಪಾಪ ತನುವ ನಂಡಲೆಯದೆ ಮಾಬುದೇ? ಕೂಡಲಸಂಗಯ್ಯನ ನೆನೆದರೆ, ಪಾಪ ಉರಿಗೊಡ್ಡಿದರಗಿನಂತೆ ಕರಗುವುದೈಯ್ಯ.

೬೬. ಆಡಿಹರಯ್ಯ, ಹಾಡಿಹರಯ್ಯ, ಮನಬಂದ ಪರಿಯಲಿ. ಶಿವಶರಣರ ಮುಂದೆ, ಆಡಿಹರಯ್ಯ, ಹಾಡಿಹರಯ್ಯ! ಕೋಡಂಗಿಯಾಟವನಾಡಿವ ಭಕ್ತಂಗೆ ಬೇಡಿಪ್ಪದನೀವ ನಮ್ಮ ಕೂಡಲಸಂಗಮದೇವ.

೬೭. ಹೊಲಬುಗೊಂಡರಸಬೇಡ. ಬಿಲಿತು ತರಬೇಡ. ಒಲಿದೊಮ್ಮೆ ಶಿವಶರಣೆನ್ನಿರಯ್ಯಾ. ಒಂದು ಸೊಲ್ಲಿಂಗೆ ಮುಕ್ತಿ ಸಿದ್ಧಿ, ಕೂಡಲಸಂಗಮದೇವ ಭಕ್ತಿ ಲಂಪಟನಾಗಿ.

೬೮. ನಾದಪ್ರಿಯ ಶಿವನೆಂಬರು, ನಾದಪ್ರಿಯ ಶಿವನಲ್ಲಯ್ಯ. ವೇದಪ್ರಿಯ ಶಿವನೆಂಬರು, ವೇದಪ್ರಿಯ ಶಿವನಲ್ಲಯ್ಯ. ನಾದವ ಮಾಡಿದ ರಾವಣಂಗೆ ಅರೆಯಾಯುಷ್ಯವಾಯಿತ್ತು. ವೇದವನೋದಿದ ಬ್ರಹ್ಮನ ಶಿರ ಹೋಯಿತ್ತು. ನಾದಪ್ರಿಯನು ಅಲ್ಲ. ವೇದಪ್ರಿಯನು ಅಲ್ಲ. ಭಕ್ತಿ ಪ್ರಿಯ ನಮ್ಮ ಕೂಡಲಸಂಗಮದೇವಾ.

೬೯. ಹಸಿವಾದಡುಂಬುದನು, ಸತಿಯ ಸಂಭೋಗವನು, ಆನಾಗಿ ನೀ ಮಾಡೆಂಬುವರುಂಟೇ? ಮಾಡುವುದು, ಮಾಡುವುದು ಮನಮುಟ್ಟಿ. ಮಾಡುವುದು, ಮಾಡುವುದು ತನುಮುಟ್ಟಿ. ತನುಮುಟ್ಟಿ, ಮನಮುಟ್ಟದಿರ್ದರೆ, ಕೂಡಲಸಂಗಮದೇವನೇತರಲ್ಲಿಯೂ ಮೆಚ್ಚ.

೭೦. ತನ್ನ ಪ್ರಿಯದ ರತಿಸುಖವನು, ತಾನುಂಬ ಊಟವನು, ಬೇರೆ ಮತ್ತೊಬ್ಬರ ಕೈಯ್ಯಲು ಮಾಡಿಸಬಹುದೆ? ತನ್ನ ಲಿಂಗಕ್ಕೆ ಮಾಡುವ ನಿತ್ಯ ನೇಮವ ತಾ ಮಾಡಬೇಕಲ್ಲದೆ, ಬೇರೆ ಮತ್ತೊಬ್ಬರ ಕೈಯ್ಯಲು ಮಾಡಿಸಬಹುದೆ? ಕೆಮ್ಮನೆ ಉಪಚಾರಕ್ಕೆ ಮಾಡುವರಲ್ಲದೆ ನಿಮ್ಮನೆತ್ತ ಬಲ್ಲರು ಕೂಡಲಸಂಗಮದೇವಾ?

೭೧. ಬಂಡಿ ತುಂಬಿದ ಪತ್ರೆಯ ತಂದು, ಕಂಡ ಕಂಡಲ್ಲಿ ಮಜ್ಜನಕ್ಕೆರೆವಿರಯ್ಯ. ತಾಪತ್ರಯವ ಕಳೆದು ಪೂಜಿಸಿ. ತಾಪತ್ರಯವ ಲಿಂಗನೊಲ್ಲ. ಕೂಡಲಸಂಗಮದೇವ ಬರಿಯುದಕದಲ್ಲಿ ನನೆವನೆ?

೭೨. ಭಕ್ತನಾಗಿ ಲಿಂಗಜಂಗಮವ ಪೂಜಿಸಬೇಕಲ್ಲದೆ ಭಕ್ತನಾಗಿ ತನ್ನ ತಾ ಪೂಜಿಸಿಕೊಂಬುದು ಎಂತಯ್ಯ? ಸ್ವಾಮಿ ಭೃತ್ಯ ಸಂಬಂಧವು ಎಂತಯ್ಯ? ಪೂಸೈಸುವುದು ಕೂಡಲಸಂಗಮದೇವಾ, ಕಣ್ಣ ಕಟ್ಟಿ ಕನ್ನಡಿಯ ತೋರುವಂತೆ.

೭೩. ಭೂಮಿಯೊಳಗೆ ನಿಧಾನವಿದ್ದುದ ಅಂಜನವುಳ್ಳವರು ತೋರಿರಯ್ಯ. ಅಂಜಲು ಬೇಡ ಕಂಡಯ್ಯ. ಮನದಲ್ಲಿ ಸಂದೇಹವ ಮಾಡದಿರಾ! ಜಂಗಮದೊಳಗೆ ಲಿಂಗಯ್ಯನಿದ್ದಾನೆಂದು ನಂಬಿಗೆಯುಳ್ಳರೆ, ತೋರುವ ಕೂಡಲಸಂಗಯ್ಯ.

೭೪. ಕನ್ನಡಿಯ ನೋಡುವ ಅಣ್ಣಗಳಿರಾ, ಜಂಗಮವ ನೋಡಿರೇ. ಜಂಗಮದೊಳಗೆ ಲಿಂಗಯ್ಯ ಸನ್ನಿಹಿತನಾಗಿಪ್ಪ. ಸ್ಥಾವರ ಜಂಗಮ ಒಂದೇ ಎಂದುದು ಕೂಡಲಸಂಗನ ವಚನ.

೭೫. ಗೀತವ ಹಾಡಿದಡೇನು, ಶಾಸ್ತ್ರ ಪುರಾಣಗಳ ಕೇಳಿದಡೇನು, ವೇದ ವೇದಾಂತವ ನೋಡಿದಡೇನು, ಮನ ಒಲಿದು ಲಿಂಗಜಂಗಮವ ಪೂಜಿಸಲರಿಯದವರು? ಎಲ್ಲರಲ್ಲಿ ಅನುಭಾವಿಯಾದಡೇನು? ಭಕ್ತಿಯಿಲ್ಲದವರನೊಲ್ಲ ಕೂಡಲಸಂಗಮದೇವಾ.

೭೬. ಲಿಂಗವ ಪೂಜಿಸಿದ ಬಳಿಕ ಜಂಗಮಕ್ಕಂಜಲೆ ಬೇಕು. ಪಕ್ಕಿ ನುಂಗಿದಂತೆ ಜಿರೆತುಕೊಂಡಿರಬೇಡ. ಬೀಗಿ ಬೆಳೆವ ಕೊನೆವಾಳೆಯಂತೆ ಬಾಗಿಕೊಂಡಿದ್ದರೆ, ಬೇಡಿದ ಪದವಿಯನೀವ ಕೂಡಲಸಂಗಮದೇವಾ.

೭೭. ಹಮ್ಮಿನ ಭಕ್ತಿ ಕರ್ಮಕ್ಕೆ ಮೊದಲು. ವರ್ಮವನರಿಯದ ಮಾಟ ಮುಯಿಭಾನದ ಕೇಡು. ಬಂದ ಸಮಯೋಚಿತವನರಿಯದಿದ್ದರೆ, ನಿಂದಿರಲೊಲ್ಲ ಕೂಡಲಸಂಗಮದೇವಾ.

೭೮. ದ್ವೈತಾದ್ವೈತವನೋದಿ ಏನು ಮಾಡುವಿರಯ್ಯಾ, ನಮ್ಮ ಶರಣರಿಗುರಿಗರಗಾಗಿ ಕರಗದನ್ನಕ್ಕ? ಸ್ಥಾವರ ಜಂಗಮ ಒಂದೇ ಎಂದು ನಂಬದನ್ನಕ್ಕ, ಕೂಡಲಸಂಗಮದೇವ ಬರಿಯ ಮಾತಿನ ಮಾಲೆಯ ಲೇನಹುದು?

೭೯. ಲಾಂಛನ ಹೊರಗೆ ಬಂದಿರಲು ಒಳಗೆ ಲಿಂಗಾರ್ಚನೆ ಎಂತಯ್ಯ? ಮುಖದಲ್ಲಿ ಕಟ್ಟಿದ ಕನ್ನಡಿ ಮೂಗಿನ ಮೇಲಣ ಕತ್ತಿ ಸಮಯಾಚಾರವೆಂತುಟಯ್ಯ? ಕೂಡಲಸಂಗಮದೇವ ಮೂಗ ಕೊಯ್ಯದೆ ಮಾಬನೇ ಹೇಳಯ್ಯ?

೮೦. ಆಡುತ್ತ ಹಾಡುತ್ತ ಭಕ್ತಿಯ ಮಾಡಬಹುದು ಲಿಂಗಕ್ಕೆ. ಅದು ಬೇಡದು ಬೆಸಗೊಳ್ಳದು. ತಂದೊಮ್ಮೆ ನೀಡಬಹುದು. ಕಾಡುವ ಬೇಡುವ ಜಂಗಮ ಬಂದರೆ ನೀಡಲು ಬಾರದು ಕೂಡಲಸಂಗಮ ದೇವಾ.

೮೧. ಕಲ್ಲ ನಾಗರ ಕಂಡರೆ ಹಾಲನೆರೆ ಎಂಬರು. ದಿಟದ ನಾಗರ ಕಂಡರೆ ಕೊಲ್ಲೆಂಬರಯ್ಯ. ಉಂಬ ಜಂಗಮ ಬಂದರೆ ನಡೆ ಎಂಬರು. ಉಣ್ಣದ ಲಿಂಗಕ್ಕೆ ಬೋನವ ಹಿಡಿ ಎಂಬರಯ್ಯಾ! ನಮ್ಮ ಕೂಡಲ ಸಂಗನ ಶರಣರ ಕಂಡು, ಉದಾಸೀನವ ಮಾಡಿದರೆ, ಕಲ್ಲ ತಾಗಿದ ಮಿಟ್ಟೆಯಂತಪ್ಪರಯ್ಯಾ.

೮೨. ನಾಗಂಗೆ ಹೊಸತನಿಕ್ಕಿದೆವೆಂಬರು. ನಾಗ ಬಂದರೆ ಕೋಲ ಕಳೆದುಕೊಂಬರಯ್ಯ. ಆಗದಯ್ಯ. ಜಂಗಮಲಿಂಗವೆಂಬ ಶಬ್ದವಾಗದಯ್ಯ. ಕೂಡಲಸಂಗಮದೇವರಲ್ಲಿ ಸಿಂಧುಬಲ್ಲಾಳಂಗಲ್ಲದಾಗದಯ್ಯಾ.

೮೩. ಎರೆದರೆ ನೆನೆಯದು, ಮರೆದರೆ ಬಾಡದು. ಹುರುಳಿಲ್ಲ, ಹುರುಳಿಲ್ಲ ಲಿಂಗಾರ್ಚನೆ. ಕೂಡಲಸಂಗಮದೇವ, ಜಂಗಮಕ್ಕೆರೆದರೆ ಸ್ಥಾವರ ನೆನೆಯಿತ್ತು.

೮೪. ಅಗ್ನಿಯಾಧಾರದಲ್ಲಿ ಕಬ್ಬುನ ನೀರುಂಬುದಯ್ಯ. ಭೂಮಿ ಯಾಧಾರದಲ್ಲಿ ವೃಕ್ಷ ನೀರುಂಬುದಯ್ಯ. ಜಂಗಮವಾಪ್ಯಾಯನವಾದರೆ,

ಲಿಂಗ ಸಂತುಷ್ಟಿಯಹುದಯ್ಯ. ಜಂಗಮ ॥ಶ್ಲೋ.॥ ವೃಕ್ಷಸ್ಯ ವದನಂ ಭೂಮಿಃ। ಸ್ಥಾವರಸ್ಯತು ಜಂಗಮಂ। ಅಹಂ ತುಷ್ಟಿರುಮಾದೇವಿ ಉಭಯೋರ್ಲಿಂಗ ಜಂಗಮಂ ॥ ಇದು ಕಾರಣ ಕೂಡಲಸಂಗಮದೇವರಲ್ಲಿ, ಜಂಗಮವಾಪ್ಯಾಯನವಾದರೆ ಲಿಂಗ ಸಂತುಷ್ಟಿ.

೮೫. ಭಾಂಡವ ತುಂಬಿದ ಬಳಿಕ ಸುಂಕವ ತೆತ್ತಲ್ಲದೆ ವಿರಹಿತ ಹೋಗಬಾರದು. ಕಳ್ಳನಾಣ್ಯ ಸಲುಗೆಗೆ ಸಲ್ಲದು. ಕಳ್ಳನಾಣ್ಯವ ಸಲ್ಲಲೀಯ್ಯರಯ್ಯ. ಭಕ್ತಿ ಎಂಬ ಭಾಂಡಕ್ಕೆ ಜಂಗಮವೇ ಸುಂಕಿಗ ಕೂಡಲಸಂಗಮದೇವಾ.

೮೬. ಮಾಡಿ ನೀಡಿ ಲಿಂಗವ ಪೂಜಿಸಿಹೆವೆಂಬವರು ನೀವೆಲ್ಲಾ ಕೇಳಿರಣ್ಣಾ! ಹಾಗದ ಕೆರಹ ಹೊರಗೆ ಕಳೆದು ದೇಗುಲಕ್ಕೆ ಹೋಗಿ ನಮಸ್ಕಾರವ ಮಾಡುವನಂತೆ, ತನ್ನ ಕೆರಹಿನ ಧ್ಯಾನವಿಲ್ಲದೆ, ದೇವರ ಧ್ಯಾನವಿಲ್ಲ. ' ಧನವನಿರಿಸದಿರಾ. ಇರಿಸಿದರೆ ಭವ ಬಪ್ಪುದು ತಪ್ಪದು. ಕೂಡಲಸಂಗನ ಶರಣರಿಗೆ ಸವಿಸಲೇಬೇಕು.

೮೭. ಉಂಡುದು ಬಂದಿತ್ತೆಂಬ ಸಂದೇಹಿ ಮಾನವ ನೀ ಕೇಳಾ. ಉಂಡುದೇನಾಯಿತ್ತೆಂಬುದ ನಿನ್ನ ನೀ ತಿಳಿದು ನೋಡಾ. ಉಂಡುದು ಆಗಳೇ ಆಪ್ಯಾಯನವಾಯಿತ್ತು. ಆ ಉಂಡುದನುಣಬಂದ ಹಂದೆಯ ಬಾಳುವೆಯವರ ಕಂಡು ಆನು ಮರುಗುವೆನಯ್ಯ ಕೂಡಲಸಂಗಮದೇವಾ.

೮೮. ಆಯುಷ್ಯ ಉಂಟು, ಪ್ರಳಯವಿಲ್ಲೆಂದು, ಅರ್ಥವ ಮಡುಗುವಿರಿ. ಆಯುಷ್ಯ ತೀರಿ, ಪ್ರಳಯ ಬಂದರೆ, ಆ ಅರ್ಥವನುಂಬುವರಿಲ್ಲ. ನೆಲನನಗಿದು ಮಡುಗದಿರಾ! ನೆಲ ನುಂಗಿದಡುಗುಳುವುದೆ? ಕಣ್ಣಿನಲ್ಲಿ ನೋಡಿ ಮಣ್ಣಿನಲ್ಲಿ ನೆರಹಿ, ಉಣ್ಣದೆ ಹೋಗದಿರಾ. ನಿನ್ನ ಮಡದಿಗಿರಲೆಂದರೆ, ನಿನ್ನ ಮಡದಿಯ ಕೃತಕ ಬೇರೆ. ನಿನ್ನ ಒಡಲು ಕೆಡೆಯಲು, ಮತ್ತೊಬ್ಬನಲ್ಲಿಗೆ ಅಡಕವೆ ಮಾಬಳೆ? ಹೆರರಿಗಿಕ್ಕಿ ಹೆಗ್ಗುರಿಯಾಗಿ ಕೆಡಬೇಡ. ಕೂಡಲಸಂಗನ ಶರಣರಿಗೆ ಒಡನೆ ಸವಿಸುವುದು.

೮೯. ತನು, ಮನ, ಧನವ ಹಿಂದಿಕ್ಕಿಕೊಂಡು, ಮಾತಿನ ಬಣಬೆಯ ಮುಳಲೊಟ್ಟೆಯ ಸುಡಿವರು ನೀವೆಲ್ಲ ಕೇಳಿರಿ. ತಲೆ ಇಲ್ಲದ

ಕೋಲು ಹೊಳ್ಳ ಹಾರುವದಲ್ಲದೆ, ಗುರಿಯು ತಾಕಬಲ್ಲುದೆ? ಮಾಯಾ ಪಾಶವ ಹಿಂಗಿ ಮನದ ಗಂಟು ಬಿಡದನ್ನಕ್ಕ ಕೂಡಲಸಂಗಮದೇವನೆಂತೊ ಲಿವನಯ್ಯ?

೯೦. ಸರ್ವ ಭೂತಾತ್ಮನೆಂಬ ಮಾತಿನ ಮಾತಿನಲ್ಲಿ ಹೋಗದು. ತನುಮನ ಧನವ ಸವಿಸಲೇಬೇಕು. ನಮ್ಮ ಕೂಡಲಸಂಗನ ಶರಣರಿಗೆ ಅಂಜಲೇಬೇಕು.

೯೧. ಹಲವು ಮಣಿಯು ಕಟ್ಟಿ ಕುಣಿ ಕುಣಿದಾಡಿ, ಹಲವು ಪರಿ ಯಲಿ ವಿಭೂತಿಯು ಧರಿಸಿ, ಗಣಾಡಂಬರವ ನಡುವೆ ನಲಿನಲಿದಾಡಿ, ಉಂಡು ತಂಬುಲಗೊಂಡು ಹೋಹುದಲ್ಲ! ತನು ಮನ ಧನವ ಸಮ ರ್ಪಿಸದವರ ಕೂಡಲಸಂಗಮದೇವನೆಂತೊಲಿವ?

೯೨. ತನುವ ಕೊಟ್ಟು ಗುರುವನೊಲಿಸಲೇಬೇಕು. ಮನವ ಕೊಟ್ಟು ಲಿಂಗವನೊಲಿಸಲೇಬೇಕು. ಧನವ ಕೊಟ್ಟು ಜಂಗಮವ ನೊಲಿಸಲೇಬೇಕು. ಈ ತ್ರಿವಿಧವ ಹೊರಗು ಮಾಡಿ, ಹರೆಯು ಹೊಯಿಸಿ ಕುರುಹ ಪೂಜಿಸುವವರ ಮೆಚ್ಚ ಕೂಡಲಸಂಗಮದೇವಾ.

೯೩. ಆಡಿದರೇನು, ಹಾಡಿದರೇನು, ಓದಿದರೇನು, ತ್ರಿವಿಧ ದಾಸೋಹವಿಲ್ಲದನ್ನಕ್ಕ? ಆಡದೇ ನವಿಲು, ಹಾಡದೇ ತಂತಿ, ಓದದೇ ಗಿಣಿ? ಭಕ್ತಿ ಇಲ್ಲದವರನೊಲ್ಲ ಕೂಡಲಸಂಗಮದೇವಾ.

೯೪. ಶಾಸ್ತ್ರ ಘನವೆಂಬೆನೆ? ಕರ್ಮವ ಭಜಿಸುತ್ತಿದೆ. ವೇದ ಘನವೆಂಬೆನೆ? ಪ್ರಾಣ ವಧೆಯ ಹೇಳುತ್ತಿದೆ. ಸ್ಮೃತಿ ಘನವೆಂಬೆನೆ? ಮುಂದಿಟ್ಟು ಅರಸುತ್ತಿದೆ. ಅಲ್ಲೆಲ್ಲಿಯೂ ನೀವಿಲ್ಲದಕಾರಣ, ತ್ರಿವಿಧ ದಾಸೋಹದಲಲ್ಲದೆ ಕಾಣಬಾರದು, ಕೂಡಲಸಂಗಮದೇವ.

೯೫. ವೇದದಂತುಟಲ್ಲ. ಶಾಸ್ತ್ರದಂತುಟಲ್ಲ. ಗೀತ ಮಾತಿನಂತುಟಲ್ಲ. ಕೇಳಯ್ಯ ಮಾತಿನ ಮಾತಿನ ಕೌಳುಗೋಲ ಶ್ರವದಲ್ಲಿ ಸತ್ತವರೊಳರೆ? ಅಯ್ಯಾ, ದಿಟದಲಗಿನ ಕಾಳಗವಿತ್ತ್ರಪಲಿದ್ದುದೆ ಕೂಡಲಸಂಗನ ಶರಣರು ಬಂದಲ್ಲಿ.

೯೬. ಮಾತಿನ ಮಾತಿನಲ್ಲಿಪ್ಪುದೆ ಭಕ್ತಿ? ಮಾಡಿ ತನು ಸವೆ ಯುವನ್ನಕ್ಕ, ಮನ ಸವೆಯುದನ್ನಕ್ಕ, ಧನ ಸವೆಯುದನ್ನಕ್ಕ, ಅಪ್ಪುದೆ ಭಕ್ತಿ?

ಕೂಡಲಸಂಗಮದೇವನೆಲುವೋರಿ ಸರಸವಾಡುವನು. ನೈರಿಸವನ್ನಕ್ಕ ಅಪ್ಪುದೆ ಭಕ್ತಿ?

೯೭. ಹಾವಸೆಗಲ್ಲ ಮೆಟ್ಟಿ ಹರಿವು ಗೊತ್ತ ಮುಟ್ಟಬಾರದಯ್ಯಾ! ನುಡಿದಂತೆ ನಡೆಯಲು ಬಾರದಯ್ಯಾ! ಕೂಡಲಸಂಗನ ಶರಣರ ಭಕ್ತಿ ಬಾಳ ಬಾಯಿಧಾರೆ.

೯೮. ಭಕ್ತಿಯೆಂಬುದ ಮಾಡಬಾರದು. ಕರಗಸದಂತೆ ಹೋಗುತ್ತ ಕೊಯ್ವುದು. ಬರುತ್ತ ಕೊಯ್ವುದು. ಘಟಸರ್ಪನಲ್ಲಿ ಕೈದುಡುಕಿದರೆ, ಹಿಡಿವುದು ಮಾಬುದೆ ಕೂಡಲಸಂಗಮದೇವಾ?

೯೯. ಹಲವು ಕಾಲ ಧಾವತಿಗೊಂಡು ಒಟ್ಟಿದ ಹಿದಿರೆಯು ಒಂದು ಕಿಡಿ ಕಿಡಿಯಲ್ಲಿ ಬೇವಂತೆ, ಸಲೆಸನ್ನಿಹಿತನಾಗಿಪ್ಪ ಶರಣನ ಭಕ್ತಿ ಒಂದನಾಯತದಿಂದ ಕೆಡುವುದು. ಸ್ವಧರ್ಮದಲ್ಲಿ ಗಳಿಸಿದ ಪಿತನ ಧನವ ಅಧರ್ಮದಲ್ಲಿ ಕೆಡಿಸುವ ಸುತನಂತೆ, ಶಿವನ ಸೊಮ್ಮ ಶಿವಂಗೆ ಮಾಡದೆ ಅನ್ಯಕ್ಕೆ ಮಾಡಿದಡೆ ತನ್ನ ಭಕ್ತಿ ತನ್ನನೆ ಕೆಡಿಸುವುದು ಕೂಡಲ ಸಂಗಮದೇವಾ.

೧೦೦. ನೆಚ್ಚಿದೆನೆಂದರೆ, ಮೆಚ್ಚಿದೆನೆಂದರೆ, ಸಲೆ ಮಾರುವೋದೆ ನೆಂದರೆ, ತನುವನಲ್ಲಾಡಿಸಿ ನೋಡುವೆ ನೀನು, ಮನವನಲ್ಲಾಡಿಸಿ, ನೋಡುವೆ ನೀನು, ಧನವನಲ್ಲಾಡಿಸಿ ನೋಡುವೆ ನೀನು, ಇವಕ್ಕೆಲ್ಲ ಕಂಜದಿದ್ದರೆ, ಭಕ್ತಿ ಕಂಪಿತ ನಮ್ಮ ಕೂಡಲಸಂಗಮದೇವ.

೧೦೧. ಕೌಳುಗೋಲ ಹಿಡಿದು ಶ್ರವವ ಮಾಡಬಹುದಲ್ಲದೆ, ಕಳ ನೇರಿ ಕಾದುವದರಿಯದು ನೋಡಾ! ಬಣ್ಣವಿಟ್ಟು ನುಡಿದಲ್ಲಿ ಫಲವೇನು? ಚಿನ್ನಗೈಯ್ಯುವನಾಡುವನಂತೆ, ಬಂದ ಸಮಯುವನರಿತು, ಇದ್ದುದ ವಂಚಿಸದಿದ್ದರೆ, ಕೂಡಲಸಂಗಮದೇವನೊಲಿದು ಸಲಹುವ.

೧೦೨. ಧನಕ್ಕೆ ಮನವನೊಡ್ಡಿದರೇನು? ಮನಕ್ಕೆ ಧನವನೊಡ್ಡಿ ದರೇನು? ತನು ಮನ ಧನವ ಮೀರಿ ಮಾತಾಡಬಲ್ಲರೆ, ಆತ ನಿಸ್ಸೀಮನು. ಆತ ನಿಜೈಕ್ಯನು. ತನು ಮನ ಧನವ ಸವಿದರೆ ಕೂಡಲಸಂಗಮ ದೇವನೊಲಿವ.

೧೦೩. ಅರ್ಥಪ್ರಾಣಾಭಿಮಾನದಲ್ಲಿ ವಂಚನೆಯಿಲ್ಲದ ಭಕ್ತಿ ಸಮಯಾಚಾರ. ಜಂಗಮವೇ ಲಿಂಗವೆಂಬುದಕ್ಕೆ ಏನು ಗುಣ? ಮನದ ಲಂಪಟತನ ಹಿಂಗದಾಗಿ, ಒಡೆಯರ ಬರವಿಂಗೆ ಕುನ್ನಿಬಾಲವ ಬಡಿವರೆ ಮೆಚ್ಚವೇನು ಹತ್ತುವುದು ಕೂಡಲಸಂಗಮದೇವಾ?

೧೦೪. ಉದಯದ ಮಾಗಿಯ ಬಿಸಿಲು, ಅಂಗಕ್ಕೆ ಹಿತವಾಯಿತ್ತು. ಮಧ್ಯಾಹ್ನದ ಬಿಸಿಲು, ಅಂಗಕ್ಕೆ ಕರ ಕಠಿಣವಾಯಿತ್ತು. ಮೊದಲಲ್ಲಿ ಲಿಂಗ ಭಕ್ತಿ ಹಿತವಾಯಿತ್ತು. ಕಡೆಯಲ್ಲಿ ಜಂಗಮ ಭಕ್ತಿ ಕಠಿಣವಾಯಿತ್ತು. ಇದು ಕಾರಣ ಕೂಡಲಸಂಗಮದೇವನವರ ಬಲ್ಲನಾಗಿ ಒಲ್ಲನಯ್ಯ.

೧೦೫. ಹಸಿದು ಬಂದ ಗಂಡಂಗೆ ಉಣಲಿಕ್ಕದೆ, ಬಡವಾದನೆಂದು ಮರುಗುವ ಸತಿಯ ಸ್ನೇಹದಂತೆ, ಬಂದುದನರಿಯಳು, ಇದ್ದುದ ಸವಿಸಳು. ದುಃಖವಿಲ್ಲದ ಅಕ್ಕೆ ಹಗರಣಿಗನ ತೆರನಂತೆ, ಕೂಡಲಸಂಗಮದೇವಾ.

೧೦೬. ಬರಬರ ಭಕ್ತಿ ಮರೆಯಾಯಿತ್ತು ಕಾಣಿರಣ್ಣಾ! ಮೊದಲ ದಿನ ಹಣೆ ಮುಟ್ಟಿ, ಮರುದಿನ ಕೈಮುಟ್ಟಿ, ಮೂರೆಂಬ ದಿನಕ್ಕೆ ತೂಕಡಿಕೆ ಕಾಣಿರಣ್ಣಾ. ಹಿಡಿದುವ ಬಿಡದಿದ್ದರೆ, ಕಡೆಗೆ ಚಾಚುವ. ಅಲ್ಲದಿದ್ದರೆ ನಡು ನೀರಲದ್ದುವ ನಮ್ಮ ಕೂಡಲಸಂಗಮದೇವಾ.

೧೦೭. ಬಿದಿರ ಅಂದಣವಕ್ಕು. ಬಿದಿರ ಸತ್ತಿಗೆಯಕ್ಕು. ಬಿದಿರಲ್ಲಿ ಗುಡಿಯು ಗುಡಾರವಕ್ಕು. ಬಿದಿರಲ್ಲಿ ಸಕಲಸಂಪದವವೆಲ್ಲವು. ಬಿದಿರದವರ ಮೆಚ್ಚ ನಮ್ಮ ಕೂಡಲಸಂಗಮದೇವಾ.

೧೦೮. ಉಂಬಾಗಳಿಲ್ಲೆನ್ನ, ಉಡುವಾಗಳಿಲ್ಲೆನ್ನ, ಬಂಧುಗಳು ಬಂಪಾಗಳಿಲ್ಲೆನ್ನ, ಲಿಂಗಕ್ಕೆ ಇಲ್ಲೆಂಬ, ಜಂಗಮಕ್ಕೆ ಇಲ್ಲೆಂಬ, ಬಂದ ಪುರಾತರಿಗೆ ಇಲ್ಲೆಂಬ, ಸಾವಾಗ ದೇಹವ ದೇಗುಲಕ್ಕೆ ಒಯ್ಯಿ ಎಂಬ. ದೇವರಿಗೆ ಹೆಣ ಬಿಟ್ಟಿ ಹೇಳಿತ್ತೆ ಕೂಡಲಸಂಗಮದೇವಾ?

೧೦೯. ಪಾಪಿಯ ಧನ ಪ್ರಾಯಶ್ಚಿತ್ತಕ್ಕಲ್ಲದೆ, ಸತ್ಪಾತ್ರಕ್ಕೆ ಸಲ್ಲದಯ್ಯಾ! ನಾಯ ಹಾಲು ನಾಯಿಂಗಲ್ಲದೆ, ಪಂಚಾಮೃತಕ್ಕೆ ಸಲ್ಲದಯ್ಯಾ! ನಮ್ಮ ಕೂಡಲಸಂಗನ ಶರಣರಿಗಲ್ಲದೆ, ಮಾಡುವ ಅರ್ಥ ವ್ಯರ್ಥ ಕಂಡಯ್ಯಾ.

೧೧೦. ಬಲಿಯ ಭೂಮಿ, ಕರ್ಣನ ಕವಚ, ಖಚರನ ಅಸ್ತಿ, ಶಿಬಿಯ ಮಾಂಸ ವೃಥಾ ಹೋಯಿತ್ತಲ್ಲಾ! ॥ ಶ್ಲೋ. ॥ ಶಿವಭಕ್ತಿ ಮತಿಕ್ರ

ಷ್ಯ। ಯಸ್ತು ದಾನಂ ಕರೋತಿ ಸಃ। ನಿಷ್ಫಲಂತು ಭವೇದ್ದಾನಂ। ರೌರ
ವಂ ನರಕಂ ವ್ರಜೇತ್ ॥ ಇಂತೆಂದುದಾಗಿ ಕೂಡಲಸಂಗನ ಶರಣರನರಿಯ
ದೆ ಕೀರ್ತಿವಾರ್ತೆಗೆ ಮಾಡಿದವನ ಧನ ವೃಥಾ ಹೋಯಿತ್ತಲ್ಲಾ.

೧೧೧. ಹತ್ತು ಮತ್ತರ ಭೂಮಿ, ಬತ್ತುವ ಹಯನು, ಸಂಪಾ
ದೀವಿಗೆಯ ನಡಸಿಹೆನೆಂಬವರ ಮುಖವ ನೋಡಲಾಗದು. ಅವರ ನುಡಿ
ಯ ಕೇಳಲಾಗದು. ಅಂಡಜ, ಸ್ವೇದಜ, ಉದ್ಭಿಜ, ಜರಾಯುಜವೆಂಬ
ಪ್ರಾಣಿಗಳಿಗೆ ಭವಿತವ್ಯವ ಕೊಟ್ಟವರಾರೋ? ಒಡೆಯರಿಗೆ ಉಂಡಿಗೆಯ
ಮುರಿದಿಕ್ಕಿದಂತೆ ಎನ್ನಿಂದಲೇ ಆಯಿತ್ತು, ಎನ್ನಿಂದಲೇ ಹೋಯಿತ್ತು
ಎಂಬವನ ಬಾಯಲ್ಲಿ ಮೆಟ್ಟಿ ಹುಡಿಯ ಹೊಯ್ಯದೆ ಮಾಬನೆ ಕೂಡಲ
ಸಂಗಮದೇವಾ?

೧೧೨. ಅನವರತ ಮಾಡಿಹೆನೆಂದು, ಉಪ್ಪರಗುಡಿಯ ಕಟ್ಟಿ
ಮಾಡುವ ಭಕ್ತನ ಮನೆಯದು ಅಂದಣಗಿತ್ತಿಯ ಮನೆ. ಸಜೀವದಯಾ
ಪಾರಿ ಯೆಂದು ಭೂತದೈವಕಿಕ್ಕುವನ ಮನೆ ಸುಯಿಧಾನದ ಕೇಡು.
ಸೂಳೆಯ ಮಗ ಮಹಳವ ಮಾಡಿದರೆ, ತಾಯ ಹೆಸರಾಯಿತ್ತು, ತಂದೆಯ
ಹೆಸರಿಲ್ಲ ಕೂಡಲಸಂಗಮದೇವಾ.

೧೧೩. ಕಾಲಾಗ್ನಿ ರುದ್ರನ ಮೇಳಾಪವನರಿಯದವರು, ಕಾಳು
ಬೆಳೆ ಎನುತಿಪ್ಪರಯ್ಯ. ಕಾನನದೊಳಗಣ ಕಿಚ್ಚು, ಬಳುಸೆಯಾಗಿ ಮಿಕ್ಕ
ಡೊರಲುವ ಬಳ್ಳುವಿನಂತಿಪ್ಪರಯ್ಯ ಮನುಜರು ಸಂವಿಂಧ್ಯದೊಳಗೆ.
ತತ್ಕಾಲಪ್ರೇಮವನರಿಯದೆ, ವಿಭವಕ್ಕೆ ಮಾಡಿದ ಭಕ್ತಿ, ಇರುಳು ಸತ್ತಿ
ಗೆಯ ಹಿಡಿಸಿಕೊಂಡಂತೆ ಕೂಡಲಸಂಗಮದೇವಾ.

೧೧೪. ಹರಿಸಿ ಮಾಡುವದು ಹರಿಕೆಯ ದಂಡ! ನೆರಹಿ ಮಾಡುವದು
ಡಂಭಿನ ಭಕ್ತಿ. ಹರಿಸಬೇಡ, ನೆರಹಬೇಡ. ಬಂದ ಬರವನರಿವರೆ, ಕೂಡಿ
ಕೊಂಡಿಪ್ಪ ನಮ್ಮ ಕೂಡಲಸಂಗಮದೇವಾ.

೧೧೫. ಹಡೆದೊಡವೆ ವಸ್ತುವನು ಮೃಡ ಭಕ್ತರಿಗಲ್ಲದೆ ಕಡ
ಬಡ್ಡಿಯ ಕೊಡಲಾಗದು. ಬಂದರೊಂದು ಲೇಸು. ಬಾರದಿದ್ದರೆರಡು ಲೇಸು.
ಅಲ್ಲಿದ್ದರೆಯೂ ಲಿಂಗಕ್ಕೆ ಬೋನ. ಇಲ್ಲಿದ್ದರೆಯೂ ಲಿಂಗಕ್ಕೆ ಬೋನ.
ಲಿಂಗದೊಡವೆ ಲಿಂಗಕ್ಕೆ ಸಾರಿತ್ತಾಗಿ ಬಂದಿತ್ತೆಂಬ ಪರಿಣಾಮವಿಲ್ಲ,
ಬಾರದೆಂಬ ದುಃಖವಿಲ್ಲ. ಇದು ಕಾರಣ ಕೂಡಲಸಂಗಮದೇವ ನಿಮ್ಮ
ಶರಣರಿಗಲ್ಲದೆ ಕಡಬಡ್ಡಿಯ ಕೊಡಲಾಗದು.

೧೧೬. ಓಡಲಾರದ ಮೃಗವು ಸೊಣಗಂಗೆ ಮಾಂಸವ ಕೊಡುವಂತೆ ಮಾಡಲಾಗದು ಭಕ್ತನು, ಕೊಳಲಾಗದು ಜಂಗಮ. ಹಿರಿಯರು ನರಮಾಂಸವ ಭುಂಜಿಸುವರೆ, ತನು ಉಕ್ಕಿ ಮನ ಉಕ್ಕಿ ಮಾಡಬೇಕು, ಭಕ್ತಿಯ ಮಾಡಿಸಿಕೊಳ್ಳಬೇಕು ಜಂಗಮ, ಕೂಡಲಸಂಗಮದೇವಾ.

೧೧೭. ಬಂದುದ ಕೈಕೊಳ್ಳ ಬಲ್ಲರೆ ನೇಮ. ಇದ್ದುದ ವಂಚನೆಯ ಮಾಡದಿದ್ದರೆ ಅದು ನೇಮ. ನಡೆದು ತಪ್ಪದಿದ್ದರೆ ಅದು ನೇಮ. ನುಡಿದು ಹುಸಿಯದಿದ್ದರೆ ಅದು ನೇಮ. ನಮ್ಮ ಕೂಡಲಸಂಗನ ಶರಣರು ಬಂದರೆ ಒಡೆಯರಿಗೊಡವೆಯನರ್ಪಿಸುವದೇ ನೇಮ.

೧೧೮. ಹಾಲನೇಮ, ಹಾಲಕೆನೆಯ ನೇಮ, ಕೆನೆಯು ತಪ್ಪಿದ ಬಳಿಕ ಕಿಚ್ಚಡಿಯ ನೇಮ, ಬೆಣ್ಣೆಯ ನೇಮ, ಜೆಲ್ಲದ ನೇಮ. ಅಂಬಲಿಯ ನೇಮದವರನಾರನೂ ಕಾಣೆ. ಕೂಡಲಸಂಗನ ಶರಣರಲ್ಲಿ ಅಂಬಲಿಯ ನೇಮದಾತ ಮಾದಾರ ಚನ್ನಯ್ಯ.

೧೧೯. ಮಾಡಿ, ಮಾಡಿ, ಕೆಟ್ಟರು ಮನವಿಲ್ಲದೆ. ನೀಡಿ ನೀಡಿ ಕೆಟ್ಟರು ನಿಜವಿಲ್ಲದೆ. ಮಾಡುವ ನೀಡುವ ನಿಜಗುಣವುಳ್ಳರೆ, ಕೂಡಿಕೊಂಬ ನಮ್ಮ ಕೂಡಲಸಂಗಮದೇವಾ.

೧೨೦. ಮಾಡಿದೆನೆಂಬುದು ಮನದಲ್ಲಿ ಹೊಳೆದರೆ, ಏಡಿಸಿ ಕಾಡಿತ್ತು ಶಿವನ ಡಂಗುರ. ಮಾಡಿದೆನೆನ್ನದಿರಾ ಲಿಂಗಕ್ಕೆ. ಮಾಡಿದೆನೆನ್ನದಿರಾ ಜಂಗಮಕ್ಕೆ. ಮಾಡಿದೆನೆಂಬುದು ಮನದಲ್ಲಿಲ್ಲದಿದ್ದರೆ ಬೇಡಿತ್ತನೀವನು ಕೂಡಲಸಂಗಮದೇವಾ.

೧೨೧. ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ, ಮುನಿಯಬೇಡ, ಅನ್ಯರಿಗೆ ಅಸಹ್ಯಬಡಬೇಡ., ತನ್ನ ಬಣ್ಣಿಸಬೇಡ, ಇದಿರ ಹಳಿಯಲು ಬೇಡ. ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ. ಇದೇ ನಮ್ಮ ಕೂಡಲಸಂಗನನೊಲಿಸುವಪರಿ.

೧೨೨. ಕೆಡೆ ನಡೆಯದೆ, ಕೆಡೆ ನುಡಿಯದೆ, ಅನ್ಯರ ಪ್ರತಿಪಾದಿಸದಿದ್ದರೆ ಏನ ಮಾಡನಯ್ಯ ಲಿಂಗವು? ಏನ ಕೊಡನಯ್ಯ ಲಿಂಗವು? ತಾನೇನ ಬೇಡಿದುದನೀವನಾಗಿ, ನಂಬಿಕೆಯುಳ್ಳ ಶಿವಭಕ್ತಂಗೆ ಇದೇ ದಿಬ್ಯ ಕೂಡಲಸಂಗಮದೇವಾ.

೧೨೩. ಸ್ವಾಮಿಭೃತ್ಯ ಸಂಬಂಧಕ್ಕೆ ಅವುದು ಪಥವೆಂದರೆ ಓಟ ವ ನುಡಿವುದು, ನುಡಿದಂತೆ ನಡೆವುದು. ನುಡಿದು ಹುಸಿವ, ನಡೆದು ತಪ್ಪುವ ಪ್ರಪಂಚಿಯನೊಲ್ಲ ಕೂಡಲಸಂಗಮದೇವಾ.

೧೨೪. ಸತ್ಯವುಳ್ಳ ಭಂಡವ ತುಂಬುವುದಯ್ಯಾ! ಸುಯಿಧಾನ ವಯ್ಯ! ಸುಯಿಧಾನವಯ್ಯ! ಮನ ಧಾರೆವಟ್ಟಲು. ಕೂಡಲಸಂಗನ ಶರ ಣರು ಹಿಡಿಯದ ಭಂಡವನು ಆರಾದಡಾಗಲಿ ಹೋಗಲೀಯರಯ್ಯಾ.

೧೨೫. ದೇವಲೋಕ, ಮರ್ತ್ಯಲೋಕವೆಂಬುದು ಬೇರಿಲ್ಲ ಕಾಣಿ ಭೋ. ಸತ್ಯವ ನುಡಿವುದೇ ದೇವಲೋಕ. ಮಿಥ್ಯವ ನುಡಿವುದೇ ಮ ರ್ತ್ಯಲೋಕ. ಆಚಾರವೇ ಸ್ವರ್ಗ. ಅನಾಚಾರವೇ ನರಕ. ಕೂಡಲ ಸಂಗಮದೇವಾ ನೀವೇ ಪ್ರಮಾಣಿ.

೧೨೬. ಪುಣ್ಯಪಾಪಂಗಳೆಂಬುವು ತಮ್ಮ ಇಷ್ಟವು ಕಂಡಿರೇ. ಅಯ್ಯ ಎಂದಡೆ ಸ್ವರ್ಗ, ಎಲವೋ ಎಂದಡೆ ನರಕ. ದೇವಾ ಭಕ್ತ, ಜಯಜೀಯಾ ಎಂಬ ನುಡಿಯೊಳಗೆ ಕೈಲಾಸವೈದವೇ ಕೂಡಲಸಂಗಮದೇವಾ?

೧೨೭. ಏನಿ ಬಂದಿರಿ, ಹದುಳವಿದ್ದಿರೆಂದರೆ, ನಿಮ್ಮ ವೈಸಿರಿ ಹಾರಿಹೋಹುದೇ? ಕುಳ್ಳಿರೆಂದರೆ ನೆಲ ಕುಳಿ ಹೋಹುದೇ? ಒಡನೆ ನುಡಿದರೆ ಶಿರಹೊಟ್ಟೆವೊಡೆವುದೇ? ಕೊಡಲಿಲ್ಲದಿದ್ದರೊಂದು ಗುಣವಿಲ್ಲದಿ ದ್ದರೆ ಮೂಗ ಕೊಯ್ಯದೆ ಮಾಣ್ಬನೇ ಕೂಡಲಸಂಗಯ್ಯ?

೧೨೮. ಸಂಸಾರದಲ್ಲಿ ಹುಟ್ಟಿ ಮತ್ತೊಂದ ಬಯಸಲೇಕಯ್ಯ? ನಗುವುದು, ನುಡಿವುದು ಶಿವಭಕ್ತರೊಡನೆ. ಸುಮ್ಮಾನ ಹಮ್ಮು ಬಿಮ್ಮಾ ಗಿರಲೇಕಯ್ಯ? ॥ ಶ್ಲೋ॥ ಅಭ್ಯಾಸಸ್ಯ ವಿಹೀನಸ್ಯ। ತಸ್ಯ ಜನ್ಮ ನಿರರ್ಥಕಂ। ಗುರೋರಪಿ ಸಮಂ ಹಾಸ್ಯಂ। ಕರ್ತವ್ಯಂಕುಟಿಲಂ ವಿನಾ॥ ನಮ್ಮ ಕೂಡಲ ಸಂಗನ ಶರಣರೊಡನೆ ಮನದೆರೆದು ಮಾತನಾಡುವುದಯ್ಯಾ.

೧೨೯. ಭಕ್ತಿ ಎಂಬ ನಿಧಾನವ ಸಾಧಿಸುವರೆ, ಶಿವಪ್ರೇಮವೆಂಬ ಅಂಜನವನೆಚ್ಚು ಕೊಂಬುದು. ಭಕ್ತನಾದವಂಗೆ ಇದೇ ಪಥವಾಗಿರ ಬೇಕು. ನಮ್ಮ ಕೂಡಲಸಂಗನ ಶರಣರ ಅನುಭಾವ ಗಜವೈದ್ಯ.

೧೩೦. ಕಂಡ ಭಕ್ತರಿಗೆ ಕೈ ಮುಗಿವಾತನೇ ಭಕ್ತ. ಮೃದು ವಚನವೇ ಸಕಲ ಜಪಂಗಳಯ್ಯಾ! ಮೃದುವಚನವೇ ಸಕಲ ತಪಂಗ ಳಯ್ಯಾ! ಸದುವಿನಯವೇ ಸದಾಶಿವನ ಒಲುಮೆಯಯ್ಯ! ಕೂಡಲ ಸಂಗಯ್ಯನಂತಲ್ಲದೊಲ್ಲನಯ್ಯ.

೧೩೧. ಇತ್ತಬಾರಯ್ಯ, ಇತ್ತಬಾರಯ್ಯ, ಎಂದು ಭಕ್ತರೆಲ್ಲರು ಕೂರ್ತು ಹತ್ತೆ ಕರೆವುತಿರಲಿಕೆ ನುತ್ತೆ ಕೆಲಕೆ ಹೋಗಿ ಶರಣೆಂಬ ಹಸ್ತಬಾಯನೆ ಮುಚ್ಚಿ, ಕಿರಿದಾಗಿ ಭೃತ್ಯಾಚಾರವ ನುಡಿದು ವಿನಯ ತಥ್ಯಾನವುಳ್ಳವರ ಎತ್ತಿಕೊಂಬನಯ್ಯ, ಕೂಡಲಸಂಗಮದೇವಾ, ಪ್ರಮ ಥರ ಮುಂದೆ.

೧೩೨. ಭಕ್ತ ಭಕ್ತನ ಮನೆಗೆ ಬಂದರೆ, ಭೃತ್ಯಾಚಾರವ ಮಾಡ ಬೇಕು. ಕರ್ತನಾಗಿ ಕಾಲ ತೊಳೆಯಿಸಿಕೊಂಡರೆ ಹಿಂದೆ ಮಾಡಿದ ಭಕ್ತಿಗೆ ಹಾನಿ. ಲಕ್ಷ ಗಾವುದ ದಾರಿಯ ಹೋಗಿ, ಭಕ್ತನು ಭಕ್ತನ ಕಾಂಬುದು ಸದಾಚಾರ. ಅಲ್ಲಿ ಕೂಡಿ ದಾಸೋಹವ ಮಾಡಿದರೆ ಕೂಡಿ ಕೊಂಬನು ನಮ್ಮ ಕೂಡಲಸಂಗಯ್ಯ.

೧೩೩. ದಯವಿಲ್ಲದ ಧರ್ಮವದಾವುದಯ್ಯ? ದಯವೇ ಬೇಕು ಸಕಲಪ್ರಾಣಿಗಳೆಲ್ಲರಲ್ಲಿ. ದಯವೇ ಧರ್ಮದ ಮೂಲವಯ್ಯ! ಕೂಡಲ ಸಂಗಯ್ಯನಂತಲ್ಲದೊಲ್ಲನಯ್ಯ.

೧೩೪. ತನಗೆ ಮುನಿವರಿಗೆ ತಾ ಮುನಿಯಲೇಕಯ್ಯ! ತನಗಾದ ಹೆಗೇನು? ಅವರಿಗಾದಡೆಗೇನು? ತನುವಿನ ಕೋಪ ತನ್ನ ಹಿರಿಯತನದ ಕೇಡು. ಮನದ ಕೋಪ ತನ್ನ ಅರುಹಿನ ಕೇಡು. ಮನೆಯೊಳಗಣ ಕಿಚ್ಚು ಮನೆಯ ಸುಟ್ಟಲ್ಲದೆ, ನೆರೆಮನೆಯ ಸುಡದು ಕೂಡಲಸಂಗಮ ದೇವಾ.

೧೩೫. ಅರ್ಥಕ್ಕೆ ತಪ್ಪಿದರೇನು? ಪ್ರಾಣಕ್ಕೆ ತಪ್ಪಿದರೇನು? ಅಭಿ ಮಾನಕ್ಕೆ ತಪ್ಪಿದರೇನು? ಶರಣರು ಶರಣರಲಿ ಗುಣವನರಸುವರೆ? ಕೂ ಡಲಸಂಗನ ಶರಣರು ನೊಂದು ಸೈರಿಸಬೇಕು.

# ಭಕ್ತಸ್ಥಲ.

೧. ಕಾಣದ ಠಾವಿನಲ್ಲಿ ಜರಿವರೊಂದರೆ ಕೇಳಿ ಪರಿಣಾಮಿಸಬೇಕು. ಅದೇನು ಕಾರಣ? ಕೊಳ್ಳದೆ ಕೊಡದೆ ಅವರಿಗೆ ಸಂತೋಷವಹುದಾಗಿ. ಎನ್ನಮನದ ತದ್ವೇಷವಳಿದು, ನಿಮ್ಮ ಶರಣರಿಗೆ ಶರಣೆಂಬುದ ಕರು ಣಿಸು ಕೂಡಲಸಂಗಮದೇವಾ.

೨. ಕರಗಿಸಿ ಎನ್ನ ಮನದ ಕಾಳಿಕೆಯ ಕಳೆಯಯ್ಯ! ಒರೆಗೆ ಬಣ್ಣಕ್ಕೆ ತಂದೆನ್ನ ಪುಟವಿಕ್ಕಿ ನೋಡಯ್ಯ! ಕಡಿಹಕ್ಕೆ ಬಡಿಹಕ್ಕೆ ತಂದೆನ್ನ ಕಡಿಯಾಣಿಯ ಮಾಡಿ, ನಿಮ್ಮ ಶರಣರ ಪಾದಕ್ಕೆ ತೊಡಿಗೆಯ ಮಾಡಿ ಸಲಹು ಕೂಡಲಸಂಗಮದೇವಾ.

೩. ॥ಶ್ಲೋ॥ ವೇದಾದಿ ನಾಮ ನಿರ್ನ್ನಾಮಂ। ಮಹತ್ವಂ ಮಹದೀಶ್ವರಂ। ಗುರೂಕ್ತ ಮನ್ತ್ರ ಮಾರ್ಗೇಣ। ಇಷ್ಟ ಲಿಂಗಂತು ಶಾಂಕರೀ॥ ಎಂದುದಾಗಿ ವಚನಪಾತಕವೆನ್ನ, ವಚನದೋಷವೆನ್ನ ಕಾಡಿಕಾಡಿ ಕೆಡಿಸಿಹವೆನ್ನ, ಕೂಡಲಸಂಗಮದೇವಾ ಅಹಂಮೆಂಬ ಅಹಂಕಾರವೆನ್ನ.

೪. ಅವರಿವರೆನ್ನದೆ, ಚರಣಕ್ಕೆರಗಲು, ಅಯ್ಯ, ತನುವೇರಿ ಬೆಬ್ಬನೆ ಬೆರೆವೆ ನಾನು. ಕೆಚ್ಚು ಬೆಳೆಯಿತ್ತಯ್ಯ! ಆ ಕೆಚ್ಚಿಂಗೆ ಕಿಚ್ಚನಿಕ್ಕಿ ಸುಟ್ಟು ಬೆಳುಕನ ಮಾಡಿ, ಬೆಳುಗಾರದಂತೆ ಮಾಡು ಕೂಡಲಸಂಗಮದೇವಾ.

೫. ನಡೆಯ ಕಂಡು ನಂಬೆ. ನುಡಿಯೆಲ್ಲ ಉಪಚಾರ. ಮಿಗಿಲೊಂದು ಮಾತು ಬಂದರೆ ಸೈರಿಸಲಾರೆನು. ತುಯ್ಯಲಾದೊಡೆ, ಉಂಬೆ, ಹುಯ್ಯಲಾದೊಡೆ ಓಡುವೆ. ಆಳು ಬೇಡಿದೊಡೆ ಆಳ್ದನೆನಗೀವನಯ್ಯ ಆಳಾಗಿ ಹೊಕ್ಕು, ಅರಸಾಗಿ ನಡೆದಡೆ ಅಳಿಗೊಂಡಿತ್ತೆನ್ನ ಕೂಡಲಸಂಗನ ಭಕ್ತಿ.

೬. ಇರಿಸಿಕೊಂಡು ಭಕ್ತರಾದರೆಮ್ಮವರು. ತರಿಸಿಕೊಂಡು ಭಕ್ತರಾದರೆಮ್ಮವರು. ಜರಿಸಿಕೊಂಡು ಭಕ್ತರಾದರೆಮ್ಮವರು. ಕೊರಿಸಿಕೊಂಡು ಭಕ್ತರಾದರೆಮ್ಮವರು. ಕೂಡಲಸಂಗನ ಶರಣರಿಗೆ ಮುನಿಸ ತಾಳಿ ಎನ್ನ ಭಕ್ತಿ ಅರೆಯಾಯಿತ್ತು.

೭. ಮನಕ್ಕೆ ನಾಚದ ವಚನ, ವಚನಕ್ಕೆ ನಾಚದ ಮನ. ಕುಂದು ಹೆಚ್ಚ ನುಡಿವೆ. ಒಂದು ಮಾತಿನ ಗೆಲ್ಲಕ್ಕೆ ಹಿಡಿದು ಹೋರುವೆ. ಕೂಡಲಸಂಗನ ಶರಣರೆನ್ನಾಳ್ದರೆಂಬೆ.

೮. ಇಲ್ಲವೆಯ ಮೇಲೆ ಕಂಚೊಡೆದಂತೆ, ಬಡಮನವೆನ್ನ ಕಾಡಿಹಿತಯ್ಯ. ಮತಿ ಇಲ್ಲದ ಮರುಳ ನಾನಯ್ಯ! ಭಕ್ತಿಯಿಲ್ಲದ ಬಡವ ನಾನು.! ನಿಮ್ಮ ನೆನಹಿಲ್ಲದೆ ನಿರ್ಭಾಗ್ಯನಾದೆ. ಎನಗೆ ನೀ ಕರುಣಿಸಾ ಕೂಡಲಸಂಗಮದೇವಾ.

೯. ಲಿಂಗವ ನೆಚ್ಚದೀ ಮನವು. ಜಂಗಮವ ನಂಬದೀ ಮನವು. ಕೂಪರ ಕಂಡರೆ, ಒಲ್ಲದೀ ಮನವು. ಈ ಮನದ ಭ್ರಮೆಯನೆಲ್ಲವ ಮರಿಸಿ ನಿಮ್ಮ ಶರಣರಿಗೆ ಶರಣೆಂಬುದ ಕರುಣಿಸು ಕೂಡಲಸಂಗಮದೇವಾ..

೧೦. ಅಶನ ಕುಂದದು. ವ್ಯಸನ ಮಾಣದು, ಅರ್ಥವಡಗದು, ಜೀವಹಾರ ಮಾಣದು. ಮಜ್ಜನಕ್ಕೆರೆವೆನಯ್ಯ! ಕಾಯವಿಕಾರಿ ಯಾನು. ಮಜ್ಜನಕ್ಕೆರೆವೆನಯ್ಯ ! ಜೀವವಿಕಾರಿಯಾನು. ಮಜ್ಜನಕ್ಕೆರೆವೆನಯ್ಯಾ! ಶರಣನಲ್ಲ, ಲಿಂಗೈಕ್ಯನಲ್ಲ. ಕೂಡಲಸಂಗಮ ದೇವರಲ್ಲಿ ಅಂತರಜೆಂತರ ನಾನಯ್ಯಾ.

೧೧. ಕುದುರನೇಸು ತೊಳೆದರೆಯು ಕೆಸರು ಮಾಬುದೇ? ಎನ್ನ ಕಾಯದಲುಳ್ಳ ಅವಗುಣಂಗಳ ಕಳೆದು, ಕೃಪೆಯ ಮಾಡಯ್ಯ! ಕಂಬ ಳಿಯಲ್ಲಿ ಕಣಕವ ನಾದಿದಂತೆ, ಕಾಣಿರೆ ಎನ್ನ ಮನ. ಕೂಡಲಸಂಗ ಮದೇವ ನಿಮಗೆ ಶರಣೆಂದು ಶುದ್ಧ ಕಾಣಯ್ಯ.

೧೨. ಕಾಮಧೇನು ನಿಮ್ಮ ಸಾರಿರಲು ಪರರ ಬೇಡಲಾರೆನಯ್ಯ! ನಿಮ್ಮುವ ಪೂಜಿಸಿ ಭವಬಂಧನ ಬಿಡದೇಕಯ್ಯಾ? ಹಿಂದಣ ಜನ್ಮದ ಚಿಹ್ನ ಬಿಡದನ್ನಕ್ಕ, ನಿಮ್ಮ ಪೂಜಿಸಿ ಏವೆನಯ್ಯ! ಎನ್ನ ಮನದ ಅವಗು ಣವ ಕಳೆದು ನಿಮ್ಮ ಶರಣರಿಗೆ ಶರಣೆಂಬುದ ಕರುಣಿಸು ಕೂಡಲ ಸಂಗಮದೇವಾ.

೧೩. ದುರ್ವ್ಯಸನಿ, ದುರಾಚಾರಿ ಎಂದೆನಿಸದಿರಯ್ಯಾ! ಎನ್ನ ಲಿಂಗ ವ್ಯಸನಿ ಜಂಗಮಪ್ರೇಮಿ ಎಂದೆನಿಸಯ್ಯ. "ಅವಶ್ಯ ಮನುಭೋಕ್ತ ವ್ಯಂ" ಎಂದೆನಿಸದಿರಯ್ಯ! ಕೂಡಲಸಂಗಮದೇವಾ ಸೆರೆಗೊಡ್ಡಿ ಬೇಡು ವೆನು.

೧೪. ಧೃತಿಗೆಟ್ಟು ಅನ್ಯರ ಬೇಡದಂತೆ, ಮತಿಗೆಟ್ಟು ಪರರ ಹೊಗಳದಂತೆ, ಪರಸತಿಯ ರತಿಗೆ ಮನವೆಳಿಸಿದಂತೆ ಶಿವಪಥ ಒಲ್ಲ ದವರೊಡನಾಡದಂತೆ, ಅನ್ಯಜಾತಿಯ ಸಂಗವ ಮಾಡದಂತೆ, ಎನ್ನ ಪ್ರತಿ ಪಾಲಿಸು ಕೂಡಲಸಂಗಮದೇವಾ.

೧೫. ಮತ್ತೊಂದ ಕಾಣದಂತೆ, ಮತ್ತೊಂದ ಕೇಳದಂತೆ, ನಿಮ್ಮ ಶರಣರ ಪಾದವಲ್ಲದೆ ಅನ್ಯವಿಷಯಕ್ಕೆಳಸದಂತೆ ಇರಿಸಯ್ಯಾ ಕೂಡಲ ಸಂಗಮದೇವಾ.

೧೬. ಪುತ್ರಿಪುಂದನಾಗಿ ಗತಿಯ ಕಾಣದೆ ಇದ್ದೆನಯ್ಯ! ಹುಟ್ಟು ಗುರುಡನ ಕೈಯ್ಯಕೋಲು ಕೊಟ್ಟು ನಡಿಸುವಂತೆ, ನಡಿಸಯ್ಯ ಎನ್ನ! ನಿಮ್ಮ ಶರಣರ ಮಿಕ್ಕುದ ಒಕ್ಕುದ ನಜ್ಜಿಸು ಮಜ್ಜಿಸು ಕೂಡಲಸಂಗಮ ದೇವಾ.

೧೭. ಕಾಣದುದನೆಲ್ಲವ ಕಾಣಲಾರೆನಯ್ಯ! ಕೇಳದುದನೆಲ್ಲವ ಕೇಳ ಲಾರೆನಯ್ಯ! ದ್ರೋಹವಿಲ್ಲ ಎಮ್ಮ ಶಿವನಲ್ಲಿ. ನೀವೆಯಯ್ಯಾ! ಒಲಿಯ ಮುಂದಿಪ್ಪ ಮಾಡದ ಕನಸ ಕಾಂಬವರನೊಲ್ಲನಯ್ಯ ಕೂಡಲಸಂಗಮ ದೇವಾ.

೧೮. ಕಾಣಬಹುದೆ ಪರುಷದಗಿರಿಯಂಥಕಂಗೆ? ಅರಿಯಬಹುದೆ ರಸದ ಭಾವಿ ನಿರ್ಭಾಗ್ಯಂಗೆ? ತೆಗೆಯಬಹುದೆ ಕಡವರವ ದರಿದ್ರಂಗೆ? ಕರೆಯಬಹುದೆ ಕಾಮಧೇನುವಶುದ್ಧಂಗೆ? ಹೊನ್ನೆಯ ಹುಳವ ಕಂಡು, ನರಿ ತನ್ನ ಬಾಲವ ಹುಣ್ಣು ಮಾಡಿಕೊಂಡರೆ ಹೋಲಬಹುದೆ? ಎನ್ನೊ ಡೆಯ ಕೂಡಲಸಂಗನ ಶರಣರನು ಪುಣ್ಯವಿಲ್ಲದೆ ಕಾಣಬಹುದೆ?

೧೯. ಏತಕ್ಕೆ ನಾ ನಿಮ್ಮ ದೇವರೆಂದರಿದೆನು? ಇಂತಾಗಿ ನೀವೆನ್ನ ನಾರೆಂದರಿಯರಿ. ನಂಬಲರಿಯೆ ನಂಬಿಸಲರಿಯೆ. ಒಲಿಯಲರಿಯೆ, ಒಲಿ ಸಲರಿಯೆ. ॥ ಶ್ಲೋ॥ ಯಥಾಭಾವಸ್ತಥಾಲಿಂಗಂ। ಸತ್ಯಂ ಸತ್ಯಂನ ಸಂಶಯಃ॥ ಯಥಾಭಕ್ತಿಸ್ತಥಾಸಿದ್ಧಿಃ। ಸತ್ಯಂಸತ್ಯಂನಸಂಶಯಃ॥ ಕೂಡಲಸಂಗಮ ದೇವ ಕೇಳಯ್ಯ! ಕೋಟಿ ಕೋಟಿ ವರುಷ ಕೋಟಲೆಗೊಂಡೆನಯ್ಯ.

೨೦. ಅರಿಸಿನವನೆ ಮಿಂದು, ಹೊಂದೊಡಿಗೆಯನೆ ತೊಟ್ಟು ಪುರು ಷನ ಒಲವಿಲ್ಲದ ಲಲನೆಯಂತೆ ಆಗಿದ್ದೆನಯ್ಯಾ! ವಿಭೂತಿಯನೆ ಹೂಸಿ ರುದ್ರಾಕ್ಷಿಯನೆ ಕಟ್ಟಿ, ಶಿವ ನಿಮ್ಮ ಒಲವಿಲ್ಲದಂತೆ ಆಗಿದ್ದೆನಯ್ಯಾ! ಕೆಟ್ಟು ಬಾಳುವರಿಲ್ಲ ಎಮ್ಮವರ ಕುಲದಲ್ಲಿ. ನೀನೊಲಿದಂತೆ ಸಲಹಯ್ಯ, ಕೂಡಲಸಂಗಮದೇವಾ.

೨೧. ಉದಯಾಸ್ತಮಾನವೆನ್ನ ಬೆಂದ ಬಸುರಿಂಗೆ, ಕುದಿಯಲಲ್ಲದೆ ನಿಮ್ಮ ನೆನೆಯಲು ತೆರೆಹಿಲ್ಲವಯ್ಯಾ! ಎಂತೋ ಲಿಂಗ ತಂದೆ, ಎಂತಯ್ಯ! ಎನ್ನ ಪೂರ್ವಲಿಖಿತ ಬೆರಣಿಯನಾಯಲಲ್ಲದೆ, ಅಟ್ಟುಣ್ಣ ತೆರಹಿಲ್ಲೆನಗೆ ನೀ ಕರುಣಿಸು ಕೂಡಲಸಂಗಮದೇವಾ.

೨೨. ತಾನುಸದ ಮುಸುಕು, ಕಂಗಳ ಕೆಡಿಸಿತ್ತೆನ್ನ ಭಕ್ತಿ. ಕಾಮ ವೆಂಬ ಅಗ್ನಿಯಲ್ಲಿ ಮುರಿದಿಕ್ಕಿತ್ತೆನ್ನ ಭಕ್ತಿ. ಉದರಕ್ಕೆ ಕುದಿಕುದಿದು

ಮುಂದು ಗೆಡಿಸಿತ್ತೆನ್ನ ಭಕ್ತಿ. ಇದಿರನಾಶ್ರಯಿಸ ಹೋಯಿತ್ತೆನ್ನ ಭಕ್ತಿ. ಹೆಣಮೂಳ ನಾನು ಕೂಡಲ ಸಂಗಮದೇವಾ ಕ್ಷಣ ಹದುಳವಿರದೆ ಬಾಯಟೊಣೆದು ಹೋಯಿತ್ತೆನ್ನ ಭಕ್ತಿ.

೨೩. ಏನಿಪ್ಪರೇನಿದ್ದರೊಲ್ಲದು ನಿಮ್ಮನುಭಾವಕ್ಕೆನ್ನ ಮನವು. ಡಂಭಕನೆಂಬವ ನಾನು ಕಂಡೆಯ್ಯ. ಕೂಡಲಸಂಗನ ಪೂಜಿಸಿ, ಮಾನವರಾಸೆ ಬಿಡದಾಗಿ.

೨೪. ಜೆಲ್ಲಿಪ ತಿಂದ ಕೋಡಗನಂತೆ ಸಿಹಿಯ ನೆನೆಯದಿರಾ, ಮನವೇ. ಕಬ್ಬ ತಿಂದ ನರಿಯಂತೆ ಹಿಂವಕ್ಕೆಳಿಸದಿರಾ ಮನವೇ. ಗಗನವನಡರಿದ ಕಾಗೆಯಂತೆ, ದೆಸೆದೆಸೆಗೆ ಹಂಬಲಿಸದಿರಾ ಮನವೇ. ಕೂಡಲ ಸಂಗನ ಶರಣರ ಕಂಡು ಲಿಂಗವೆಂದು ನಂಬು ಮನವೇ.

೨೫. ಒಡೆಯನ ಕಂಡರೆ, ಕಣ್ಣನಾಗದಿರಾ ಮನವೇ. ಭವದ ಬಾಧೆಯ ತಪ್ಪಿಸಿಕೊಂಬರೆ, ನೀನು ನಿಯತವಾಗಿ, ಭಯಃಭರಿತನಾಗಿ, ಅಹಂಕಾರಿಯಾಗದೆ ಶರಣೆನ್ನು ಮನವೇ. ಕೂಡಲಸಂಗನ ಶರಣರಲ್ಲಿ ಭಕ್ತಿಯ ನೂನುವರೆ, ಕಿಂಕರನಾಗಿ ಬದುಕು ಮನವೇ.

೨೬. ಕೋಟಾನುಕೋಟಿ ಜಪವ ಮಾಡಿ ಕೋಟಲೆಗೊಳಲದೇಕೆ ಮನವೇ? ಕಿಂಚಿದ್ಗೀತವನಂತಕೋಟಿ ಜಪ. ಜಪವೆಂಬುವೇಕೆ ಮನವೇ? ಕೂಡಲಸಂಗನ ಶರಣರ ಕಂಡು, ಆಡಿ, ಹಾಡಿ, ಬದುಕು ಮನವೇ.

೨೭. ಮನವೇ, ನಿನ್ನ ಜನ್ಮದ ಪರಿಭವವ ಮರೆದೆಯಲ್ಲಾ, ಮನವೇ. ಲಿಂಗವ ನಂಬು ಕಂಡಾ ಮನವೇ. ಜಂಗಮವ ನಂಬು ಕಂಡಾ ಮನವೇ. ಕೂಡಲಸಂಗಮದೇವರ ಬಿಡದೆ ಬೆಂಬತ್ತು ಕಂಡಾ ಮನವೇ.

೨೮. ಸುರರ ಬೇಡಿದರಿಲ್ಲ. ನರರ ಬೇಡಿದರಿಲ್ಲ. ಬರಿದೆ ಧೃತಿಗೆಡಬೇಡ, ಮನವೇ. ಆರನಾವಡೆಯೂ ಬೇಡಿ, ಬೇಡಿ, ಬರಿದೆ ಧೃತಿಗೆಡಬೇಡ ಮನವೇ. ಕೂಡಲಸಂಗಮದೇವನಲ್ಲದೆ, ಆರ ಬೇಡಿದರಿಲ್ಲ ಮನವೇ.

೨೯. ಆಡಿ ಅಳುಪದಿರಾ. ಲೇಸ ಮಾಡಿ ಮರುಗದಿರಾ. ಎಲೆ ಮನವೇ ಕೂಡಿ ತಪ್ಪದಿರಾ. ಬೇಡಿದವರಿಗೆ ಇಲ್ಲೆನ್ನದಿರಾ ಕಂಡ್ಯಾ! ನಾಡಮಾತ ಬೇಡ. ಸೆರೆಗೊಡ್ಡಿ ಬೇಡು, ಕೂಡಲ ಸಂಗನ ಶರಣರ.

೩೦. ಹೃದಯದಿ ಕತ್ತರಿ, ತುದಿ ನಾಲಿಗೆ ಬೆಲ್ಲೆಂಬೋ ಆಡಿಹೆನೆಂಬೋ ಹಾಡಿಹೆನೆಂಬೋ. ನಿಚ್ಚನಿಚ್ಚ ಶಿವರಾತ್ರಿಯ ಮಾಡಿಹೆನೆಂಬೋ. ಆನು ಎನ್ನಂತೆ ಮನ ಮನದಂತೆ, ಕೂಡಲಸಂಗಮದೇವ ತಾನು ತನ್ನಂತೆ.

೩೧. ಒಳ್ಳಿಹ ಮೈಲಾರನ ಒಳಗೆಲ್ಲ ಸಣಬು. ಹೊರಗಣ ಬಣ್ಣಕರ ಲೇಸಾಯಿತ್ತಯ್ಯಾ! ಶ್ವಾನನ ನಿದ್ದೆ ಅಜ್ಞಾನಿಯ ತಪದಂತೆ ಆಯಿತ್ತಯ್ಯ ಎನ್ನ ಮತಿ ಕೂಡಲಸಂಗಮದೇವಾ.

೩೨. ಲೋಕೋಪಚಾರಕ್ಕೆ ಮಜ್ಜನಕ್ಕೆರೆವೆನಯ್ಯಾ! ಮನದ ತಾಮಸ ಬಿಡದು ಮನದ ಕಪಟ ಬಿಡದು, ಶಿವಶರಣೆಂಬುದು ಅಳವಡದಯ್ಯಾ! ಎನ್ನ ಮನದಲ್ಲಿ ಎರಡುಳ್ಳನ್ನಕ್ಕ ಕೂಡಲಸಂಗಮದೇವರೆಂತೊಲಿವ?

೩೩. ಮಜ್ಜನಕ್ಕೆರೆವೆನಲ್ಲದಾನು ಸಜ್ಜನವೆನ್ನಲಿಲ್ಲವಯ್ಯಾ. ಎನ್ನಲ್ಲೇನರಸುವೆ? ನಂಬಿಯೂ ನಂಬದ ಡಂಭ ನಾನಯ್ಯಾ. ಹಾವ ತೋರಿ ಹವಿಯ ಬೇಡುವಂತೆ ಕೂಡಲಸಂಗಮದೇವಾ.

೩೪ ಕೆಲಕ್ಕೆ ಶುದ್ಧನಾದೆನಲ್ಲದೆ ಎನ್ನ ಮನಕ್ಕೆ ಶುದ್ಧನಾಗೆನಯ್ಯಾ! ಕೈಮುಟ್ಟಿ ಪೂಜಿಸುವೊಡೆ, ಎನ್ನ ಕೈ ಶುದ್ಧವಲ್ಲಯ್ಯಾ! ಮನಮುಟ್ಟಿ ಪೂಜಿಸುವೊಡೆ, ಎನ್ನ ಮನ ಶುದ್ಧವಲ್ಲಯ್ಯಾ! ಭಾವ ಶುದ್ಧವಾದೊಡೆ, ಕೂಡಲಸಂಗಯ್ಯನಿತ್ತ ಬಾ, ಎಂದೆತ್ತಿಕೊಳ್ಳನೇಕಯ್ಯಾ ?

೩೫. ಕುಲಮದಕ್ಕೆ ಹೋರಿ, ಜಂಗಮ ಭೇದವ ಮಾಡುವೆ. ಫಲವೇನು ? ನಿತ್ಯ ಲಿಂಗಾರ್ಚನೆ ಪ್ರಾಯಶ್ಚಿತ್ತ. ಛಲಮದಕ್ಕೆ ಹೋರಿ, ಲಿಂಗವ ಭೇದವ ಮಾಡುವೆ. ಜಂಗುಳಿಯ ಕಾವ ಗೋವಳ ಹಲವು ಪಶುವ ನಿವಾರಿಸುವಂತೆ, ತನು ಭಕ್ತನಾಯಿತ್ತು, ಎನ್ನ ಮನಭವಿ, ಕೂಡಲಸಂಗಮದೇವಾ.

೩೭. ಲಿಂಗವಲ್ಲಿ ಕಠಿಣ ಉಂಟೆ? ಜಂಗಮದಲ್ಲಿ ಕುಲ ಉಂಟೆ? ಪ್ರಸಾದದಲ್ಲಿ ಅರುಚಿಯುಂಟೇ? ಈ ತ್ರಿವಿಧದಲ್ಲಿ ಭಾವಭೇದವನರಸು ವೆನು. ಕೂಡಲ ಸಂಗಮದೇವ, ಧಾರೆವಟ್ಟಲೆನ್ನ ಭಕ್ತಿ.

೩೭. ಲೌಕಿಕರ ಕಂಡು, ಆಡುವೆ ಹಾಡುವೆ. ತಾರ್ಕಿಕರ ಕಂಡು, ಆಡುವೆ ಹಾಡುವೆ. ಸಹಜ ಗುಣವೆನ್ನಲಿಲ್ಲಯ್ಯ. ನಿಜಭಕ್ತಿ ಎನಗಿಲ್ಲ. ತಂದೆ ಏಕೋಭಾವ ಎನಗುಳ್ಳರೆ, ಯಾಕೆ ನೀಕರುಣಿಸೆ ಕೂಡಲಸಂಗ ಮದೇವಾ?

೩೮. ಓತಿ ಬೇಲಿವರಿದಂತೆ, ಎನ್ನ ಮನವಯ್ಯ. ಹೊತ್ತಿಗೊಂದು ಪರಿಯಪ್ಪ ಗೋಸುಂಬೆಯಂತೆನ್ನ ಮನವು. ಬಾವಲ ಬಾಳುವೆಯಂತೆನ್ನ ಮನವು. ನಡುವಿರುಳಿದ್ದ ಕುರುಡಂಗೆ ಆಗುಸೆಯಲ್ಲಿ ಬೆಳಗಾದಂತೆ, ನಾನಿಲ್ಲದ ಭಕ್ತಿಯ ಬಯಸಿದರುಂಟೆ ಕೂಡಲಸಂಗಮದೇವಾ?

೩೯. ಸತ್ಯ ಸಂಬಂಧ ಸಯವಾದ ಭೃತ್ಯಾಚಾರವೆನಗಿಲ್ಲಯ್ಯಾ. ಅನುದಿನ ನಿಮ್ಮ ನೆನೆಯಲು ಭಕ್ತಿ ಇಲ್ಲಯ್ಯ ಎನಗೆ. ಕೂಡಲಸಂಗಮ ದೇವಾ, ಕರುಣ ಕೃಪೆಯ ಮಾಡಯ್ಯ.

೪೦. ಶಬ್ದ ಸಂಭಾಷಣೆಯ ನುಡಿಯ ವರ್ಜಿಸಿ ನುಡಿವೆ. ತೊಡೆ ಪದ ಕೆಲಸದ ಬಣ್ಣದಂತೆ, ಕಡಿಹಕ್ಕೆ ಒರೆಗೆ ಬಾರದು ನೋಡಾ! ಎನ್ನ ಮನದಲೊಂದು, ಹೃದಯದಲೊಂದು, ವಚನದಲೊಂದು ನೋಡಾ! ಕೂಡಲಸಂಗಮದೇವಾ ಆನು ಭಕ್ತನೆಂಬ ಹುಸಿಯ ಮಸಕವನೇನ ಬಣ್ಣಿಸುವೆನಯ್ಯ?

೪೧. ಹಾಲತೊರೆಗೆ ಬೆಲ್ಲದ ಕೆಸರು, ಸಕ್ಕರೆಯ ಮಳಲು, ತವ ರಾಜದ ನೊರೆತೆರೆಯಂತೆ ಆದ್ಯರ ವಚನವಿರಲು, ಬೇರೆ ಬಾವಿಯ ತೋಡಿ, ಉಪ್ಪುನೀರನುಂಬವನ ವಿಧಿಯಂತೆ ಆಯಿತ್ತೆನ್ನ ಮತಿ ಕೂಡ ಲಸಂಗಮದೇವಾ

೪೨. ಜನ್ಮಹೊಲ್ಲೆಂಬೆನೆ? ಜನ್ಮವ ಬಿಡಲಹೆನು. ಭಕ್ತರೊಲವ ಪಡೆವನೆ? ಭಕ್ತಿಯ ಪಥವನರಿವೆನು. ಲಿಂಗವೆಂದು ಬಲ್ಲೆನೆ? ಜಂಗ ಮವೆಂದು ಕಾಂಬೆನು. ನಿಚ್ಚ ಶಿವರಾತ್ರಿಯ ಮಾಡಬಲ್ಲೆನೆ? ಕೈಲಾಸವ

ಕಾಣಬಲ್ಲೆನು. ಎನ್ನಲ್ಲಿ ನಡೆ ಇಲ್ಲವಾಗಿ, ನಾನು ಭಕ್ತನೆಂತಹನಯ್ಯ ಕೂಡಲಸಂಗಮದೇವಾ ?

೪೩. ಉಡುವಿನ ಭವದಲ್ಲಿ ಹಡಪರೆನ್ನುವರು. ಉಸಿರುವಳ್ಳಿಯಂತೆ ಎನ್ನಿರವು. ಬಾವಲ ಬಾಳುವೆಯ ತೆರನಂತೆ, ಹೊತ್ತಾರೆ ಎದ್ದ ಕುರುಡಂಗೆ ಅಗುಸೆಯಲ್ಲಿ ಅಸ್ತಮಯವಾದಂತೆ, ಆನು ಭಕ್ತಿಯ ಬಯಸಿದರಹುದೆ ಕೂಡಲಸಂಗಮದೇವಾ?

೪೪. ಬಸಿರ ಬಾಳುವೆಗೆ ನಿಮ್ಮಲ್ಲಿ ಮಸಿಯ ಹೂಸಿ, ನೇರಿಲಹಣ್ಣ ಮಾರುವಂತೆ, ಕಾಲಸಾಲ ದಾರಿದ್ರಕ್ಕಂಜಿ ನಿಮ್ಮ ಮರೆಹೊಕ್ಕೆನಯ್ಯ!ಆವುದು ಹುಸಿ ಎಂಬೆ ಆವುದು ಕಿರಿದೆಂಬೆ? ಇದ ನೀನೇ ಬಲ್ಲೆಯಯ್ಯಾ. ಕೂಡಲಸಂಗಮದೇವಾ, ನಾನು ಉದರ ಪೋಷಕನಯ್ಯಾ.

೪೫. ಮೂಗ ಕಂಡ ಕನಸಿನಂತಾಯಿತ್ತಯ್ಯ. ಎನ್ನ ಭಕ್ತಿ ಗುಣವ ಹೇಳಬಾರದಾರಿಗೆಯೂ. ಕೇಳಲೆಂತೂ ಬಾರದು. ಎನ್ನ ಎಗ್ಗತನವ ಮಾಣಿಸು, ಕೂಡಲಸಂಗಮದೇವಾ.

೪೬. ಕಾಣಿಯ ಲೋಭ, ಕೋಟಿಯ ಲಾಭವ ಕೆಡಿಸಿಸುದನಾನರಿಯೆನಯ್ಯ. ಭಕ್ತಿಯ ಕುಳವನಾನರಿಯದೆ ಮತಿಗೆಟ್ಟ ಪರಿಯ ನಾನರಿಯೆನಯ್ಯ. ಕೂಡಲಸಂಗನ ಶರಣರ ಸಂಗದಿಂದರಿದರೆ, ನಾನು ಬದುಕುವೆನಯ್ಯಾ.

೪೭. ಏನನೋದಿ, ಏನ ಕೇಳಿ, ಏನ ಮಾಡಿಯೂ ಫಲವೇನು, ನಿನ್ನವರೊಲಿಯದನ್ನಕ್ಕ? ಶಿವಶಿವ, ಮಹಾದೇವ, ಬಾಳಿಲ್ಲದವಳ ಒಲೆಯಂತಾಯಿತ್ತೆನಗೆ ಕೂಡಲಸಂಗಮದೇವಾ.

೪೮. ಮುನ್ನೂರರುವತ್ತು ದಿನ ಶ್ರಮವ ಮಾಡಿ, ಕಳನೇರಿ ಕೈಮರೆದಂತಾಯಿತ್ತೆನ್ನ ಭಕ್ತಿ. ಎನಿಸು ಕಾಲ ಲಿಂಗಾರ್ಚನೆಯ ಮಾಡಿ ಏವೆನಯ್ಯ, ಮನದಲ್ಲಿ ದೃಢವಿಲ್ಲದನ್ನಕ್ಕ? ಕೊಡನ ತುಂಬಿದ ಹಾಲನೆಡಹಿ, ಉಡುಗಲೆನ್ನಳವೆ ಕೂಡಲಸಂಗಮದೇವಾ?

೪೯. ಶಬ್ದ ಸುಖಕ್ಕೆ ಮೆಚ್ಚಿ ಮಾತಿಂಗೆ ಮಾತನೆ ಕೊಟ್ಟು, ಕೆಟ್ಟೆನಯ್ಯಾ! ಅನುಭಾವ ಅಕ್ಕನೆಯಾಗದೆ ಬೆಬ್ಬನೇ ಬೆರೆತೆನಯ್ಯಾ! ಅಮೃತವ

ಕೊಡನ ತುಂಬಿ ಒಡೆಯು ಹೊಯಿದು, ಅರಸಲುಂಟೇ? ಸ್ವಾಮಿ ಭೃತ್ಯ
ಸಂಬಂಧವೆನ್ನ ಭಕ್ತಿ. ಪ್ರತ್ಯುತ್ತರ ನಾಯಕನರಕ, ಕೂಡಲಸಂಗಮ
ದೇವಾ.

೫೦. ಅಂಕ ಓಡಿದರೆ, ತೆತ್ತಿಗಂಗೆ ಭಂಗವಯ್ಯಾ. ಕಾದಿ ಗೆಲಿಸಯ್ಯಾ
ಎನ್ನನು, ಕಾದಿ ಗೆಲಿಸಯ್ಯಾ! ಕೂಡಲಸಂಗಮದೇವಯ್ಯಾ, ಎನ್ನ ತನು ಮನ
ಧನದಲ್ಲಿ ವಂಚನೆ ಇಲ್ಲದೆ.

೫೧. ಹೇಡಿ ಬಿರಿದು ಕಟ್ಟಿದಂತಾಯಿತ್ತೆನ್ನ ವೇಷ. ಕಾದಬೇಕು.
ಕಾದುವರೆ ಮನವಿಲ್ಲ. ಆಗಳೇ ಹೋಯಿತ್ತು ಬಿರಿದು. ಹಗರಣ ನಗೆ
ಗೆಡೆಯಾಯಿತ್ತು. ಮಾಹಾಂತಕ ಜಂಗಮ ಮನೆಗೆ ಬಂದರೆ, ಕಾಣ
ದಂತಡ್ಡ ಮುಸುಡಿಟ್ಟರೆ, ಕೂಡಲಸಂಗಮದೇವ ಜಾಣ ಮೂಗ ಕೊಯ್ದು,
ಹಲ್ಲು ದೋರಿ.

೫೨. ಅಚ್ಚ ಶರಣರು ನಿಮ್ಮ ನಿಚ್ಚ ನೆನೆವರು. ಬಚ್ಚಬರಿಯ ಮಾತ
ನಾಡುವೆನು. ಒಪ್ಪಚ್ಚಿ ಅರೆಭಕ್ತಿ ನೆನೆಯಲೀಯ್ಯದು ನಿಮ್ಮ ಮೆಚ್ಚರು
ನಿಮ್ಮ ಶರಣರು ಎನ್ನ ಕೂಡಲಸಂಗಮದೇವಾ.

೫೩. ಆಡುವದಳವಟ್ಟಿತ್ತು. ಹಾಡುವದಳವಟ್ಟಿತ್ತು. ಅರ್ಚನೆ ಅಳ
ವಟ್ಟಿತ್ತು. ಪೂಜನೆ ಅಳವಟ್ಟಿತ್ತು. ನಿತ್ಯ ಲಿಂಗಾರ್ಚನೆ ಮುನ್ನವೇ ಅಳವ
ಟ್ಟಿತ್ತು. ಕೂಡಲಸಂಗನ ಶರಣರು ಬಂದರೆ, ಏಗೊವೆ ಬೆಸನೆಂಬುದು ಒಪ್ಪ
ಚ್ಚಿಯುಳವಡದು.

೫೪. ಒಡೆಯರಿಗೊಡವೆಯನೊಪ್ಪಿಸಲಾರದೆ, ಮೊರೆ ಇಡುವ ಮಾ
ನವ ನಾನೇನೆಂಬೆ? ನೆತ್ತಿಯಲ್ಲಿ ಅಲಗು ತಿರುಹುವಂತಪ್ಪ ವೇದನೆಯ
ಹುದೆನಗೆ. ಕೊಯ್ದ ಮೂಗಿಂಗೆ ಕನ್ನಡಿಯ ತೋರುವಂತಪ್ಪ ವೇದನೆಯ
ಹುದೆನಗೆ. ಬೆಂದ ಹುಣ್ಣ ಕಂಬಿಯಲ್ಲಿ ಕೀಸುವಂತಪ್ಪ ವೇದನೆಯಹು
ದೆನಗೆ. ಕೂಡಲಸಂಗಮದೇವ ಮಾಡಿ ನೋಡುವ ಹಗರಣವ ನಾ ಮಾಡಿ
ಹೆನೆಂದರೆ ಮನಕ್ಕೆ ಮನ ನಾಚದೆ ಅಯ್ಯಾ?

೫೫. ಹೊರಿಸಿಕೊಂಡು ಹೋದ ನಾಯಿ ಮೊಲನೇನ ಹಿಡಿವು
ದಯ್ಯಾ? ಇರಿಯದ ವೀರ, ಇಲ್ಲದ ಸೊಬಗುವ ಹೇಳುವುದೇ ನಾಚಿಕೆ.
ಆನು ಭಕ್ತನೆಂತೆಂಬೆನಯ್ಯಾ, ಕೂಡಲಸಂಗಮದೇವಾ?

೫೬. ಎನ್ನ ಭಕ್ತನೆಂದೆಂಬರು, ಎನ್ನ ಹೊರಹಂಚೆ ಒಳಜೊಳ್ಳೆತನವನರಿಯರಾಗಿ. ಎನ್ನ ಮಾನಾಪಮಾನವು ಶರಣರಲ್ಲಿ, ಜಾತಿವಿಜಾತಿಯು ಶರಣರಲ್ಲಿ, ತನುಮನ ಧನವು ಶರಣರಲ್ಲಿ. ವಂಚನೆಯುಳ್ಳ ಡಂಭಕ ನಾನು. ತಲೆಯೊಡೆಯಂಗೆ ಕಣ್ಣ ಬೈಚಿಡುವೆ ಕೂಡಲಸಂಗಮದೇವಾ.

೫೭. ನೋಡುವರುಳ್ಳರೆ ಮಾಡುವೆ ದೇಹಾರವ. ಎನಗೊಂದು ನಿಜವಿಲ್ಲ. ಎನಗೊಂದು ನಿಷ್ಪತ್ತಿ ಇಲ್ಲ. ಲಿಂಗವ ತೋರಿ ಉದರವ ಹೊರೆವ ಭಂಗಾರ ನಾನು ಕೂಡಲಸಂಗಮದೇವಾ.

೫೮. ಭಕ್ತಿ ಎಳ್ಳಿನಿತಿಲ್ಲ. ಯುಕ್ತಿ ಶೂನ್ಯನಯ್ಯ ನಾನು. ತನುವಂಚಕ ಮನವಂಚಕ ಧನವಂಚಕ ನಾನಯ್ಯ! ಕೂಡಲಸಂಗಮದೇವ ಪುಳಲೊಟ್ಟೆಲೆನ್ನ ಮಾತು.

೫೯. ತನು ನಿಮ್ಮದೆಂಬೆ, ಮನ ನಿಮ್ಮದೆಂಬೆ, ಧನ ನಿಮ್ಮದೆಂಬೆ. ಮತ್ತೆಯೂ ವಂಚನೆ ಮಾಣದಯ್ಯಾ! ಲಿಂಗ ಜಂಗಮವೆಂಬೆ ಜಂಗಮ ಲಿಂಗವೆಂಬೆ ಮತ್ತೆಯೂ ವಂಚನೆ ಮಾಣದಯ್ಯ. ಒಡಲೊಡವೆ ಹಡೆವರ್ಥ ನಿಮ್ಮದೆಂದರಿಯದೆ ಕೆಮ್ಮನೆ ಕೆಟ್ಟೆ ಕೂಡಲಸಂಗಮದೇವಾ.

೬೦. ಊರ ಸೀರೆಗೆ ಅಸಗ ಬಡಿವಡೆದಂತೆ, ಹೊನ್ನೆನ್ನದು, ಹೆಣ್ಣೆನ್ನದು ಮಣ್ಣೆನ್ನದು ಎಂದು ಮರುಳಾದೆ. ನಿಮ್ಮನರಿಯದ ಕಾರಣ ಕೆಮ್ಮನೆ ಕೆಟ್ಟೆ ಕೂಡಲಸಂಗಮದೇವಾ.

೬೧. ಅರ್ಥಪ್ರಾಣಾಭಿಮಾನ ನಿಮ್ಮದೆಂಬೆ. ಮತ್ತೆಯೂ ಆಸೆ ಬಿಡದನ್ನಕ್ಕ, ಭಕ್ತನೆಂತಪ್ಪನಯ್ಯಾ! ಶರಣನೆಂತೆನಿಸುವೆನಯ್ಯಾ! ಕೂಡಲಸಂಗನ ಶರಣರ ಸಕಲ ರತಿಗೆ ಸಲ್ಲದನ್ನಕ್ಕ?

೬೨. ನಿಮ್ಮ ಭಕ್ತಿಯಲ್ಲಿ ದರದುರನೆಂಬೆ. ದಿಟಕ್ಕೆ ಬಂದರೆ, ಅಷ್ಟಮುಖವಿಕ್ಕುವೆ. ಗರುಡಂಗೆ ಘಟಸರ್ಪನ ತೋರುವಂತೆ, ಶಿವಶರಣರೆಂದರೆ, ಕಿವಿ ಕೇಳದಂತಿಹೆನು. ಮನಕ್ಕೆ ಮನ ಸಾಕ್ಷಿಯಯ್ಯಾ, ಕೂಡಲಸಂಗಮದೇವಾ.

೬೩. ಆದ್ಯರ ವಚನ ಪರುಷವೆಂದೆಂಬೆನು. ಆ ಪರುಷವೆನಗೆಂತು ದೊರೆಕೊಂಬುದಯ್ಯಾ! ತನುಮನಧನವ ವಿವರಿಸಿ ನುಡಿವೆ. ಸೋಂಕಿಂಗೆ ಸೈರಿಸಲಾರೆ. ಹೊಲೆಯರ ಮುದ್ದಳೆಯಂತೆ ನುಡಿವ ಡಂಭಕ ನಾನಯ್ಯಾ, ಕೂಡಲಸಂಗಮದೇವಾ.

೬೪. ಕಾಂಚನವೆಂಬ ನಾಯ ನೆಚ್ಚಿ ನಿಮ್ಮ ನಾನು ಮರೆದೆನಯ್ಯಾ! ಕಾಂಚನಕ್ಕೆ ವೇಳೆಯಲ್ಲದೆ ಲಿಂಗಕ್ಕೆ ವೇಳೆ ಇಲ್ಲ. ಹಡಿಕಿಗೆ ಮೆಚ್ಚಿದ ಸೊಣಗನು ಅಮೃತದ ರುಚಿಯ ಬಲ್ಲುದೆ ಕೂಡಲಸಂಗಮದೇವಾ?

೬೫. ಒಲಿವ ಗಂಡನೊಮ್ಮೆ ಒಲ್ಲದಿಪ್ಪ ಕಂಡವ್ವಾ! ತಪ್ಪೆನ್ನದು ತಪ್ಪೆನ್ನದು. ತನುಮನ ಧನವಲ್ಲಿ ಮಾಟ ಕೂಟ ವೆಂದರಿಯದ ತಪ್ಪೆನ್ನದು, ತಪ್ಪೆನ್ನದು. ಕಡೆ ಇಲ್ಲದ ಹುಸಿ ಎನ್ನದು, ಕೂಡಲಸಂಗಮದೇವಾ.

೬೬. ಕಾಣುತ್ತ ಕಡೆಗಾಣಿಸಿ ಕೆಡಿಸಿಯರಸುವ ಮತಿಭ್ರಷ್ಟ ನಾನು ಲಿಂಗಯ್ಯಾ! ತನುಲೋಭ, ಮನಲೋಭ, ಧನಲೋಭ ಮುಂದುಗೆಡಿಸಿ ಕಾಡಿಹವೆನ್ನ. ತನುಮನಧನವ ನಿವೇದಿಸಿದವರ ಮನೆಯ ಮಗ ನಾನಯ್ಯಾ, ಕೂಡಲಸಂಗಮದೇವಾ.

೬೭. ಹಗೆಯಲ್ಲಿ ಬಿದ್ದವರ ಮೇಲೆ ಒರಳ ನೂಂಕುವರೆ? ಕೊಳದ ಮೇಲೆ ಸಂಕೋಲೆಯನಿಕ್ಕುವರೆ? ಬೆಂದ ಹುಣ್ಣ ಕಂಬಿಯಲ್ಲಿ ಕೀಸುವರೆ? ಕೂಡಲಸಂಗಯ್ಯ ಕಾಡುವ ಕಾಟ ಸಿರಿಯಾಳಂಗಲ್ಲದೆ ಸೈರಿಸಬಹುದೆ?

೬೮. ಸೋಲಲೊಲ್ಲರು, ಅವರು ಗೆಲಲರಿಯರಯ್ಯಾ! ತನುಮನ ಧನದಲ್ಲಿ ವಂಚನೆಯನರಿಯರಯ್ಯಾ! ದಾಸ ಸಿರಿಯಾಳನವರು ಕೂಡಲಸಂಗನ ಶರಣರು ಉಪಚಾರವನರಿಯರಯ್ಯಾ.

೬೯. ಮಾತಿನಲ್ಲಿ ಶ್ರೋತ್ರ ಸುಖವ ನುಡಿಯಬಹುದಲ್ಲದೆ, ಮಾಡುವ ಸತ್ಕ್ರಿಯೆಯಿಂದ ಭಕ್ತನೆನಿಸಲು ಬಾರದು. ಅರ್ಥ ಪ್ರಾಣಾಭಿಮಾನ ವಾರಿಗೆಯೂ ಸಮನಿಸದು. ಲಿಂಗ ಮುಖದಲುದಯವಾದ ಶರಣಂಗಲ್ಲದೆ, ಅಯ್ಯಾ! ಕೂಡಲಸಂಗನ ಶರಣರ ಭಕ್ತಿ ಭಂಡಾರವು ಎನಗೆಂತು ಸಾಧ್ಯವಪ್ಪುದು ಹೇಳೆನ್ನ ತಂದೆ?

೭೦. ಬಾಣಮಯೂರನಂತೆ ಬಣ್ಣಿಸಬಲ್ಲೆನೆ? ಸಿರಿಯಾಳನಂತೆ ಉಣಲಿಕ್ಕ ಬಲ್ಲೆನೆ? ದಾಸಿಮಯ್ಯನಂತೆ, ಉಡಕೊಡಬಲ್ಲೆನೆ? ಉಂಡುಟ್ಟು ಕೊಟ್ಟರೆ ಮುಯ್ಯಿಗೆ ಮುಯ್ಯೆನಿಸಿತ್ತು. ಎನಗೆ ಕೊಟ್ಟರೆ, ಧರ್ಮ ಕೂಡಲ ಸಂಗಮದೇವಾ.

೭೧. ದಾಸಿದೇವ ತನ್ನ ವಸ್ತ್ರವನಿತ್ತು ತವನಿಧಿಯ ಪ್ರಸಾದವ ಪಡೆದ. ಸಿರಿಯಾಳ ತನ್ನ ಮಗನನಿತ್ತು ಪ್ರಾಣ ಪ್ರಸಾದವ ಪಡೆದ. ಬಲ್ಲಾಳ ತನ್ನ ವಧುವನಿತ್ತು ಸಮತೆ ಪ್ರಸಾದವ ಪಡೆದ. ಇವರೆಲ್ಲರು ತಮತಮಗೆ ಮಾಡಿ ಹಡೆದರು ಸದ್ಯಕ್ಕವನರಿಯನು. ನಾನೇನು ಅರಿಯದ ಭಕ್ತಿಯ ಬಡವಂಗೆ ಕರುಣಿಸು ಕೂಡಲಸಂಗಮದೇವಾ.

೭೨. ತ್ರಿವಿಧ ತ್ರಿವಿಧದಲ್ಲಿ ತಪ್ಪಿದ ತಪ್ಪುಕ ನಾನಯ್ಯ! ಒಮ್ಮಿಂಗೆ ಕರುಣಿಸಯ್ಯ! ಇದನರಿದು ಇನ್ನು ತಪ್ಪಿದೆನಾದರೆ, ನೀವು ಮಾಡಿತ್ತೆ ಸಲುವುದು ಕೂಡಲಸಂಗಮದೇವಾ.

೭೩. ಎನ್ನ ತಪ್ಪು ಅನಂತಕೋಟಿ. ನಿಮ್ಮ ಸೈರಣೆಗೆ ಲೆಕ್ಕವಿಲ್ಲ. ಇನ್ನು ತಪ್ಪಿದೆನಾದರೆ, ನಿಮ್ಮ ಪಾದವೇ ದಿಬ್ಯ. ಕೂಡಲಸಂಗಮದೇವಯ್ಯ ನಿಮ್ಮ ಪ್ರಮಥರ ಮುಂದೆ ಕಿನ್ನರೀ ಬೊಮ್ಮಣ್ಣನೇ ಸಾಕ್ಷಿ.

೭೪. ಅಡಿಗಡಿಗೆ ಎನ್ನ ಮನವ ಜಡಿದು ನೋಡದಿರಯ್ಯ! ಬಡವನೆಂದೆನ್ನ ಕಾಡದಿರಯ್ಯ! ಎನಗೊಡೆಯರುಂಟು, ಕೂಡಲಸಂಗನ ಶರಣರು.

೭೫. ಭಕ್ತಿ ವಿಶೇಷವ ಮಾಡುವರೆ, ಹತ್ತು ಬೆರುಳುಂಟು. ಹಾಸಿ ದುಡಿವರೆ, ತನಗುಂಟು, ತನ್ನ ಪ್ರಮಥರಿಗುಂಟು. ಮಾರಿತಂದೆಗಳಂತೆ, ಎನಗೇಕಹುದಯ್ಯಾ! ರತ್ನನ ಸಂಕೊಲೆಯನಿಕ್ಕಿ ಕಾಡಿಹ ಕೂಡಲ ಸಂಗಮದೇವ, ಶಿವಧೋ ಶಿವಧೋ.

೭೬. ಮನೆ ನೋಡಾ ಬಡವರು. ಮನ ನೋಡಾ, ಘನ. ಸೋಂಕಿನಲ್ಲಿ ಶುಚಿ, ಸರ್ವಾಂಗ ಕಲಿ. ಪಸಾರಕ್ಕನುವಿಲ್ಲ. ಬಂದ ತತ್ಕಾಲಕ್ಕುಂಟು. ಕೂಡಲಸಂಗನಶರಣರು ಸ್ವತಂತ್ರ ಧೀರರು.

೭೭. ತತ್ವಪನರಿವಿಹೆನೆಂಪು ಪ್ರತ್ಯಕ್ಷವ ಕರೆಕೊಂಡೆನೆಯ್ಯ! ನಾನೆತ್ತಬಲ್ಲೆನು, ನಿಮ್ಮ ಶರಣರಂತುವನು? ನಾನೆತ್ತಬಲ್ಲೆ ನಿಮ್ಮ ಪ್ರಮಥರಂತುವನು? ಸರ್ವಾಪರಾಧಿಯಾನು, ಎನ್ನ ಮನವ ಕೊನೆಯು ಸೂತಕ ಹಿಂಗವು ಕೂಡಲಸಂಗಮದೇವಾ.

೭೮. ಆ ಮಿಹಿಲಾಳು ಭೋಜದೇವ ಬಲ್ಲಾಳು ಆನು ಸೂಳೆನ ಪ್ರುಸ್ತ್ರ ಸೂಳೆ. ಜೆಳ್ಳಿಗೆ ಆವಿನ ಕರುನೆಂದರೆ ಅದು ಬಳ್ಳವಾಲು ಕರೆವುದೇ ಕೂಡಲಸಂಗನ ಶರಣರ ಮುಂದೆ ನಾನು ಕಾದೆನು ಬಾಬಿಸಿಲೆ.

೭೯. ಆನೆ ಆ ದಾರಿಯಲ್ಲಿ ಹೊಯಿತ್ತೆಂದರೆ, ಅದು ಆ ದಾರಿಯಲ್ಲಿ ಹೋಯಿತ್ತೆನ್ನಬಹುದೇ? ಸಂಗನ ಶರಣರಿಗೆ ಆನು ಸರಿ ಎಂದು ಗಳಹಲು ಬಹುದೆ? ಜಂಗಮಕ್ಕೆ ಮಾಡುವ ಭಕ್ತಂಗೆ ಆನು ಸರಿಯೆ, ಹೇಳಾ ಕೂಡಲಸಂಗಮದೇವಾ?

೮೦. ಆ ಕರಿಯಾಕೃತಿಯು ಸೂಕರನ ಹೋಲಿಸಿದರೆ, ಸೂಕರ ಕರಿಯಾಗಬಲ್ಲುದೇ? ಭೂನಾಗನಾಕೃತಿಯನು ವ್ಯಾಳೇಶನ ಹೋಲಿಸಿದರೆ, ಅದು ವ್ಯಾಳೇಶನಾಗಲರಿವುದೆ? ನಾನು ಭಕ್ತನಾದರೇನಯ್ಯ! ನಮ್ಮ ಕೂಡಲಸಂಗಮದೇವರ ಸದ್ಭಕ್ತರ ಹೋಲಲರಿವೆನೆ?

೮೧. ಪೋಟನ ಮೌಳಿ, ಮೂಕೊರೆಯನ ಸೃಂಗಾರ, ಬೇಟ ಕುರುಡಂಗೆ ನಗೆಗೆಡೆಯಾಯಿತ್ತು. ನಮ್ಮ ಕೂಡಲಸಂಗನ ಶರಣರ ಮುಂದೆ, ಆನು ಭಕ್ತನೆಂಬ ನಾಚಿಕೆ ಸಾಲದೆ?

೮೨. ಮೂಗಿಲ್ಲದ ಮುಖಕ್ಕೆ ಸೃಂಗಾರವೆ? ವಿಕೃತವೇಷಧಾರಿಯಾನು, ಭಂಡನು, ಲಜ್ಜೆಭಂಡನು, ಕೂಡಲಸಂಗಮದೇವನ ಶರಣರಲ್ಲಿ ಹಾವ ತೋರಿ ಹವಿಯ ಬೇಡುವಂತೆ.

೮೩. ಮಾವಿನ ಕಾಯೊಳಗೊಂದು ಎಕ್ಕೆಯ ಕಾಯಿ ನಾನೈಯ್ಯ! ಆನು ಭಕ್ತನೆಂತೆಂಬೆ, ನಿಮ್ಮ ಶರಣರ ಮುಂದೆ, ನಾಚಿಕೆಯಿಲ್ಲವೆ? ಕೂಡಲಸಂಗನ ಶರಣರ ಮುಂದೆ ನಾನೆಂತು ಭಕ್ತನಪ್ಪೆನಯ್ಯ?

೮೪. ಮರದ ನೆಳಲಲ್ಲಿದ್ದು ತನ್ನ ನೆಳಲನರಸಬಹುದೆ? ನಿಮ್ಮ ಶರಣರ ಮುಂದೆ ನಾನೇತರ ಭಕ್ತನಯ್ಯ? ನಿಮ್ಮ ಶರಣರ ಮುಂದೆ, ನಾನೇ

ತರ ಯುಕ್ತನಯ್ಯ? ಆನು ಭಕ್ತನೆಂಬ ನುಡಿ ಸುಡದೆ ಕೂಡಲಸಂಗಮದೇವಾ?

೮೫. ಎನಗಿಂದ ಕಿರಿಯರಿಲ್ಲ. ಶಿವಭಕ್ತರಿಗಿಂದ ಹಿರಿಯರಿಲ್ಲ. ನಿಮ್ಮ ಪಾದ ಸಾಕ್ಷಿ, ಎನ್ನ ಮನ ಸಾಕ್ಷಿ. ಕೂಡಲಸಂಗಮದೇವಾ ಎನಗಿದೇ ದಿಬ್ಯ.

೮೬. ಆನು ಭಕ್ತನಲ್ಲಯ್ಯ. ಆನು ವೇಷಧಾರಿಯಯ್ಯ. ಕಾಟುಗ, ಕೆತ್ತುಗ, ಪೊಲ್ಲುಗನೆಂಬುದು ಎನ್ನ ಹೆಸರು. ಕೂಡಲಸಂಗಮದೇವಾ, ನಿಮ್ಮ ಶರಣರ ಮನೆಯ ಮಗ ನಾನಯ್ಯ.

೮೭. ಡಂಬ ಡಳುಹು ಎನ್ನದಯ್ಯ! ಡಂಬಕನೆಂಬವ ನಾನಯ್ಯ! ನಿಮ್ಮ ನಂಬಿದ ಶರಣರ ಡಿಂಗರಿಗ ನಾನು, ಕೂಡಲಸಂಗಮದೇವಾ.

೮೮. ಚನ್ನ ಚಾರಮನ ಬಂಟ ನಾನಯ್ಯ. ಎನ್ನ ಚಾಂಗು ಬೊಲ್ಲನ ಕಾವ ಗೋವನೆಂಬರು. ಕೂಡಲಸಂಗನಶರಣರೊಡೆಯರಾಗಿ, ತಮ್ಮ ತೊತ್ತಿನ ಮಗನೆಂದು ಒಲಿದಂತೆ ನುಡಿವರು.

೮೯. ಕಾಲಿಲೊದೆದು, ಬಡಿದು ಜಡಿವರಯ್ಯ! ಭಕ್ತಿಯೈವದೆಂದೆನ್ನ ಜರಿವರಯ್ಯ. ನುಡಿವರಯ್ಯ, ಕೂಡಲಸಂಗನ ಶರಣರೊಡೆಯರಾಗಿ.

೯೦. ನಡೆವರಯ್ಯ ಒಡೆಯರು, ತನುಮನ ಧನದಮೇಲೆ. ನುಡಿವರಯ್ಯ ಒಡೆಯರು ಒಂದು ನಿಮಿಷ ಬಾರದಿದ್ದರೆ. ಜರಿವರಯ್ಯ ಒಡೆಯರು, ಮನಬಂದ ಪರಿಯಲಿ. ಶಿವಶಿವ ಅಣೆವರಯ್ಯ ಮುಂಡಿಯನೂರಿ ಪ್ರಾಣದೊಡೆಯರಯ್ಯ ಕೂಡಲಸಂಗಮದೇವ ನಿಮ್ಮ ಶರಣರು.

೯೧. ಅರ್ಥಪ್ರಾಣಾಭಿಮಾನಕ್ಕೆ ಒಡೆಯರು ಸದ್ಭಕ್ತರಲ್ಲದೆ ಎನಗಾರು ಇಲ್ಲವಯ್ಯ! ಭೃತ್ಯಾಪರಾಧ ಸ್ವಾಮಿನೋದ್ದಂಡ, ಕೂಡಲಸಂಗಮದೇವಾ, ನೀವೇ ಪ್ರಮಾಣು.

೯೨ ಅರ್ಚಿಸಲರಿಯೆ, ಪೂಜಿಸಲರಿಯೆ, ನಿಚ್ಚ ಶಿವರಾತ್ರಿಯ ನಾ ಮಾಡಲರಿಯೆ. ಕಪಟವೇಷದಿಂದಾನು ಬಂದಾಡುವೆ. ಕಪಟವೇಷದಿಂದ ಈಶ ನಿಮ್ಮದಾಸರ ದಾಸಿಯ ದಾಸ ನಾನಯ್ಯ! ನಿಮ್ಮ ವೇಷಧಾರಿಯ

ಮನೆಮಂಗುಳನು ನಾನಯ್ಯ ಕೂಡಲಸಂಗಮದೇವ, ನಿಮ್ಮ ಲಾಂಛನವ ಧರಿಸಿಪ್ಪ ಉದರ ಪೋಷಕ ನಾನಯ್ಯ.

೯೩. ಅಪ್ಪನು ಡೋಹರ ಕಕ್ಕಯ್ಯನಾಗಿ, ಮುತ್ತಯ್ಯ ಚನ್ನಯ್ಯ ನಾದರೆ, ಆನು ಬದುಕುವೆನು. ಮತ್ತಾಪ್ಪಪಚಯ್ಯನ ಸನ್ನಿಧಿಯಿಂದ ಭಕ್ತಿಯ ಸದ್ಗುಣವ ನಾನರಿವೆನಯ್ಯ. ಕಷ್ಟ ಜಾತಿ ಜನ್ಮದಲಿ ಜನಿಸಿದೆ. ಎನಗಿದು ವಿಧಿಯೇ ಕೂಡಲಸಂಗಮದೇವಾ?

೯೪. ಉತ್ತಮ ಕುಲದಲ್ಲಿ ಹುಟ್ಟಿದೆನೆಂಬ, ಕಷ್ಟತನವ ಹೊರೆಯ ಹೊರಿಸದಿರಯ್ಯ! ಕಕ್ಕಯ್ಯನೊಕ್ಕುದ ನಿಕ್ಕ ನೋಡಯ್ಯಾ. ದಾಸಯ್ಯ ಶಿವದಾನವ ನೆರೆಯ ನೋಡಯ್ಯ. ಮನ್ನಣೆಯ ಚನ್ನಯ್ಯನೆನ್ನುವ ಮನ್ನಿಸ. ಉನ್ನತಮಹಿಮ, ಕೂಡಲಸಂಗಮದೇವಾ, ಶಿವಧೋ ಶಿವಧೋ.

೯೫. ಸೆಟ್ಟಿ ಎಂಬೆನೆ ಸಿರಿಯಾಳನ? ಮಡಿವಾಳನೆಂಬೆನೆ ಮಾಚಯ್ಯನ? ಡೋಹರನೆಂಬೆನೆ ಕಕ್ಕಯ್ಯನ? ಮಾದಾರನೆಂಬೆನೆ ಚನ್ನಯ್ಯನ? ಆನು ಹಾರುವನೆಂದಡೆ, ಕೂಡಲಸಂಗಯ್ಯ ನಗುವನಯ್ಯ.

೯೬. ಚನ್ನಯ್ಯನ ಮನೆಯ ದಾಸನ ಮಗನು, ಕಕ್ಕಯ್ಯನ ಮನೆಯ ದಾಸಿಯ ಮಗಳು, ಇವರಿಬ್ಬರೂ ಹೊಲದಲ್ಲಿ ಬೆರಣಿಯನಾಯ ಹೋಗಿ, ಸಂಗವ ಮಾಡಿದರು. ಇವರಿಬ್ಬರಿಗೆ ಹುಟ್ಟಿದ ಮಗ ನಾನು, ಕೂಡಲಸಂಗಮದೇವ ನೀ ಸಾಕ್ಷಿಯಾಗಿ.

೯೭. ಸೂಳೆಗೆ ಹುಟ್ಟಿದ ಕೂಸಿನಂತೆ, ಆರನಾದಡೆಯೂ ಅಯ್ಯ ಅಯ್ಯ ಎನಲಾರೆನಯ್ಯ. ಚನ್ನಯ್ಯನೆಮ್ಮಯ್ಯನು, ಚನ್ನಯ್ಯನ ಮಗ ನಾನು, ಕೂಡಲಸಂಗನ ಮಹಾ ಮನೆಯಲು ಧರ್ಮಸಂತಾನದ ಭಂಡಾರಿ ಬಸವನು.

೯೮ ಹರನು ಮೂಲಿಗನಾಗಿ, ಪುರಾತರೊಳಗಾಗಿ, ಬಳಿಬಳಿಯಲು ಬಂದ ಮಾದಾರನಮಗ ನಾನಯ್ಯ. ಕಳೆದ ಹೊಲೆಯ ನಮ್ಮಯ್ಯ ಜಾತಿ ಸೂತಕ. ಮಾದಾರನ ಮಗ ನಾನಯ್ಯ. ಪನ್ನಗ ಭೂಷಣ ಕೂಡಲ ಸಂಗಯ್ಯ, ಚನ್ನಯ್ಯನೆನ್ನ ಮುತ್ತಯ್ಯನಜ್ಜನಪ್ಪನಯ್ಯ.

೯೮. ಅಪ್ಪನು ನಮ್ಮ ಮಾದಾರ ಚನ್ನಯ್ಯ, ಬೊಪ್ಪನು ನಮ್ಮ ಡೋಹರ ಕಕ್ಕಯ್ಯ. ಚಿಕ್ಕಯ್ಯನೆಮ್ಮಯ್ಯ ಕಾಣಿರಯ್ಯ. ಅಣ್ಣನು ನಮ್ಮ ಕಿನ್ನರಿ ಬೊಮ್ಮಯ್ಯ! ಎನ್ನನೇತಕ್ಕೆ ಅರಿಯಿರಿ ಕೂಡಲಸಂಗಮದೇವ?

೯೯. ಭಕ್ತಿ ಇಲ್ಲದ ಬಡವ ನಾನಯ್ಯ! ಕಕ್ಕಯ್ಯನ ಮನೆಯಲ್ಲು ಬೇಡಿದೆ. ದಾಸಯ್ಯನ ಮನೆಯಲ್ಲು ಬೇಡಿದೆ. ಚನ್ನಯ್ಯನ ಮನೆಯಲ್ಲು ಬೇಡಿದೆ. ಎಲ್ಲ ಪುರಾತರು ನೆರೆದು ಭಕ್ತಿ ಭಿಕ್ಷವನಿಕ್ಕಿದರೆ, ಎನ್ನಪಾತ್ರ ತುಂಬಿತ್ತು, ಕೂಡಲಸಂಗಮದೇವಾ.

೧೦೦. ಹಿರಿಯಯ್ಯ ಶ್ವಪಚಯ್ಯ. ಕಿರಿಯಯ್ಯ ಡೋಹರ ಕಕ್ಕಯ್ಯ. ಆಯ್ಯಗಳಯ್ಯ ನಮ್ಮ ಮಾದಾರ ಚನ್ನಯ್ಯ, ಕೂಡಲಸಂಗಮದೇವಾ ನಿಮ್ಮ ಶರಣರು ಎನ್ನ ಸಲಹುವರಾಗಿ.

೧೦೧. ನಮ್ಮ ತಾಯಿ ನಿಂಬಿಯವ್ವೆ. ನೀರನೆರೆದುಂಬಳು. ನವ್ಮಯ್ಯ ಚನ್ನರಾಯ ಕಂಪಣವ ಹೊರೆವ. ಎಮಗಾರುವಿಲ್ಲವೆಂಬಿರಿ. ನಮ್ಮಕ್ಕ ಕಂಚಿಯಲ್ಲಿ ಬಾಣಸನ ಮಾಡುವಳು. ನಮಗಾರುವಿಲ್ಲವೆಂಬಿರಿ. ಎಮ್ಮಜ್ಜ ರಜ್ಜರು ಹಡೆದ ಭಕ್ತಿಯ ನಿಮ್ಮ ಕೈಯ್ಯಲ್ಲು ಕೊಂಬೆ, ಕೂಡಲಸಂಗಮದೇವ.

೧೦೨. ಎನಗಾರು ಇಲ್ಲ, ಎನಗಾರು ಇಲ್ಲವೆಂಬರು. ಬಾಣನವ ನಾನು, ಮಯೂರನವ ನಾನು, ಕಾಳಿದಾಸನವ ನಾನು, ಕಕ್ಕಯ್ಯ ಹಿರಿಯಯ್ಯ, ಚಿಕ್ಕಯ್ಯ ಚನ್ನಯ್ಯ ಎತ್ತಿ ಮುದ್ದಾಡಿದರೆನ್ನ ಕೂಡಲಸಂಗಯ್ಯ.

೧೦೩. ಅಯ್ಯ, ನಿಮ್ಮ ವಂಶಾವಳಿಯಲೊಬ್ಬ ತೊತ್ತಿನ ಮಗ ಹುಟ್ಟಿವಾತನ ತೊತ್ತಿನ ಮಗ ನಾನಯ್ಯ! ಬಳಿದೊತ್ತು, ಬಳಗದೊತ್ತು, ವಂಶದೊತ್ತು ನಾನಯ್ಯ. ಕೂಡಲಸಂಗಮದೇವಾ, ನಿಮ್ಮ ಒಡೆತನಕ್ಕೆ ಕೇಡಿಲ್ಲವಾಗಿ ಎನ್ನ ತೊತ್ತುತನಕ್ಕೆ ಕೇಡಿಲ್ಲವಯ್ಯ.

೧೦೪. ಕೈಯ್ಯಬೊಹರಿಗೆ, ಮಂಡೆಯ ಮೇಲೆ ಸಿಂಬಿ, ಸಿಂಬಕನ ಮನೆಯ ಮಗ ನಾನಯ್ಯ! ಕೂಡಲಸಂಗಮದೇವರ ಮಂಚದ ಕೂಡೇರಿ ಬಂದ ತೊತ್ತಿನ ಮಗ ನಾನಯ್ಯ.

೧೦೫. ಅರಸರ ಮನೆಯಲ್ಲಿ ಅರಸಿಯಾಗಿಪ್ಪುದರಿಂದ, ಭಕ್ತರ ಮನೆಯಲ್ಲಿ ತೊತ್ತಾಗಿಪ್ಪುದು ಕರ ಲೇಸಯ್ಯ! ತಾರೌ ಅಗ್ಗವಣಿಯ, ನೀಡೌ ಪತ್ರೆಯ, ಲಿಂಗಕ್ಕೆ ಬೋನವ ಹಿಡಿಯಾ, ಎಂಬರು. ಕೂಡಲ ಸಂಗನ ಮಹಾಮನೆಯುಲ್ಲೊಕ್ಕುದನುಣ್ಣಾ ತೊತ್ತೇ ಎಂಬರು.

೧೦೬. ಆನು ನಿಮ್ಮ ಶರಣರಿಗೆ ಮಂಡೆಯ ಬೋಳಿಸಿಕೊಂಡು, ಗಂಡುದೊತ್ತಾದೆನಯ್ಯಾ, ಕೂಡಲಸಂಗಮದೇವಾ, ನಿಮ್ಮ ಶರಣರಿಗೆ.

೧೦೭. ಅನುದಿನ ಮನಮುಟ್ಟಿ, ಧನ್ಯನಯ್ಯ. ದಮ್ಮಯ್ಯ, ದಮ್ಮಯ್ಯ! ನಿಮ್ಮ ಧರ್ಮದ ಕವಿಲೆಯಾನಯ್ಯಾ! ಕೂಡಲಸಂಗಮದೇವಾ, ನಿಮ್ಮ ಶರಣರ ಮನೆಯ ಮಗ ನಾನಯ್ಯ.

೧೦೮. ಕಾಮವ ತೊರೆದಾತ, ಹೇಮವ ಜರಿದಾತ, ಭಾಸುವಿಷ ಉಪಯಕ್ಕೆ ಒಳಗಾಗದಾತ ಶರಣನು. ಆವಾಗಳು ನಿಮ್ಮ ಪ್ರಾಣದ ನೆನೆವರ ಮನೆಯಲು, ಶ್ವಾನನಾಗಿರಿಸು ಮಹಾದಾನಿ ಕೂಡಲಸಂಗಮದೇವಾ.

೧೦೯. ಮೇಲಾಗಲೊಲ್ಲೆನು, ಕೀಳಾಗಲೊಲ್ಲದೆ. ಕೀಳಿಂಗಲ್ಲದೆ ಹಯನು ಕರೆವುದೆ? ಮೇಲಾಗಿ ನರಕದಲೋಲಾಡಲಾರೆನು. ನಿಮ್ಮ ಶರಣರ ಪಾದಕ್ಕೆ ಕೀಳಾಗಿರಿಸು ಮಹಾದಾನಿ ಕೂಡಲಸಂಗಮದೇವಾ.

೧೧೦. ಬ್ರಹ್ಮಪದವಿಯನೊಲ್ಲೆ, ವಿಷ್ಣುಪದವಿಯನೊಲ್ಲೆ, ರುದ್ರಪದವಿಯನೊಲ್ಲೆ, ನಾನು ಮತ್ತಾವ ಪದವಿಯನೊಲ್ಲೆನಯ್ಯ! ಕೂಡಲಸಂಗಮದೇವಾ, ನಿಮ್ಮ ಸದ್ಭಕ್ತರ ಪಾದವನರಿದಿಪ್ಪ ಮಹಾಪದವಿಯನೆ ಕರುಣಿಸಯ್ಯ.

೧೧೧. ಕಾಗೆ ವೃಷ್ಟಿಸುವ ಹೊನ್ನ ಕಳಶವಹುದರಿಂದ, ಒಡೆಯರು ಜೋಗೈಸುವ ಚಮ್ಮಾವುಗೆಯ ಮಾಡಯ್ಯ! ಅಯ್ಯಾ ನಿಮ್ಮ ಶರಣರ ಪಾದಕ್ಕೆ ಚಮ್ಮಾವುಗೆಯ ಮಾಡಯ್ಯ. ॥ಶ್ಲೋಕ॥ ಕರ್ಮಾವಲಂಬನಂಕೇಚಿತ್। ಕೇಚಿತ್ ಜ್ಞಾನಾವಲಂಬನಂ। ವಯಂತು ಶಿವಭಕ್ತಾನಾಂ। ಪಾದುಕಸ್ಯಾವಲಂಬನಂ॥ ಕೂಡಲಸಂಗಮದೇವಾ ನಿಮ್ಮ ಸೆರೆಗೊಡ್ಡಿ ಬೇಡುವದೊಂದೇ ವರವ ಕರುಣಿಸಯ್ಯ.

೧೧೩. ಆವಾವ ಭಾವದಲ್ಲಿ, ಮಾಡಿಕೊಡಿಹೆವೆಂಬವರ ಬಾಗಿಲ ತೋರಯ್ಯ! ತನುವನೊಪ್ಪಿಸಿದವರ, ಮನವನೊಪ್ಪಿಸಿದವರ, ಧನವನೊಪ್ಪಿಸಿದವರ ಬಾಗಿಲ ತೋರಯ್ಯ! ಇವೆಲ್ಲವನೊಪ್ಪಿಸಿ ಜಂಗಮವೆನ್ನವರೆನ್ನವರೆಂಬವರ ಕೆರಹ ಹೊತ್ತಿರಿಸೆನ್ನನು ಕೂಡಲಸಂಗಮದೇವಾ.

೧೧೯. ಆಯತ, ಸ್ವಾಯತ, ಸನ್ನಿಹಿತದನುಭಾವವ ನಾನೆತ್ತ ಬಲ್ಲೆನು? ಲಿಂಗಜಂಗಮಕ್ಕೆ ಮಾಡಿ ನೀಡುವ ಅಚ್ಚ ಶರಣರ ಮನೆಯಲ್ಲಿ ಭೃತ್ಯನಾಗಿರ್ಪೆನಯ್ಯಾ! ಇದು ಕಾರಣ, ಕೂಡಲಸಂಗನ ಶರಣರಲ್ಲದೆ ಅನ್ಯವನರಿಯೆನಾಗಿ.

೧೧೪. ಚಕೋರಂಗೆ ಚಂದ್ರಮನ ಬೆಳಗಿನ ಚಿಂತೆ, ಅಂಬುಜಕ್ಕೆ ಭಾನುವಿನ ಉದಯದ ಚಿಂತೆ, ಭ್ರಮರಂಗೆ ಪರಿಮಳದ ಬಂಡುಂಬ ಚಿಂತೆ, ಎನಗೆ ನಮ್ಮ ಕೂಡಲಸಂಗಮದೇವರ ನೆನೆವ ಚಿಂತೆ.

೧೧೫. ಹೊಲಬುಗೆಟ್ಟ ಶಿಶು ತನ್ನ ತಾಯನರಸುವಂತೆ, ಬಳೆದಪ್ಪಿದ ಪಶು ತನ್ನ ಹಿಂಡನರಸುವಂತೆ, ಬಯಸುತ್ತಿರ್ದೆನಯ್ಯ ನಿಮ್ಮ ಶರಣರ ಬರವನು. ಬಯಸುತಿರ್ದೆನಯ್ಯ ನಿಮ್ಮ ಭಕ್ತರ ಬರವನು. ದಿನಕರನುದಯಕ್ಕೆ ಕಮಳವಿಕಸಿತವಾದಂತೆ, ಎನಗೆ ನಿಮ್ಮ ಶರಣರ ಬರವು ಕೂಡಲಸಂಗಮದೇವಾ.

೧೧೬. ಸೂರ್ಯನುದಯ ತಾವರೆಗೆ ಜೀವಾಳ, ಚಂದ್ರಮನುದಯ ನೈದಿಲೆಗೆ ಜೀವಾಳ, ಕೂಪರ ತಾವಿನಲ್ಲಿ ಕೂಟ ಜೀವಾಳವಯ್ಯ ಒಲಿದ ತಾವಿನಲ್ಲಿ ನೋಟ ಜೀವಾಳವಯ್ಯ. ಕೂಡಲಸಂಗನ ಶರಣರ ಬರವೆನಗೆ ಪ್ರಾಣ ಜೀವಾಳವಯ್ಯ.

೧೧೭. ಜಲವ ತಪ್ಪಿದ ಮತ್ಸ್ಯ ಬದುಕುವದೇ ಸೋಜಿಗ. ಗಣತಿಂಥಿಣಿಯೊಳಗಿರಿಸೆನ್ನ ಲಿಂಗವೇ. ಶಿವಶಿವ ಕೂಡಲಸಂಗಮದೇವ ಸೆರೆಗೊಡ್ಡಿ ಬೇಡುವೆನು.

೧೧೮. ಅಯ್ಯಾ, ನಿಮ್ಮ ಮಹಾಪ್ರಮಥಗಳನಗಲಿ ಬದುಕಲಾರೆನು. ಶಿವಧೋ ಶಿವಧೋ. ಕಂಗಳಕೃಗಳಲ್ಲಿ ಮುಂದುಗಾಣೆನು. ಲಿಂಗಸಂಗಿಗಳನಗಲಿ, ಆನೆಂತು ಬದುಕುವೆನು ಕೂಡಲಸಂಗಮದೇವಾ?

೧೧೯. ಜಜ್ಜನೆ ಜರಿದೆನು, ಜಜ್ಜನೆ ಜರಿದೆನು, ಜಜ್ಜನೆ ಜರಿದೆ ನೋಡಯ್ಯ! ಬಿಬ್ಬನೆ ಬಿರಿದೆನು, ಬಿಬ್ಬನೆ ಬಿರಿದೆನು, ಬಿಬ್ಬನೆ ಬಿರಿದೆ ನೋಡಯ್ಯ! ನಾನೊಬ್ಬನೆ ಉಳಿದೆನು ನಾನೊಬ್ಬನೆ ಉಳಿದೆನು. ಕೂಡಲಸಂಗಮದೇವಾ, ನಿಮ್ಮ ಶರಣರನಗಲಿವಕಾರಣ.

೧೨೦. ಕಂಡರೆ ಮನೋಹರವಯ್ಯ! ಕಾಣದಿದ್ದರೆ ಅವಸ್ಥೆ ನೋಡಯ್ಯ! ಹಗಲು ಇರುಳಹುದು, ಇರುಳು ಹಗಲಹುದು. ಎಂತಯ್ಯ? ಆಳಪಾಡಿ ಕಳೆವೆನು ಒಂದು ಜುಗ ಮೇಲೆ ಕೆಡವಂತೆ. ಕೂಡಲಸಂಗನ ಶರಣರನಗಲುವ ಥಾವತಿಯಿಂದ ಮರಣವೇ ಲೇಸು ಕಂಡಯ್ಯ.

೧೨೧. ಅಂಗಯ್ಯ ತಿಂದುದೆನ್ನ ಕಂಗಳು. ಕೆತ್ತಿಹವಯ್ಯ. ಬಂದಿಹರಯ್ಯ ಪುರಾತರೆನ್ನ ಮನೆಗೆ, ಬಂದಿಹರಯ್ಯ ಶರಣರೆನ್ನ ಮನೆಗೆ. ಕಂಡ ಕನಸು ದಿಟವಾಗಿ, ಜಂಗಮ ಮನೆಗೆ ಬಂದರೆ ಶಿವಾರ್ಚನೆಯ ಮಾಡಿಸುವೆ ಕೂಡಲಸಂಗಮದೇವಾ ನಿಮ್ಮ ಮುಂದೆ.

೧೨೨. ಲಿಂಗವ ಪೂಜಿಸುತ್ತ ಜಂಗಮದ ಮುಖವ ನೋಡುತ್ತಿಪ್ಪ ಸುಖವ ಕೊಡು ಕಂಡೆಯಾ ಲಿಂಗವೇ. ಪರಮಸುಖವ ಕೊಡು ಕಂಡೆಯಾ ಲಿಂಗವೇ. ಕೂಡಲಸಂಗಮದೇವಯ್ಯ ಇದೇ ವರವ ನಿಮ್ಮಲ್ಲಿ ಬೇಡುವೆ.

೧೨೩. ಮನೆದೈವವು, ಕುಲದೈವವೆನಗೆ ನಿಮ್ಮವರಯ್ಯಾ! ತನುವಿೂಸಲು, ಮನವಿೂಸಲು, ನಯನವಿೂಸಲು, ಎನ್ನ ಕೂಡಲಸಂಗಮದೇವಯ್ಯ ನಿಮ್ಮ ಶರಣರಿಗೆ.

೧೨೪. ಗಿಳಿಯ ಪಂಜರವಿಕ್ಕಿ, ಸೊಡರಿಂಗೆಣ್ಣೆಯ:ನೆರೆದು, ಬತ್ತಿಯನಿಕ್ಕಿ, ಬರವ ಹಾರುತ್ತಿದ್ದೆನೆಲಗವ್ವಾ! ತರಗೆಲೆ ಗಿರಕೆಂದಡೆ, ಹೊರಗಾನಾಲಿಸುವೆ. ಅಗಲಿದೆನೆಂದೆನ್ನ ಮನ ಧಿಗಿಲೆಂದಿತ್ತೆಲೆಗವ್ವ. ಕೂಡಲಸಂಗನ ಶರಣರು ಬಂದು ಬಾಗಿಲಮುಂದೆ ನಿಂದು, ಶಿವಾ, ಎಂದಡೆ ಸಂತೋಷಬಟ್ಟೆನೆಲಗವ್ವ.

೧೨೫. ಅಡವಿಯಲೊಬ್ಬ ಕಡು ನೀರಡಿಸಿ, ಎಡೆಯಲ್ಲಿ ನೀರಕಂಡಂತಾಯಿತ್ತಯ್ಯಾ! ಕುರುಡ ಕಣ್ಣ ಹಡೆದಂತೆ, ಬಡವ ನಿಧಾನವ ಹಡ

ದಂತಾಯಿತ್ತಯ್ಯಾ! ನಮ್ಮ ಕೂಡಲಸಂಗನಶರಣರ ಬರವೆನ್ನ ಪ್ರಾಣ ಕಂಡಯ್ಯ.

೧೨೬. ಇಂದೆನ್ನ ಮನೆಗೆ ಪ್ರಮಥರು ಬಂದಿಹರೆಂದು, ಗುಡಿತೋರಣವ ಕಟ್ಟಿ, ಷಡುಸಮ್ಮಾರ್ಜನೆಯ ಮಾಡಿ, ರಂಗವೋಲೆಯ ನಿಕ್ಕಿ, ಉಘೇ, ಚಾಂಗು, ಭಲಾ ಎಂಬೆ, ಕೂಡಲಸಂಗನ ಶರಣರು ತಮ್ಮ ಒಕ್ಕುದನಿಕ್ಕಿ ಸಲಹುವರಾಗಿ.

೧೨೭. ಸಾಸಿವೆಯ ಮೇಲೆ ಸಾಗರ ಪರಿದಂತಾಯಿತ್ತಯ್ಯಾ! ಆನಂದದಿಂದ ನಲಿನಲಿದಾಡುವೆನು! ಆನಂದದಿಂದ ಕುಣಿಕುಣಿದಾಡುವೆನು. ಕೂಡಲಸಂಗನಶರಣರು ಬಂದರೆ ಉಬ್ಬಿ ಕೊಬ್ಬಿ ಹರುಷದಲೋಲಾಡುವೆನು.

೧೨೮. ಮನಮನ ಬೆರಿಸಿದಲ್ಲಿ, ತನುಕರಗದಿದ್ದಡೆ, ಸೋಂಕಿನಲ್ಲಿ ಪುಳಕಂಗಳು ಹೊರಹೊಮ್ಮದಿದ್ದಡೆ, ಕಂಡಾಗಳಶ್ರುಜಲಂಗಳು ಸುರಿಯದಿದ್ದಡೆ, ನುಡಿವಲ್ಲಿ ಗದ್ಗದಂಗಳು ಪೊಣ್ಮದಿದ್ದಡೆ ಕೂಡಲಸಂಗಮದೇವರ ಭಕ್ತಿಗಿದು ಚಿನ್ಹ, ಎನ್ನಲ್ಲಿ ಇಲ್ಲವಾಗಿ, ಆನು ಡಂಭಕ ಕಾಣಿರೇ.

೧೨೯. ಅಷ್ಟವಿಧಾರ್ಚನೆ, ಷೋಡಶೋಪಚಾರಂಗಳನು, ಅರಸರಿಯದ ಬಿಟ್ಟಿಯ ಮಾಡುವೆನು. ಎನ್ನತಾಗಿದ ಸುಖವ ಜಂಗಮಕರ್ಪಿಸಲರಿಯದ ಉಪಚಾರಿಯಾನು. ಸ್ಥಾವರ ಜಂಗಮವನರಿಯದ ಪೂಜಕನಾನು. ಮತ್ತೆ ನಾಚದೆ, ಕೂಡಲಸಂಗಮದೇವಯ್ಯ ಜಂಗಮವೆನ್ನ ಪ್ರಾಣಲಿಂಗವೆಂಬೆನು.

೧೩೦. ಆವಿಗೆಯಲೊದಗಿದ ಕಪ್ಪಿನಂತೆ ಅಮೃತದೊಳಗಿರ್ದ ಸರ್ಪನ ತನುವಿನಂತೆ ಇರ್ದೆನಯ್ಯ. ಹೊರಗೆ ನುಂಪಾಗಿ ಸಿಂಹಕ್ಕೊಲಿದ ಮದಕರಿಯಂತೆ ಆನು ಜಂಗಮಕ್ಕೊಲಿದೆನಯ್ಯ ಕೂಡಲಸಂಗಮದೇವಾ.

೧೩೧. ಸ್ಥಾವರ ಜಂಗಮ ಒಂದೇ ಎಂದು ಇದಿರ ನುಡಿವೆ. ನಾನೆ ಡಹುತಿಪ್ಪೆ. ಸಹಜನಲ್ಲಯ್ಯ. ಆನು ಸದ್ಯುಕ್ತನಲ್ಲಯ್ಯ. ಆನುಭಯಲಿಂಗಸಂಗಿ ಎಂಬೆನು. ಈ ನುಡಿ ಸುಡದಿಹುದೆ ಕೂಡಲಸಂಗಮದೇವಾ?

೧೩೩. ಮಸಿಯನೇಸುಕಾಲ ಬೆಳಗಿದಡೆ, ಬೆಳ್ಪಾಗಬಲ್ಲುದೆ? ಕರ್ಮಸ್ಥಿತಿ ಬೆನ್ನ ಬಿಡದು. ಅನಂತಕೋಟಿ ಸನ್ಮಾನವ ಮಾಡಿದಡೇನು? ನಿಮಿಷದ ಉದಾಸೀನ ಕೆಡಿಸಿತ್ತು. ಕೂಡಲಸಂಗಮದೇವಾ ನಿಮ್ಮ ನಂಬಿಯೂ ನಂಬದ ಡಂಭಕ ನಾನಯ್ಯ.

೧೩೪. ಎಳ್ಳಿಲ್ಲದ ಗಾಣವನಾಡಿದ ಎತ್ತಿನಂತಾಯಿತ್ತೆನ್ನ ಭಕ್ತಿ. ಉಪ್ಪು ಅಪ್ಪುವಿನಲ್ಲಿ ಅದ್ದಿ ಮೆಲಿದಂತಾಯಿತ್ತೆನ್ನ ಭಕ್ತಿ. ಕೂಡಲಸಂಗಮದೇವಾ ಆನು ಮಾಡಿದೆನೆಂಬ ಕಿಚ್ಚು ಸಾಲದೇ?

೧೩೫. ಅಷ್ಟವಿಧಾರ್ಚನೆ, ಷೋಡಶೋಪಚಾರವ ಮಾಡುವ ಹವಿನ್ನನಲ್ಲಿ ಬೆಂದೆನಯ್ಯಾ! ಗುರುವೆಂದರಿಯೆ, ಲಿಂಗವೆಂದರಿಯೆ, ಜಂಗಮವೆಂದರಿಯೆ, ಪ್ರಸಾದವೆಂದರಿಯೆ. ಆನು ಬೆಂದೆನಯ್ಯಾ ಕೂಡಲಸಂಗಮದೇವಾ, ಆನು ಮಾಡುವುದೆಲ್ಲ ಉಪಚಾರವಯ್ಯ.

೧೩೬. ಎನ್ನಲ್ಲಿ ಭಕ್ತಿ ಸಾಸವೆಯ ಷಡ್ಭಾಗದಿನಿತಿಲ್ಲ. ಎನ್ನ ಭಕ್ತನೆಂಬರು. ಎನ್ನ ಸಮಯಾಚಾರಿ ಎಂಬರು. ನಾನೇನ ಪಾಪವ ಮಾಡಿದೆನೋ? ಬೆಳೆಯದ ಮುನ್ನವೇ, ಕೊಯ್ವರೇ ಹೇಳಾ? ಇರಿಯದ ವೀರ ಇಲ್ಲದ ಸೊಬಗುವ ಎಲ್ಲ ಒಡೆಯರು ಏರಿಸಿ ನುಡಿವರು. ಎನಗಿದು ವಿಧಿಯೇ ಕೂಡಲಸಂಗಮದೇವಾ?

೧೩೭. ಎನ್ನವರೊಲಿದ, ಹೊನ್ನಶೂಲದಲಿಕ್ಕಿದರೆನ್ನ ಹೊಗಳಿ ಹೊಗಳಿ. ಎನ್ನ ಹೊಗಳತೆ ಎನ್ನ ವೈಗೊಂಡಿತಲ್ಲಾ! ಅಯ್ಯೋ ನಿಮ್ಮ ಮನ್ನಣೆಯೆ ಮಸವಲಗಾಗಿ ತಾಗಿತ್ತಯ್ಯಾ. ಅಯ್ಯೋ! ನೊಂದೆನು, ಸೈರಿಸಲಾರೆನು. ಕೂಡಲಸಂಗಮದೇವಾ, ನೀನೆನಗೊಳ್ಳಿದನಾದರೆ, ಎನ್ನ ಹೊಗಳತೆಗಡ್ಡ ಬಾರಾ ಧರ್ಮೀ.

೧೩೮. ಎನ್ನವರೆನಗೊಲಿದು, ಹೊನ್ನಶೂಲದಲಿಕ್ಕಿದರಯ್ಯಾ! ಅಹಂಕಾರ ಪೂರಾಯ ಗಾಯದಲ್ಲಿ ಆನೆಂತು ಬದುಕುವೆನೆಂತು ಜೀವಿಸುವೆ? ಜಂಗಮವಾಗಿ ಬಂದು, ಜರಿದು, ಶೂಲವನಿಳುಹಿ, ಪ್ರಸಾದದ ಮದ್ದನಿಕ್ಕಿ ಸಲಹು ಕೂಡಲಸಂಗಮದೇವಾ.

೧೩೯. ಎಡದ ಕೈಯ್ಯಲ್ಲಿ ಹಾಲಬಟ್ಟಲು, ಬಲದ ಕೈಯ್ಯಲ್ಲಿ ಓಜುಗಟ್ಟಿಗೆ, ಆವಾಗ ಬಂದಾನೆಮ್ಮಯ್ಯ ಬಡಿದು ಹಾಲ ಕುಡಿಸುವ ತಂದೆ?

॥ಶ್ಲೋಕ॥ ಪಂಡಕ್ಷೀರ ನ್ಪಯೋರ್ಹಸ್ತಂ। ಜಂಗಮಂಭಕ್ತಿ ಮಂದಿರಂ। ಅತಿಭಕ್ತಿ ಲಿಂಗ ಸಂತುಷ್ಟಂ। ಅಪಹಾಸ್ಯಂಯಮ ದಂಡನಂ॥ ಎಂದುದಾಗಿ ಕೂಡಲಸಂಗಮದೇವಯ್ಯ ತಾನೇ ಭಕ್ತಿಪಥವ ತೋರುವ ತಂದೆ.

೧೫೯. ಎನ್ನ ಆಪತ್ತು ಸುಖ ದುಃಖವನಿನ್ನಾರಿಗೆ ಹೇಳುವೆ? ಶರಣ ಸ್ಥಲದವರಿಗೆ ಹೇಳಿದರೆ ಮಚ್ಚರ. ಸವತಿ ಸಕ್ಕರೆ ಬೇವು ಬೆಲ್ಲ ಉಂಟೇ? ಇನ್ನಾರಿಗೆ ಹೇಳುವೆ? ಕೂಡಲಸಂಗಮದೇವ, ಜಂಗಮವಾಗಿ ಬಂದು ಎನ್ನ ಮನದ ಸೂತಕವ ಕಳೆಯಾ.

೧೬೦. ನಾನಾ ಸ್ಥಾನಂಗಳಲ್ಲಿ ಬಂದು ಕುಳ್ಳಿರ್ದುದು ತೆರಳುವುದೇ ಅಯ್ಯಾ? ಉಭಯ ಕುಳಕ್ಕಲ್ಲದೆ ತೆರಳದು. ಬೀದಿಯಲ್ಲಿ ಬಿದ್ದ ಶಿಶು ವನು ಹೆತ್ತತಾಯಿ ಹತ್ತಿರೆ ಬಂದು ಎತ್ತುವಂತೆ, ಎನ್ನನಾರು ಜನ್ಮಕ್ಕೆ ತಂದು ಅಘೋರ ನರಕದಲ್ಲಿಕ್ಕಿದುದ ನಾನು ಬಲ್ಲೆ. ಕೂಡಲಸಂಗಮ ದೇವಾ ನಿಮ್ಮ ಹಂಗೇನು ಹರಿಯೆನು. ನಾನುಭಯ ಲಿಂಗಜಂಗಮದ ಮರೆಹೊಕ್ಕು ಬದುಕಿದೆನು.

೧೬೧. ಅಯ್ಯ ನಿಮ್ಮ ದೇವರೆಂದು ನಂಬಿ ಪೂಜಿಸಲಾಗದಯ್ಯ! ಮೀನ ಜರೋಮಜ ಮಹಾಮುನಿಗಳಲಯವ ಮಾಡುವದ ನಾ ಬಲ್ಲೆನಾಗಿ. ಅಯ್ಯ ನಿಮ್ಮ ದೇವರೆಂದು ನಂಬಿ ಪೂಜಿಸಲಾಗದಯ್ಯ! ನವಕೋಟಿ ಬ್ರಹ್ಮರಿಗೆ ಪ್ರಳಯವ ಮಾಡುವವ ಬಲ್ಲೆನಾಗಿ. ಅಯ್ಯ! ನಿಮ್ಮ ದೇವರೆಂದು ನಂಬಿ ಪೂಜಿಸಲಾಗಗಯ್ಯ! ದಶಕೋಟಿ ನಾರಾಯಣರಿಗೆ ಮರಣವ ಮಾಡು ವದ ನಾ ಬಲ್ಲೆನಾಗಿ. ಅಯ್ಯ ನಿಮ್ಮ ದೇವರೆಂದು ನಂಬಿ ಪೂಜಿಸಲಾ ಗದಯ್ಯಾ! ಅನಂತಕೋಟಿ ರುದ್ರರಿಗೆ ಲಯವ ಮಾಡುವದ ನಾ ಬಲ್ಲೆನಾಗಿ. ಅಯ್ಯ! ನಿಮ್ಮ ದೇವರೆಂದು ಪೂಜಿಸಲಾಗದಯ್ಯ! ಎನ್ನನೇಳೇಳು ಭವಕ್ಕೆ ತಂದಲ್ಲಿ ಆನು ಉಭಯ ಲಿಂಗಜಂಗಮದ ಮರೆಹೊಕ್ಕು, ಭವಂನಾಸ್ತಿ ಯಾಗಿ, ಬದುಕಿದೆನಯ್ಯಾ! ಕೂಡಲಸಂಗಮದೇವಾ.

೧೬೨. ಲಿಂಗದರ್ಶನ ಕರಮುಟ್ಟಿ, ಜಂಗಮದರ್ಶನ ಶಿರಮುಟ್ಟಿ, ಆವುದು ಘನವೆಂಬೆ, ಆವುದು ಕಿರಿದೆಂಬೆ? ತಾಳ ಸಂಪುಟಕ್ಕೆ ಬಾರದ ಘನವ ಅರ್ಪಿಸಹೋದರೆ, ಅರ್ಪಣ ಮುನ್ನಿಲ್ಲ. ಗಮನ ನಿರ್ಗಮನವಾಯಿತ್ತು. ಈ ಉಭಯ ಭೇದವನರಿಯರಾಗಿ ಜಂಗಮವೇ ಲಿಂಗ ಕೂಡಲಸಂಗಮ ದೇವಾ.

೧೪೩. ಶಿವಭಕ್ತರೇ ಅಧಿಕರು ನೋಡಯ್ಯ. ಇವಕ್ಕೆ ಅಧಿಕವಾಗಿ ಜಂಗಮವ ಕಂಡೆ. ಈ ದ್ವಿವಿಧವನೊಂದೇ ಎಂದು ನಂಬಿದೆ, ಕೂಡಲ ಸಂಗಮದೇವಾ.

೧೪೪. ಕೃತುಯುಗದಲ್ಲಿ ಕೇದಾರವೆಂಬ ಮೂಲಸ್ಥಾನ, ತ್ರೇತಾ ಯುಗದಲ್ಲಿ ವಾರಣಾಸಿ ಎಂಬ ಮೂಲಸ್ಥಾನ, ದ್ವಾಪರಯುಗದಲ್ಲಿ ವಿರೂ ಪಾಕ್ಷನೆಂಬ ಮೂಲಸ್ಥಾನ, ಕಲಿಯುಗದಲ್ಲಿ ಪರ್ವತವೆಂಬ ಮೂಲಸ್ಥಾನ. ಇಂತೀ ನಾಲ್ಕು ಮೂಲಸ್ಥಾನ. ನಾನಾ ಸ್ಥಾನವ ಮೆಟ್ಟಿದೆ, ಜಂಗಮವೇ ಲಿಂಗವೆಂದು ನಂಬಿದೆ ಕೂಡಲಸಂಗಮದೇವಾ.

೧೪೫ ಭಕ್ತದೇಹಿಕ ದೇವನಪ್ಪ ದೇವನು ಸದ್ಭಕ್ತರ ಬಳಿಯಲ್ಲಿ ಬಪ್ಪನಾಗಿ. ಆಳ್ವನು ಬರಲಾಳು ಮಂಚದ ಮೇಲೆ ಇಪ್ಪುದು ಗುಣವೇ ಹೇಳಾ? ಕೂಡಲಸಂಗಮದೇವನು ಜಂಗಮರೂಪಾಗಿ ಸಂಗಯ್ಯ ಬಂದಾ ನೆಂದು ಎಂದೆಂದೂ ನಾನು ಮಂಚವನೇರದ ಭಾಷೆ.

೧೪೬. ಜಂಗಮ ಸನ್ನಿಧಿಯಲ್ಲಿ ವಾಹನವನೇರಲಮ್ಮೆ. ಏರಿದರೆ ಭವ ಹಿಂಗದು. ಏನು ಕಾರಣ? ಮುಂದೆ ಶೂಲವ ನೇರುವ ಪ್ರಾಪ್ತಿ ಯುಂಟಾದ ಕಾರಣ. ಜಂಗಮ ಬರಲಾಸನದಲ್ಲಿ ಇರಲಮ್ಮೆ. ಇದ್ದರೆ ಭವ ಹಿಂಗದು. ಏನು ಕಾರಣ? ಮುಂದೆ ಕಾಯ್ದಿಟ್ಟಿಗೆಯ ಮೇಲೆ ಕುಳ್ಳಿ ರುವ ಪ್ರಾಪ್ತಿಯುಂಟಾದ ಕಾರಣ. ಜಂಗಮದ ಮುಂದೆ ದಿಟ್ಟತನದಲ್ಲಿ ಬೆರತು ನಿಂದಿರಲಮ್ಮೆನು. ಏನು ಕಾರಣ? ಮುಂದೆ ಹೆಡಗುಡಿಯ ಕಟ್ಟಿ ಕುಳ್ಳಿರಿಸುವ ಪ್ರಾಪ್ತಿಯುಂಟಾದ ಕಾರಣ. ಇಂತೀ ಬಾಧೆಭವಂಗಳಿಗಂಜು ವೆನಯ್ಯ. ನಿಮ್ಮವರ ಸುಳುಹ ನೀವೆಂದು ಭಾವಿಸಿ ತೊತ್ತು ಭೃತ್ಯನಾಗಿ ಪ್ಪೆನಯ್ಯ ಕೂಡಲಸಂಗಮದೇವಾ.

೧೪೭. ಜಂಗಮ ವಿರಹಿತ ಲಿಂಗಾರ್ಚನೆ, ಮಳಲಲೆರದ ಜಲ ದಂತೆ. ಜಂಗಮ ಸನ್ನಿಹಿತ ಲಿಂಗಾರ್ಚನೆ ಇದೇ ಭಕ್ತಿಗೆ ಪಥವಯ್ಯ. ಜಂಗಮ ಪ್ರಸಾದ ಭೋಗೋಪಭೋಗವು ಎನಗಿದೇ ಲಿಂಗಾರ್ಚನೆ. ಬೇರೆ ಮತ್ತೊಂದನರಿದೆನಾದರೆ, ಕೂಡಲಸಂಗಮದೇವ ನರಕದಲ್ಲಿಕ್ಕುವಾ.

೧೪೮. ಭಿತ್ತಿ ಇಲ್ಲದೆ ಬರೆಯಬಹುದೆ ಚಿತ್ತಾರವ? ಬಿತ್ತಿಬೆಳೆಯ ಬಹುದೆ, ಧರೆ ಇಲ್ಲದೆ? ಜಂಗಮವಿಲ್ಲದೆ ಮಾಡಬಹುದೇ? ರೂಢೀಶನ

ಭೇದಿಸಬಹುದೆ? ಒಡಲಿಲ್ಲದ ನಿರಾಳಕರ್ತೃ ಕೂಡಲಸಂಗಮದೇವ ಜಂಗಮ ಮುಖ ಲಿಂಗವಾದನಾಗಿ, ಮತ್ತೊಂದನರಿಯೆನಯ್ಯ.

೧೪೯. ಸಮಯೋಚಿತದಲ್ಲಿ ಲಿಂಗಾರ್ಚನೆಯ ಮಾಡುತ್ತಿರ್ಪನಾ ಭಕ್ತನು. ಮಾಡಿದರೆ ಮಾಡಲಿ. ಮಾಡಿದರೆ ತಪ್ಪೇನು? ಆ ಜಂಗಮದ ಶಬ್ದವ ಕೇಳಿ, ಪ್ರಸಾದಕ್ಕೆ ಕೈದುಡುಕಿದರೆ, ಅದು ಪ್ರಸಾದವಲ್ಲ. ಕಿಲ್ಬಿಷ. ಆ ಸಮಯೋಚಿತದಲ್ಲಿ ಬಂದ ಜಂಗಮದ ಶಬ್ದವ ಕೇಳಿ, ಪ್ರಸಾದಕ್ಕೆ ಕೈದೆಗೆದಡೆ ಅದು ಲಿಂಗಕ್ಕೆ ಬೋನ. ಇದು ಕಾರಣ ಕೂಡಲಸಂಗಮದೇವಾ, ಇಂತಪ್ಪ ಸದಾಚಾರಿಗಳನೆನಗೆ ತೋರಾ.

೧೫೦. ಉತ್ತಮ, ಮಧ್ಯಮ, ಕನಿಷ್ಠವೆಂದು, ಬಂದ ಜಂಗಮವ ನೆಂದೆನಾದರೆ ನೊಂದೆನಯ್ಯ, ಬೆಂದೆನಯ್ಯ. ಎನ್ನ ಕಿಚ್ಚು ಎನ್ನ ಸುಟ್ಟಿತ್ತು. ಸುಖಿ ಜಂಗಮ, ಸಾಮಾನ್ಯ ಜಂಗಮವೆಂದುಂಟೆ ಕೂಡಲಸಂಗಮದೇವಾ?

೧೫೧. ಕೆಂಡದಲ್ಲಿಟ್ಟರೆ ಮೈಬೆಂದುದೆಂಬರು ಕೊಂಡಿಟ್ಟವರ ಕೈ ಮುನ್ನವೇ ಬೆಂದುದು. ನೊಂದೆ ನಾನು ನೊಂದೆನಯ್ಯ. ಬೆಂದೆ ನಾನು ಬೆಂದೆನಯ್ಯ. ಕೂಡಲಸಂಗನಶರಣರ ಕಂಡು ಕಾಣದಂತಿದ್ದರೆ ಅಂದೇ ಬೆಂದೆನಯ್ಯಾ.

೧೫೨. ಲಾಂಛನವ ಕಂಡು ನಂಬುವೆ. ಅವರಂತರಂಗವನೀವೇ ಬಲ್ಲಿರಿ. ತೊತ್ತಿಂಗೆ ತೊತ್ತು ಗೆಲವಲ್ಲದೆ ಅರಸರ ಸುದ್ದಿ ಎಮಗೇಕಯ್ಯ? ರತ್ನ ಮೌಕ್ತಿಕದಚ್ಚು ಕೂಡಲಸಂಗಮದೇವಾ ನಿಮ್ಮ ಶರಣರು.

೧೫೩. ಆರಾರ ಮನದಲ್ಲಿ ಏನೇನಿಹುದೆಂದರಿಯೆ. ಒಳ್ಳಿಹರೆಂದೆನ ಲಮ್ಮೆ, ಹೊಲ್ಲಹರೆಂದೆನಲಮ್ಮೆ, ಶಿವಭಕ್ತರಾದ ಕಾರಣ ಜಂಗಮವೇ ಲಿಂಗ ಕೂಡಲಸಂಗಮದೇವಾ.

೧೫೪. ಸಂಗಸಹಿತ ಶರಣರು ಬಂದರೆ ನಂಬುವುದೆನ್ನ ಮನವು. ನಚ್ಚುವುದೆನ್ನ ಮನವು. ಹಾವು ನೇಣೆಂಬಭ್ರಾಂತುಳ್ಳನ್ನಕ್ಕ ನಾನು ಭಕ್ತನೆಂ ತಪ್ಪೆನು. ಅಂಗ ಲಿಂಗ ಸಹಿತವಾಗಿ ಬಂದರೆಸಂಗನೀನೆಂದು ಮತ್ತೆ ಮನ ದಲ್ಲಿ ಸಂದೇಹ ಹೋಕೆದರೆ ಬೆಂದೆನಲ್ಲಾ ನಾನು ಕೂಡಲಸಂಗಮದೇವಾ.

೧೫೫. ಎಡದ ಕೈಯ್ಯಲು ನಿಗಳವನಿಕ್ಕಿ, ಬಲದ ಕೈಯ್ಯ ಕಡಿದು ಕೊಂಡರೆ, ನೋಯದಿಪ್ಪುದೇ? ಪ್ರಾಣ ಒಂದಾಗಿ ದೇಹ ಬೇರಿಲ್ಲ. ಲಿಂಗವ ಪೂಜಿಸಿ, ಜಂಗಮವನುದಾಸೀನವ ಮಾಡಿದರೆ, ಬೆಂದೆನಯ್ಯ ನಾನು ಕೂಡ ಲಸಂಗಮದೇವಾ.

೧೫೬. ತನುವ ನೋಯಿಸಿ, ಮನವ ಬಳಲಿಸಿ, ನಿಮ್ಮ ಪಾದವ ಪಿಡಿದವರೊಳರೇ? ಈ ನುಡಿ ಸುಡದಿಹುದೆ ? ಕೂಡಲಸಂಗಮದೇವಾ, ಶಿವಭಕ್ತರ ನೋವೇ ಅದು ಲಿಂಗದ ನೋವು.

೧೫೭. ಆತ್ಮಸ್ತುತಿ, ಪರನಿಂದೆಯ ಕೇಳಿಸದಿರಯ್ಯಾ ! ನಿಮ್ಮ ಧರ್ಮ. ಆನು ಭಕ್ತನೆನ್ನಲ್ಲಿ ಲೇಸುಂಟೆಂದು ಪರಿಣಾಮಿಸಿದರೆ, ನಿಮಗಾನು ದ್ರೋಹಿಯಯ್ಯಾ! ಕೂಡಲಸಂಗಮದೇವಾ ನಿಮ್ಮ ಶರಣರ ಲೇಸೇ ಎನ್ನ ಲೇಸಯ್ಯ.

೧೫೮. ನಡೆಯಲರಿಯದೆ, ನುಡಿಯಲರಿಯದೆ, ಲಿಂಗವ ಪೂಜಿಸಿ ಫಲವೇನು ? ಅವರ ಸುಖ ಎನ್ನ ಸುಖ. ಅವರ ದುಃಖ ಎನ್ನ ದುಃಖ. ಕೂಡಲಸಂಗನ ಶರಣರ ಮನ ನೊಂದರೆ ಆನು ಬೆಂದೆನಯ್ಯಾ.

೧೫೯ ಬಂಜೆ ಬೇನೆಯನರಿಯದಂತೆ, ಒಬ್ಬರೊಂದ ನುಡಿವಿರಿ ಕೇಳಿರಯ್ಯಾ! ಎನಗೆ ಆಯುಷ್ಯ ಭವಿಷ್ಯ ಎನ್ನ ಭಕ್ತರು, ಕಂಡಯ್ಯಾ! ಎನಗೆ ಆಯುಷ್ಯ ಭವಿಷ್ಯ ಎನ್ನ ಪ್ರಮಥರು, ಕಂಡಯ್ಯ. ಕೂಡಲಸಂಗನ ಶರಣರು ಮುಖಲಿಂಗಿಗಳಯ್ಯ.

೧೬೦. ಬೇರೂರಲಿದ್ದು ಬಂದ ಜಂಗಮವೇ ಲಿಂಗವೆಂದು ಕಂಡು ಮನೆಯಲ್ಲಿದ್ದ ಜಂಗಮವನುದಾಸೀನವ ಮಾಡಿದರೆ, ನಾನು ಬೆಂದೆನಯ್ಯ! ಆನು ಬೆಂದ ಬೇಗೆಯನರಿಯೆ ಕಾಣಾ ಕೂಡಲಸಂಗಮದೇವಾ.

೧೬೧. ಉಟ್ಟತೊಟ್ಟು ಪೂಜ್ಯನಾಗಿ ಬಂದ ಜಂಗಮ ವಿಶೇಷವೆಂದು ಕಂಡು, ಕಂತೆಬೊಂತೆಯ ಜಂಗಮ ಬಂದರೆ ಹೀನವೆಂದು ಕಂಡೆನಾದರೆ, ಪಂಚಮಹಾಪಾತಕ. ಇದು ಕಾರಣ ಅನ್ನವಸ್ತ್ರ ಧನ ಮಾಟದಲು ಎರಡಾಗಿ ಕಂಡೆನಾದಡೆ, ನರಕದಲ್ಲಿಕ್ಕುವ ಕೂಡಲಸಂಗಮದೇವಾ.

೧೬೨. ಅಡ್ಡದೊಡ್ಡ ನಾನಲ್ಲಯ್ಯಾ! ದೊಡ್ಡ ಬಸಿರು ಎನಗಿಲ್ಲವಯ್ಯ! ದೊಡ್ಡವರನಲ್ಲದೆ ನಿಮ್ಮ ಶರಣರು ಮನ್ನಿಸರಯ್ಯ! ಹಡೆದುಂಬ ಸೂಳೆಯಂತೆ, ಧನವುಳ್ಳವರನರಸಿ ಯರಸಿ ಬೋಧಿಸಲು, ಪ್ರಾರ್ಥಿಸಲು, ಮುನ್ನ ನಾನರಿಯೆನಯ್ಯ! ದೊಡ್ಡತನವೆನ್ನಲಿಲ್ಲವಯ್ಯ. ಅಂಜುವೆ ಅಂಜುವೆ ನಿಮ್ಮ ಪ್ರಮಥರಿಗೆ. ಅನಾಥ ನಾನಯ್ಯ ಕೂಡಲಸಂಗಮದೇವಾ.

೧೬೩. ಕುದುರೆ ಸತ್ತಿಗೆಯವರ ಕಂಡರೆ ಹೊರಳಿಬಿದ್ದು ಕಾಲಹಿಡಿವರಯ್ಯ. ಬಡಭಕ್ತರು ಬಂದರೆ ಎಡೆಯಿಲ್ಲ, ಅತ್ತಸನ್ನಿ ಎಂಬರು! ಎನ್ನೊಡೆಯ ಕೂಡಲಸಂಗಯ್ಯನವರ ತಡೆಗೆಡೆಹಿ ಮೂಗ ಕೊಯ್ಯದೆ ಮಾಣ್ಬನೇ?

೧೬೪. ದೂರದಿಂದ ಬಂದ ಜಂಗಮನಯ್ಯಗಳೆಂದು, ಸಾರಿದ್ದ ಜಂಗಮವ ಪರಿಚಾರಕರೆಂಬ ಕೇಡಿಂಗೆ ಬೆರಗಾದೆನಯ್ಯ! ಸಾರಿದ್ದವರು ದೂರದವರೆಂದು ಬೇರು ಮಾಡಿ ಕಂಡರೆ, ಕೂಡಲಸಂಗಮದೇವ ಸಿಂಗಾರದ ಮೂಗ ಕೊಯ್ಯದೆ ಮಾಣ್ಬನೇ?

೧೬೫. ಹಿಡಿವೆಡೆಯನೆ ಕಾಸಿ, ಹಿಡಿದ ಕೈಬೆಂದು, ಮಿಡುಮಿಡನೆ ಮಿಡುಕುವ ಮರುಳು ಮಾನವನ ಒಡವನೆಂದೆನಬೇಡ. ಲಾಂಛನ ಧಾರಿಯನು ಕಂಡು ಸ್ನೇಹದಿಂದವರ ಪೂಜೆಯ ಮಾಡುವುದು. ನಿಜವಡಗಿದರೂಪು ನಿರ್ವಯಲ ಸ್ಥಾನ ನಡೆ ಲಿಂಗಜಂಗಮ ಕೂಡಲಸಂಗಮದೇವಾ.

೧೬೬. ಹಾಲ ಕಂದಲು ತುಪ್ಪದ ಮಡಿಕೆಯ ಬೋಡ ಮುಕ್ಕೆನಬೇಡ. ಹಾಲು ಸಿಹಿ, ತುಪ್ಪ ಕಮ್ಮನೆ ಲಿಂಗಕ್ಕೆ ಬೋನ, ಕೂಡಲಸಂಗನ ಶರಣರ ಅಂಗಹೀನರೆಂದರೆ ನಾಯಕ ನರಕ.

೧೬೭. ಆಚಾರವನರಿಯಿರಿ. ವಿಚಾರವನರಿಯಿರಿ. ಜಂಗಮಸ್ಥಲ ಲಿಂಗ ಕಾಣಿರಯ್ಯ! ಜಾತಿಭೇದವಿಲ್ಲ. ಸೂತಕವಿಲ್ಲ. ಅಜಾತಂಗೆ ಕುಲವಿಲ್ಲ. ನುಡಿದಂತೆ ನಡೆಯದಿದ್ದರೆ ಕೂಡಲಸಂಗಯ್ಯ ಮೆಚ್ಚ ಕಾಣಿರಯ್ಯ.

೧೬೮. ಸ್ಥಾವರಭಕ್ತಂಗೆ ಸೀಮೆಯಲ್ಲದೆ ಘನಲಿಂಗ ಜಂಗಮಕ್ಕೆ ಸೀಮೆ ಎಲ್ಲಿಯದೋ? ಅಂಬುಧಿಗೆ ಸೀಮೆಯಲ್ಲದೆ, ಹರಿವ ನದಿಗೆ ಸೀಮೆ ಎಲ್ಲಿಯದು? ಭಕ್ತಂಗೆ ಸೀಮೆಯಲ್ಲದೆ ಜಂಗಮಕ್ಕೆ ಸೀಮೆಯುಂಟೆ, ಕೂಡಲಸಂಗಮದೇವಾ?

೧೬೯. ಎತ್ತಿಕೊಳಲೇಕೆ, ಮತ್ತಿಳುಹಲೇಕಯ್ಯಾ? ದರಮುರದ ಭಕ್ತಿಯ ಮಾಡಲೇಕಯ್ಯ? ನಿಂದಿಸಲೇಕೆ? ಸ್ತುತಿಸಲೇಕೆ? ಹೋಗಬಿಟ್ಟು ಜಂಗಮವ ಹಿಂದೆಯಾಡುವನ ಬಾಯಲ್ಲಿ ಮೆಟ್ಟಿ ಹುಡಿಯ ಹೊಯ್ಯದೆ ಮಾಬನೆ ಕೂಡಲಸಂಗಮದೇವಾ?

೧೭೦. ಮರಕ್ಕೆ ಬಾಯಿ ಬೇರೆಂದು ತಳಕ್ಕೆ ನೀರನೆರೆದರೆ, ಮೇಲೆ ಪಲ್ಲವಿಸಿತ್ತು ನೋಡಾ! ಲಿಂಗದ ಬಾಯಿ ಜಂಗಮವೆಂದು ಪಡಿ ಪದಾರ್ಥವ ನೀಡಿದಡೆ, ಮುಂದೆ ಸಕಳಾರ್ಥವನೀವನು. ಆ ಜಂಗಮವ ಹರನೆಂದು ಕಂಡು, ನರನೆಂದು ಭಾವಿಸಿದರೆ ನರಕ ತಪ್ಪದು ಕಾಣಾ ಕೂಡಲಸಂಗಮದೇವಾ.

೧೭೧. ಆರಾಧನೆಯ ಮಾಡಿದರೆ, ಅಮೃತದ ಬೆಳಸು. ವಿರೋಧಿಸಿದರೆ ವಿಷದ ಬೆಳಸು. ಇದು ಕಾರಣ ಲಿಂಗಜಂಗಮಕ್ಕೆ ಅಂಜಲೇಬೇಕು. ಸ್ಥಾವರ ಜಂಗಮ ಒಂದೆಂದರಿದರೆ, ಕೂಡಲಸಂಗಮದೇವ ಶರಣಸನ್ನಿಹಿತ.

೧೭೨. ಹೊಸತಿಲ ಪೂಜಿಸಿ, ಹೊಡವಂಟು ಹೋಹ ಒಕ್ಕಲಿತಿಯಂತಾಯಿತ್ತೆನ್ನ ಭಕ್ತಿ. ಜಂಗಮದೆನ್ನೊಡೆಯರೆಂದು ಒಕ್ಕುದಕೊಂಡು ಉದಾಸೀನವ ಮಾಡಿದರೆ ಇಹಲೋಕಕ್ಕೆ ದೂರ ಪರಲೋಕಕ್ಕೆ ದೂರ. ಕೂಡಲಸಂಗಮದೇವ ಅಘೋರ ನರಕದಲ್ಲಿಕ್ಕುವ.

೧೭೩. ಲಿಂಗಪೂಜೆಯಮಾಡಿ, ಜಂಗಮವ ಕಂಡು ಉದಾಸೀನವ ಮಾಡಿದರೆ, ಆ ಲಿಂಗ ಪೂಜಕರಿಗೆ ಮಾಡಿದ ಶಿವದೂತರ ದಂಡವೆಂಬುದ. ಲೋಕದ ಕರ್ಮಿಗಳಿಗೆ ಮಾಡಿದ ಯಮದೂತರ ದಂಡವೆಂಬುದ. ಇದು ಕಾರಣ ಲಿಂಗಜಂಗಮವನೊಂದೆ ಎಂದರಿಯದವರ ಎನಗೆ ತೋರದಿರಯ್ಯ ಕೂಡಲಸಂಗಮದೇವಾ.

೧೭೪. ಜಂಗಮ ನಿಂದೆಯಮಾಡಿ, ಲಿಂಗವ ಪೂಜಿಸುವ ಭಕ್ತನ ಅಂಗವಣೆ ಎಂತೋ? ಶಿವಶಿವ! ನಿಂದಿಸುವ ಪೂಜಿಸುವ ಪಾತಕವಿದ ಕೇಳಲಾಗದು. ಗುರುವಿನ ಗುರು ಜಂಗಮ ಇಂತೆಂದುದು ಕೂಡಲಸಂಗನವಚನ.

೧೭೫. ಅರಸನ ಕಂಡು ತನ್ನ ಪುರುಷನ ಮರೆದರೆ, ಮರನನೇರಿ ಕೈಯ್ಯ ಬಿಟ್ಟಂತಾದೆನಯ್ಯ! ಇಹಲೋಕಕ್ಕೆ ದೂರ ಪರಲೋಕಕ್ಕೆ ದೂರ, ನಮ್ಮ ಕೂಡಲಸಂಗಮದೇವಯ್ಯ ಜಂಗಮ ಮುಖ ಲಿಂಗವಾಕದಾರಣ.

೧೭೬. ಜಂಗಮವಿಲ್ಲದ ಮಾಟ, ಕಂಗಳಿಲ್ಲದ ನೋಟ ಹಿಂಗಿತ್ತು ಶಿವಲೋಕ. ಇನ್ನೆಲ್ಲಿಯದಯ್ಯ? ಲಿಂಗಕ್ಕೆ ಮಾಡಿದ ಬೋನವ ಸಿಂಬಕ ತಿಂಬಂತೆ, ಸಮಯೋಚಿತವನರಿಯದೆ, ಉದರವ ಹೊರೆವವರ ನರಕದಲ್ಲಿಕ್ಕದೆ ಮಾಬನೆ ಕೂಡಲಸಂಗಮದೇವಾ?

೧೭೭. ಲಿಂಗದಲ್ಲಿ ದಿಟವನರಸುವರೆ, ಜಂಗಮವ ನೆರೆನಂಬುವುದು. ನಡೆ ಲಿಂಗ ನುಡಿ ಲಿಂಗ ಮುಖ ಲಿಂಗವೆಂದೆನ್ನಿ ಭೋ. ಯತ್ರ ಮಾಹೇಶ್ವರಸ್ತತ್ರ ಸನ್ನಿಹಿತನಾಗಿ, ಅಧರ ತಾಗಿದ ರುಚಿಯನುದರ ತಾಗಿದ ಸುಖವ ಉಂಬ ಉಡುವ ಕೂಡಲಸಂಗಮದೇವ, ಜಂಗಮ ಮುಖದಲ್ಲಿ.

೧೭೮. ಜಂಗಮದ ಮನ ಭಾವದಲ್ಲಿ ಭಕ್ತನ ಭೃತ್ಯನೆಂದು, ಭಕ್ತನ ಮನ ಭಾವದಲ್ಲಿ ಜಂಗಮವೇ ಕರ್ತನೆಂದು ಇದ್ದಬಳಿಕ ಬಂದುದು ಬಾರದು, ಇದ್ದುದು ಹೋಯಿತ್ತೆಂಬ ಸಂದೇಹವಿಲ್ಲದಿರಬೇಕು. ಹೋಯಿತ್ತೆಂಬ ಗುಣ ಉಳ್ಳನ್ನಕ್ಕ ನಿಮಗೆ ದೂರ, ನಿಮ್ಮವರಿಗೆ ಮುನ್ನವೇ ದೂರ, ಶಿವಾಚಾರಕ್ಕೆ ಅಲ್ಲಿಂದತ್ತತ್ತ ದೂರ. ಜಂಗಮ ಹರಿದ ಹರಿವು ಜಂಗಮದ ನಿಂದ ನಿಲವು ಜಂಗಮದ ಗಳಗರ್ಜನೆ, ಜಂಗಮದ ಕೋಳಾಟಕ್ಕೆ ಸೈರಿಸದಿದ್ದರೆ, ನೀನಂದೇ ಮೂಗ ಕೊಯ್ಯಿ ಕೂಡಲಸಂಗಮದೇವಾ.

೧೭೯. ನಯನದಾಹಾರವ ಜಂಗಮಕ್ಕೆ ನೋಡಿಸುವೆ. ಶ್ರೋತ್ರದಾಹಾರವ ಜಂಗಮಕ್ಕೆ ಕೇಳಿಸುವೆ. ಘ್ರಾಣದಾಹಾರವ ಜಂಗಮಕ್ಕೆ ವಾಸಿಸುವೆ. ಜಿಹ್ವೆಯಾಹಾರವ ಜಂಗಮಕ್ಕೆ ಊಡಿಸುವೆ. ಕವಚದಾಹಾರವ ಜಂಗಮಕ್ಕೆ ಹೊದ್ದಿಸುವೆ. ಅಧಿಕಪ್ರೇಮ ಪ್ರಣಾಮಂಗಳ ಮಾಡುವೆ. ಸಕಲ ಪದಾರ್ಥಂಗಳ ನೀಡುವೆ, ಕೂಡಲಸಂಗಾ ನಿಮ್ಮ ಶರಣರಿಗೆ.

## ಭಕ್ತನ ಮಹೇಶ.

೧. ಎಂಬತ್ತು ನಾಲ್ಕು ಲಕ್ಷ ಮುಖದೊಳಗೊಂದೇ ಮುಖವಾಗಿ ಕಾಡಿ ನೋಡೆನ್ನನು. ಬೇಡಿ ನೋಡೆನ್ನನು. ಬೇಡದಿದ್ದರೆ, ಅಯ್ಯ ನಿಮಗೆ ಪ್ರಮಥರಾಣೆ. ನೀನಾವ ಮುಖದಲ್ಲಿ ಬಂದು ಬೇಡಿದೊಡೀವೆನು, ಕೂಡಲಸಂಗಮದೇವಯ್ಯ,

೨. ಕಂದಿದೆನಯ್ಯ ಎನ್ನ ನೋಡುವರಿಲ್ಲದೆ. ಕುಂದಿದೆನಯ್ಯ ಎನ್ನ ನುಡಿಸುವರಿಲ್ಲದೆ. ಬಡವಾದೆನಯ್ಯ ಎನ್ನ ತನುಮನ ಧನವ ಬೇಡುವರಿಲ್ಲದೆ. ಕಾಡುವ ಬೇಡುವ ಶರಣರ ತಂದು ಕಾಡಿಸು ಬೇಡಿಸು ಕೂಡಲಸಂಗಮದೇವಾ.

೩. . ವೇಷ ಅವಿಚಾರದಲ್ಲಿ ನಡೆಯಿತ್ತೆಂದು ಆಸುರದಲ್ಲಿ ಬೊಗಳುವ ಕುನ್ನಿ ನೀ ಕೇಳಾ! ಹರಿಯನೆ ದಾಸನ ವಸ್ತ್ರವ? ಉಣ್ಣನೇ ಚೆನ್ನಯ್ಯನ ಸಂಗಾತ? ಪರವಧುವ ಕೊಳನೇ ಸಿಂಧು ಬಲ್ಲಾಳನ? ಬೇಡನೇ ಸಿರಿಯಾಳನ ಮಗನ? ನಡೆವುದು ನುಡಿವುದು ಅವಿಚಾರವೆಂದು ಭಾವ ವಿಭಾವವೆಂದು ಕಂಡೆನಾದಡೆ, ತಪ್ಪೆನ್ನದು. ಮೂಗಕೊಯ್ಯಿ ಕೂಡಲಸಂಗಮದೇವಾ.

೪. ನೀನಿಕ್ಕಿದ ಬಿಯ್ಯದಲ್ಲಿ ವಂಚನೆಯುಳ್ಳೊಡೆ, ಸಂಗ ನಿಮ್ಮ ತೊತ್ತುತನಕ್ಕೆ ದೂರವಯ್ಯ. ಕದ್ದು ತಿಂದರೆ ಕೈಯ್ಯ ಹಿಡಿದೊಮ್ಮೆ ಬಡಿದು ತುಡುಗುಣಿತನವ ಬಿಡಿಸಯ್ಯ. ಜಂಗಮ ಮನೆಗೆ ಬಂದಲ್ಲಿ ಓಸರಿಸಿದರೆ ಹಿಡಿದು ಮೂಗ ಕೊಯಿಯಯ್ಯ ಕೂಡಲಸಂಗಮದೇವ.

೫. ದೇವನಿಂತವನೆಂದು ತೋರಿ ಕೊಡುವೆನು ಗಣಂಗಳಿಗೆ. ಬಲ್ಲಾಳನ ವಧುವ ಬೇಡಿದಾತ ನೀ ದೇವಾ! ದೇವನಿಂತವನೆಂದು ತೋರಿಯೆ ಕೊಡುವೆನು ನಾನು ಗಣಂಗಳಿಗೆ. ದಾಸನ ವಸ್ತ್ರವ ಬೇಡಿದಾತ ನೀ ದೇವಾ! ದೇವನಿಂತವನೆಂದು ತೋರಿಕೊಡುವೆನು ನಾನು ಗಣಂಗಳಿಗೆ ಸಿರಿಯಾಳನ ಮಗನ ಬೇಡಿದಾತ ನೀ ದೇವಾ. ಕೂಡಲಸಂಗಮದೇವ ಜಂಗಮ ಮುಖ ಲಿಂಗವಾಗಿ ಕಾಡಿ ನೋಡುವ ಬೇಡಿ ನೋಡುವ.

೬. ಹೊನ್ನಿನೊಳಗೊಂದೊರೆಯ, ಸೀರೆಯೊಳಗೊಂದೆಳೆಯ, ಇಂದಿಂಗೆ ನಾಳಿಂಗೆ ಬೇಕೆಂದೆನಾದರೆ, ನಿಮ್ಮಾಣೆ ನಿಮ್ಮ ಪುರಾತರಾಣೆ. ನಿಮ್ಮ ಶರಣರಿಗಲ್ಲದೆ, ಮತ್ತೊಂದನರಿಯೆ ಕೂಡಲಸಂಗಮದೇವಾ.

೭. ಆಲುತ್ತಲು ಹರಿಯ ಹೊಯಿಸಿ, ಅಂಕವ ಮಾಡಿದೆನೆಲ್ಲರ ಕಂಡು, ಆನು ಬೇಡೆಂದಡೆ ಮಾಣೆ. ಕಲಿತನವ ಮಾಡಿದೆನೆಲ್ಲರ ಕಂಡು, ಅಲ್ಲಿ ಹೋಯಿತ್ತಾಗಳೆ ಎಂದಡೆ ಆಸೆಮಾಡೆನು, ಕೂಡಲಸಂಗಮದೇವಾ.

೮. ಕಾಗೆ ಒಂದಗುಳ ಕಂಡರೆ, ಕರೆಯದೆ ತನ್ನ ಬಳಗವನು? ಕೋಳಿ ಒಂದು ಕುಟಕ ಕಂಡರೆ ಕರೆಯದೆ ತನ್ನ ಕುಲವೆಲ್ಲವ? ಶಿವಭಕ್ತನಾಗಿ, ಭಕ್ತಿ ಪಕ್ಷವಿಲ್ಲದಿದ್ದರೆ, ಆ ಕಾಗೆ ಕೋಳಿಗಿಂದ ಕರಕಷ್ಟ ಕೂಡಲಸಂಗಮದೇವಾ.

೯. ಆವನೇವನಾದರೇನು? ಹೇವವಿಲ್ಲದಂಗೈಸಬಹುದೆ? ಕೊಡಲಿಲ್ಲೆಂಬುದರಿಂದ ಸಾಯಲುಬಹುದು. ಸೈರಿಸಬಾರದು. ಬೇಡುವರ ನೋಡಿ, ನೋಡಿ, ಈಯಲಿಲ್ಲದ ಜೀವನವದೇಕೆ ಕೂಡಲಸಂಗಮದೇವಾ?

೧೦. ಹರಗಣಪಂಕ್ತಿಯ ನಡುವೆ ಕುಳ್ಳಿರ್ದು ನಾನು ಒಡೆತನವ ನಾಯುತೇಜವ ಹೊತ್ತುಕೊಂಡು ಮಡದಿಯನ್ನಗಲೊಳಗೆ ಸಕಲದೇವಾನ್ನವ ಒಡೆಯರಿಗಿಂದ ಮಿಗಿಲಾಗಿ ಇಕ್ಕಲು ತೆಗೆದಿರಿಸಿದೆನು. ಈ ಪರಿಯ ಆಯುಕಂತೆ ಹೊರಲು ಕಿಲ್ಬಿಷಪಾಪವು. ಕರುಣಿ ಚೆನ್ನಬಸವಣ್ಣ ಮರೆದು ಕೊಂಡೆನಾದರೆ ಒಡೆಯ ಕೂಡಲಸಂಗಯ್ಯ ಕೆಡಹಿ ನರಕದಲ್ಲಿಕ್ಕುವ.

೧೧. ಭಕ್ತಿ ಸುಭಾಷೆಯ ನುಡಿಯ ವರ್ತಿಸಿ ನುಡಿವೆ. ನುಡಿವಂತೆ ನಡೆವೆ. ನಡೆಯೊಳಗೆ ನುಡಿಯ ಪೂರೈಸುವೆ. ಮೇಲೆ ತೂಗುವ ತ್ರಾಸು ಕಟ್ಟಳೆ ನಿಮ್ಮ ಕೈಯ್ಯಲ್ಲಿ ಒಂದು ಜವೆ ಕೊರತೆಯಾದರೆ, ಎನ್ನನದ್ದಿ ನೀನೆದ್ದು ಹೋಗು ಕೂಡಲಸಂಗಮದೇವಾ.

೧೨. ಓಡುವಾತ ಲೆಂಕನಲ್ಲ. ಬೇಡುವಾತ ಭಕ್ತನಲ್ಲ. ಓಡಲಾಗದು ಲೆಂಕನು. ಬೇಡಲಾಗದು ಭಕ್ತನು. ಓಡೆನಯ್ಯಾ ಬೇಡೆನಯ್ಯಾ ಕೂಡಲಸಂಗಮದೇವಾ.

೧೩. ಚಂದ್ರನ ಶೈತ್ಯವಲ್ಲಿ, ಬೆಳೆವ ಕಾಯಕ್ಕೆ, ಬೆಳದಿಂಗಳ ಬಯಸುವ ಹಂಗೇಕಯ್ಯ? ಶರಣರ ಸಂಗವಲ್ಲಿದ್ದು ಶಿವನ ಬೇಡುವ ಹಂಗೇಕಯ್ಯ? ಕೂಡಲಸಂಗನ ಶರಣರು ಬಂದು ತಮ್ಮನನೆಂದರೆ, ಸಾಲದೇ ಅಯ್ಯಾ?

೧೪. ದಾಸನ ವಸ್ತ್ರವ ಬೇಡದ ಮುನ್ನ, ತವನಿಧಿಯ ನಿತ್ತಡೆ, ನಿಮ್ಮ ದೇವರೆಂಬೆ. ಸಿರಿಯಾಳನ ಮಗನ ಬೇಡದ ಮುನ್ನ, ಕಾಂಚಿಯ ಪುರವ ಕೈಲಾಸಕ್ಕೊಯ್ದರೆ, ನಿಮ್ಮ ದೇವರೆಂಬೆ. ಬಲ್ಲಾಳನ ವಧುವ ಬೇಡದಮುನ್ನ, ಸ್ವಯಲಿಂಗವ ಮಾಡಿದರೆ, ನಿಮ್ಮ ದೇವರೆಂಬೆ. ದೇಹಿ ನೀನು ವ್ಯಾಪಾರಿಗಳು ನಮ್ಮವರು. ಬೇಡು ಕೂಡಲಸಂಗಮದೇವಾ ಎಮ್ಮವರ ಕೈಯ್ಯಲೂ.

೧೫. ಎಲ್ಲರೂ ವೀರರು. ಎಲ್ಲರೂ ಧೀರರು. ಎಲ್ಲರೂ ಮಹಿಮರು. ಎಲ್ಲರೂ ಪ್ರಮಥರು. ಕಾಳಗದ ಮುಖದಲ್ಲಿ ಕಾಣಬಾರದು. ಓಡುವ ಮುಖದಲ್ಲಿ ಕಾಣಬಹುದು. ನಮ್ಮ ಕೂಡಲಸಂಗನ ಶರಣರು ಧೀರರು, ಉಳಿದವರೆಲ್ಲ ಅಧೀರರು.

೧೬. ಎಲ್ಲಿ ನೋಡಿದಡಲ್ಲಿ ಮನವೆಳಸಿದಡೆ, ಆಣೆ, ನಿಮ್ಮಾಣೆ, ನಿಮ್ಮ ಪ್ರಮಥರಾಣೆ. ಪರವಧುವನು ಮಹಾದೇವಿ ಎಂಬೆ ಕೂಡಲಸಂಗಮದೇವಾ.

೧೭. ಹರಿವ ಹಾವಿಗಂಜೆ, ಉರಿಯ ನಾಲಿಗೆಗಂಜೆ, ಸುರಿಗೆಯ ಮೊನೆಗಂಜೆ. ಒಂದಕಂಜುವೆನೊಂದಕ್ಕಳುಕುವೆ. ಪರಸ್ತ್ರೀ ಪರಧನವೆಂಬ ಜೂಬಿಂಗಂಜುವೆ. ಮುನ್ನಂಜದ ರಾವಣನೇ ವಿಧಿಯಾದ? ಅಂಜುವೆನಯ್ಯಾ ಕೂಡಲಸಂಗಮದೇವಾ.

೧೮. ಒಂದಕ್ಕೊಂಬತ್ತ ನುಡಿವ, ಕಣ್ಣ ಕೆಂಚನೆಮಾಡಿ, ಗಂಡು ಗೆದರಿ, ಮುಡುಹಿಕ್ಕಿ ಕೆಲವರ ಕಂಡಂಜುವೆ ಓಸರಿಸುವೆ. ಓಡಿವೆನೆಂಬ ಭಂಗವಾವಡಾಗಲಿ. ನಮ್ಮ ಕೂಡಲ ಸಂಗನಶರಣರನುಭಾವವಿಲ್ಲದವರ ಹೊಲಮೇರೆಯು ಹೊದ್ದೆ, ಹೊಲನ ಬಿಟ್ಟೋಡುವೆ.

೧೯. ಒಡೆಯರು ಬಂದಡೆ ಗುಡಿತೋರಣವ ಕಟ್ಟಿ, ನೆಂಟರು ಬಂದರೆ, ಸಮಯವಿಲ್ಲೆನ್ನಿ. ಅಂದೇಕೆ ಬಾರರು? ನೀರಿಂಗೆ ನೇಣಿಂಗೆ ಹೊರಗಾದಂದು ಸಮಯಾಚಾರಕ್ಕೆ ಒಳಗಾದಂದು? ಪುರುಷ ಮುಟ್ಟಲು, ಕಬ್ಬುನ ಸುವರ್ಣವಾಯಿತ್ತು. ಬಳಿಕ ಬಂಧುಗಳುಂಟೇ, ಕೂಡಲಸಂಗಮದೇವಾ?

೨೦. ಒಡೆಯರಾಡುವ ಮಾತ ಕಡೆ ಮಹಿಯಂತರ ಕೇಳಿ, ಇದಿರುಪೋಗಿ ಕಿಂಕರನಾಗಿ ನಡುಗುತ್ತ ಬಿನ್ನಹವ ಮಾಡುವ ಸದ್ಭಕ್ತನ ತೋರಯ್ಯ. ಒಡೆಯರಾಡುವ ಮಾತ ಕಂಡು, ಕರೆವಲ್ಲಿ ಕೆಡೆಮುಟ್ಟಿ ಬಾಯಿ ಘನವೆಂದು ಆಡುವವನ ತೋರದಿರಯ್ಯ! ಅವನ ಸಂಗವಲಿ ಇರಿಸದಿರಯ್ಯ! ಅವನ ಸಹ ಪಂಕ್ತಿಯಲ್ಲಿ ಕುಳ್ಳಿರಿಸದಿರಯ್ಯ. ಕೂಡಲಸಂಗಮದೇವಯ್ಯ ನಿಮ್ಮ ಬೇಡುವುದೊಂದೇ ವರವ.

೨೧. ಒಡ ಹಾರುವನೇಸು ಭಕ್ತನಾದರೆಯು ನೇಣಿನ ಹಂಗ ಬಿಡ. ಮಾಲೆಗಾರನೇಸು ಭಕ್ತನಾದರೆಯು, ಬಾವಿಯ ಬೊಮ್ಮನ ಹಂಗ ಬಿಡ. ಬಣಜಿಗನೇಸು ಭಕ್ತನಾದರೆಯೂ ಒಟ್ಟಿಲ ಬೆನಕನ ಹಂಗ ಬಿಡ. ಕಂಚಗಾರನೇಸು ಭಕ್ತನಾದರೆಯು, ಕಾಳಿಕಾದೇವಿಯ ಹಂಗ ಬಿಡ. ನಾನಾವ ಹಂಗಿನವನಲ್ಲ. ನಿಮ್ಮ ಶರಣರ ಹಂಗಿನವನಯ್ಯಾ ಕೂಡಲಸಂಗಮದೇವಾ.

೨೨, ಶ್ರೀ ವಿಭೂತಿ ರುದ್ರಾಕ್ಷಿ ಇದ್ದವರ ಲಿಂಗವೆಂಬೆ. ಇಲ್ಲದವರ ಭವಿ ಎಂಬೆ. ಕೂಡಲಸಂಗಮದೇವ ಸದುಭಕ್ತರ ನೀನೆಂಬೆ.

೨೩. ದೇವ ಸಹಿತ ಭಕ್ತ ಮನೆಗೆ ಬಂದರೆ, ಕಾಯಕವಾವುದೆಂದು ಬೆಸಗೊಂಡೆನಾದರೆ, ನಿಮ್ಮಾಣೆ, ನಿಮ್ಮ ಪುರಾತರಾಣೆ. ತಲೆದಂಡ, ತಲೆದಂಡ. ಕೂಡಲಸಂಗಮದೇವಾ, ಭಕ್ತರಲ್ಲಿ ಕುಲವನರಸಿದರೆ, ನಿಮ್ಮ ರಾಣಿವಾಸದಾಣೆ.

೨೪. ಲಿಂಗಾಂಗಿಗಳಲ್ಲದವರ ಶರಣರ ಸಂಗವಿಲ್ಲದವರ ಕಂಡರೆ ನಾಚುವೆ. ಅವರ ನುಡಿ ಎನಗೆ ಸಮನಿಸದಯ್ಯ! ಕೂಡಲಸಂಗಮದೇವಾ ನೀನು ಅಲ್ಲಿ ಇಲ್ಲದ ಕಾರಣ.

೨೫. ಶ್ರೀ ವಿಭೂತಿಯ ಹೂಸದವರ, ಶ್ರೀ ರುದ್ರಾಕ್ಷಿಯ ಧರಿಸದವರ, ನಿತ್ಯ ಲಿಂಗಾರ್ಚನೆಯ ಮಾಡದವರ, ಜಂಗಮವೇ ಲಿಂಗವೆಂದರಿಯದವರ, ಸದ್ಭಕ್ತರ ಸಂಗದಲ್ಲಿರದವರ, ತೋರದಿರು ಕೂಡಲಸಂಗಮದೇವಾ ಸೆರಗೊಡ್ಡಿ ಬೇಡುವೆನು.

೨೬. ಕೂಪರಿಗೆ ಹೇಳುವೆನು ಕುಳಸ್ಥಳಂಗಳನೆಲ್ಲವ. ಕೂರದವರಿಗೆ ಹೇಳಿ ನಾನೇವೆನು ಶಿವನೇ? ಕರಲ ಭೂಮಿಯಲ್ಲಿ ಕರೆದ ವೃಷ್ಟಿಯತೆರನಂತೆ ಅವರೆತ್ತ ಬಲ್ಲರೆನ್ನ ಸುಖ ದುಃಖವ? ಅಂಗವಿಲ್ಲದ ಸಂಗವು, ಆಳಲಿಲ್ಲದ ಹುಯ್ಯಲಂತೆ. ಇದು ಕಾರಣ ಕೂಡಲಸಂಗಮದೇವಾ, ನಿಮ್ಮ ಶರಣರಿಗಲ್ಲದೆ ಬಾಯ ತೆರೆಯೆನು.

೨೭. ಒಡದೋಡು ಎನ್ನ ಮನೆಯಲ್ಲಿಲ್ಲದಂತೆ ಮಾಡಯ್ಯ! ಕೊಡುದೇವ, ಎನ್ನ ಕೈಯ್ಯಲೊಂದು ಕರಿಕೆಯನು. ವೃಡದೇವ ಶರಣೆಂದು ಭಿಕ್ಷಕ್ಕೆ ಹೋದರೆ, ಅಲ್ಲಿ ನಡೆ ದೇವ ಎಂದೆನಿಸೋ, ಕೂಡಲಸಂಗಮದೇವಾ.

೨೮. ಭವ ವಿರಹಿತ ಭಕ್ತನಾದ ಬಳಿಕ, ಭಕ್ತಿ ಭಾಜನದಲ್ಲಿ ಮಾಡಿ ಭವಿಗಿಕ್ಕಲಾಗದಯ್ಯಾ! ಯುಕ್ತಿಶೂನ್ಯರಿಗೆ ಮುಂದೆ ಪ್ರಸಾದ ದೂರ, ಮುಕ್ತಿ ಇಲ್ಲ. ಮುಂದೆ ನಾಯ ಬಸಿರಲ್ಲಿ ಬಪ್ಪುದು ತಪ್ಪದು. ಪೃಥ್ವಿಯೊಳಗೆ ಕೂಡಲಸಂಗಮದೇವಾ, ನಿಮ್ಮ ಶರಣರಿಗಲ್ಲದೆ ಅನಾಚಾರಕ್ಕೆಲ್ಲಿಯದೋ?

## ಭಕ್ತನ ಪ್ರಸಾದಿ.

೧. ಅಯ್ಯ ನಿಮ್ಮ ಶರಣರ ದಾಸೋಹಕ್ಕೆ ಎನ್ನ ತನುಮನ ಧನವ ಲಸದಂತೆ ಮಾಡಯ್ಯ! ತನುದಾಸೋಹಕ್ಕೆ ಉಬ್ಬುವಂತೆ ಮಾಡು. ಮನದಾಸೋಹಕ್ಕೆ ಲೀಯವಾಹಂತೆ ಮಾಡು. ಧನದಾಸೋಹಕ್ಕೆ ಸವಿಧು ನಿಮ್ಮ ಶರಣರ ಪ್ರಸಾದದಲ್ಲಿ ನಿರಂತರ ಆಡಿ, ಪಾಡಿ, ನೋಡಿ, ಕೂಡಿ, ಭಾವಿಸಿ, ಸುಖಿಸಿ, ಪರಿಣಾಮಿಸುವಂತೆ ಮಾಡು, ಕೂಡಲಸಂಗಮದೇವಾ.

೨. ಹಾರುವ ಹಾರುವನಪ್ಪೆ ನಾನು ಸದ್ಭಕ್ತರೆನ್ನವರೆನ್ನವರೆಂದು. ಹಾರುವೆ, ಹಾರುವೆನಪ್ಪಾ ನಾನು, ಶರಣರು ಎನ್ನವರೆನ್ನವರೆಂದು, ಕೂಡಲಸಂಗನಶರಣರು ಒಕ್ಕುದನಿಕ್ಕಿ ಸಲಹುವರೆಂದು.

೩. ಒಕ್ಕುದ ಮಿಕ್ಕುದನುಂಡು, ಕಿವಿವಿಡಿದಾಡುವೆ. ಶರಣರ ಮನೆಯ ಲೆಂಗಿಯ ಡಿಂಗರಿಗ ನಾನು, ಕೂಡಲಸಂಗನ ಶರಣರ ಮನೆಯ ಭಕ್ತಿಯ ಮರುಳ ನಾನು.

೪. ಗುರುಲಿಂಗ ಜಂಗಮದಿಂದ ಪಾದೋದಕ ಪ್ರಸಾದವಾಯಿತ್ತು. ಆ ಭಾವನೇ ಮಹಾ ಪ್ರಸಾದವಾಗಿ, ಎನಗೆ ಬೇರೆ ಪ್ರಸಾದವೆಂಬುದಿಲ್ಲ, ಕೂಡಲಸಂಗಮದೇವಾ.

೫. ಅಹುದೆಂದರಿಯೆ, ಅಗದೆಂದರಿಯೆ, ಆದಿಯ ಪಥವ ತೋರ ಲರಿಯೆ, ಸತ್ಯವನರಿಯೆ, ಸಹಜವನರಿಯೆ, ಸಜ್ಜನಶುದ್ಧವ ಮುನ್ನರಿಯೆ. ನಿಮ್ಮ ಶರಣರ ಒಕ್ಕುದನುಂಡಿಪ್ಪೆ, ಕೂಡಲಸಂಗಮದೇವಾ.

೬. ಆವನಾದೊಡೇನು, ಶ್ರೀ ಮಹಾದೇವನ ನೆನೆವನ ಬಾಯ ತಂಬುಲವ ಮೆಲುವೆ, ಬೀಳುಡಿಗೆಯ ಹೊದುವೆ, ಪಾದರಕ್ಷೆಯ ಕಾಯ್ದು ಬದುಕುವೆ, ಕೂಡಲಸಂಗಮದೇವ.

೭. ಒಂದುವನರಿಯದ ಸಂದೇಹಿ ನಾನಯ್ಯಾ! ನಂಬುಗೆ ಇಲ್ಲದ ಡಂಭಕ ನಾನಯ್ಯ! ನಿಮ್ಮ ನಂಬಿದ ಶರಣರ ಡಿಂಗರಿಗ ನಾನು, ಕೂಡ ಲಸಂಗಮದೇವಾ.

೮. ಬಿಡದೆ ಬಾಗಿಲ ಎಂಜಲ ಕಾಯ್ದಿಪ್ಪೆನು. ಕಿಂಕರರ ಮನೆ ಯಲ್ಲಿ ಕಿಂಕರನು ಆನು., ಹಾರುತಿಪ್ಪೆನು. ನಮ್ಮ ಕೂಡಲಸಂಗನ ಶರ ಣರ ಒಕ್ಕುದ ಮಿಕ್ಕುದನುಂಬ ಕಿಂಕರ ನಾನು.

೯. ತೊತ್ತಿಂಗೇಕೆ ಲಕ್ಷಣ? ಬಂಟಂಗೇಕಾಚಾರ? ಆಗಮವೇಕೆ ಡಿಂಗರಿಗಂಗೆ, ಒಕ್ಕುದ ನುಂಬವಂಗಯ್ಯ, ಕೂಡಲಸಂಗಮದೇವಾ ನಿಮ್ಮ ನಂಬುವದಾಚಾರವಯ್ಯ.

೧೦. ತೊತ್ತಿಂಗೆ ಲಕ್ಷಣವೇಕಯ್ಯ ? ಅವರೊಕ್ಕುದನುಂಡು, ಮಿಕ್ಕುದ ಕಾಯ್ದಿರ್ಪುದು ಸಾರೆ ಹೊರಸೇಕೆ? ಅವಳಿಗೆ ಮಾರುತ್ತರ ವೇಕೆ? ಕೂಡಲಸಂಗನಶರಣರೊಡನೆ ಇದಿರುತ್ತರವೇಕೆ ಸಿಂಬಕಂಗೆ?

೧೧. ಪಾದೋದಕವ ಕೊಂಬೆ. ಪ್ರಸಾದವ ಕೊಂಬೆ, ಅರ್ಥ ಪ್ರಾಣಾಭಿಮಾನ ನಿಮ್ಮದೆಂಬೆ. ರಾತ್ರಿಯಲೊತ್ತೆಯಕೊಂಬ ಪಾತಕಿ ಸೂಳೆ ಯಂತೆ, ಬರಿಮಾತಿಂಗೊಲಿವನೇ ನಮ್ಮ ಕೂಡಲಸಂಗಮದೇವಾ?

೧೨. ಪಾತಕ ಮಹಾ ಪಾತಕವ ಮಾಡಿದವನು ಸದ್ಭಕ್ತರ ಮನೆಗೆ ಹೋಗಿ, ಅವರೊಕ್ಕ ಪ್ರಸಾದವನಾಯಿದುಂಡಡೆ ಸಕಲ ಬ್ರಹ್ಮಹತ್ಯಾದಿ ಪಾತಕ ಪರಿಹಾರ. ಒಮ್ಮೆ ಬೇಡಿಕೊಂಡುಂಡರೆ ॥ಶ್ಲೋ॥ ಪಾತಕೇಮಮ ನೋಪಸ್ರಾಪ್ತೇ ಶಿವಭಕ್ತ ಗೃಹಂವ್ರಜೇತ್। ಯಾಚಯೇದನ್ನಮಮೃತಂತ ವಲಾಭೆ ಜಲಂಪಿಬೇತ್॥ ಇದು ಕಾರಣ ಕೂಡಲಸಂಗಮದೇವಾ ನಿಮ್ಮ ಸದ್ಭಕ್ತರಿಗೆ ನಮೋ ನಮೋ ಎಂಬೆನು.

೧೩. ನಾನು ಹೊತ್ತ ಹುಳಿಯನಂಬಿಲಿಗೆ ಕೊಂಬುವರಿಲ್ಲ ನೋಡಯ್ಯಾ. ಆನು ನಿಮ್ಮ ಶರಣರ ಒಕ್ಕುದನುಂಡು ಬದುಕುವೆನಯ್ಯಾ! ಮೇರುವ ಸಾರಿದ ಕಾಗೆ ಹೊಂಬಣ್ಣವಪ್ಪುದು ತಪ್ಪದು, ಕೂಡಲಸಂಗಮದೇವಾ.

೧೪. ಭವಭವದಲ್ಲಿ ನಿಮ್ಮ ಜಂಗಮವೇ ಶರಣಯ್ಯಾ! ಅವರುಂಡು ಮಿಕ್ಕುದ ಉಡುಗಿ, ಒಕ್ಕಪ್ರಸಾದವನಾಯಿದುಕೊಂಬ ಮರುಳ ನಾನಯ್ಯ! ನಮ್ಮ ಕೂಡಲಸಂಗನ ಶರಣರ ಋಣವ ನಾ ಹಿಂಗಲಾರೆ.

೧೫. ದಾಸಿಯ ವರ್ಗದಲ್ಲಿಪ್ಪೆನು. ಶಿವಶರಣರ ಮನೆಯಲ್ಲಿ ಅವರೊಕ್ಕುದನುಂಡು, ಮಿಕ್ಕುದ ಕಾಯಿದುಕೊಂಡಿಪ್ಪ ಕಾರಣ, ಕಾಲ ಮುಟ್ಟಲಮ್ಮವು. ಕಲ್ಪಿತ ತೊಡೆಯಿತ್ತು. ಎನ್ನ ಭವಬಂಧನ ಹಿಂಗಿತ್ತು. ಎನ್ನ ಕರ್ಮ ನಿರ್ಮೂಳವಾಯಿತ್ತು. ಅವರ ತೊತ್ತಿನ ತೊತ್ತಿನ ಮರುದೊತ್ತಿನ ಮಗನೆಂದು ಕೂಡಲಸಂಗಮದೇವ ಇತ್ತ ಬಾ ಎಂದೆತ್ತಿಕೊಂಡನು.

೧೬. ಜನ್ಮಜನ್ಮಕ್ಕೆ ಹೋಗಲೀಯದೆ, ಸೋಹಮ್ಮೆಂದೆನಿಸದೆ, ದಾಸೋಹಂ ಎಂದೆನಿಸಯ್ಯಾ! ಲಿಂಗಜಂಗಮದ ಪ್ರಸಾದವ ತೋರಿ ಬದುಕಿಸಯ್ಯಾ, ಕೂಡಲಸಂಗಮದೇವಾ.

೧೭. ಕರ್ತರು ನಿಮ್ಮ ಗಣಂಗಳು ಎನ್ನ ತೊತ್ತ ಮಾಡಿ ಸಲಹಿದ ಸುಖವು ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯವೆಂತುಟಲ್ಲ ಕೇಳಿರಯ್ಯಾ! ಕೂಡಲಸಂಗನ ಶರಣರು ತಮ್ಮ ಒಕ್ಕುದನಿಕ್ಕಿ ಸಲಹುವ ಸುಖವು.

## ಭಕ್ತನ ಪ್ರಾಣಲಿಂಗಿ.

೧. ತೊತ್ತಿಂಗೆ ಬಲ್ಲಹನೊಲಿದಡೆ, ಪದವಿಯ ಮಾಡದೆ ಮಾಣ್ಬನೆ? ಅಯ್ಯಾ! ಬೇಡರ ದಾಸಯ್ಯಂಗೊಲಿದಾತ ಮತ್ತೊಬ್ಬ ದೇವನೇ ಅಯ್ಯ?

ಮಾವರ ಚನ್ನಯ್ಯಂಗೆ, ಡೋಹರ ಕಕ್ಕಯ್ಯಂಗೆ ತೆಲುಗು ಜೊಮ್ಮಯ್ಯಂಗೆ ಒಲಿದಾತ ಮತ್ತೊಬ್ಬ ದೇವನೇ ಅಯ್ಯಾ? ಎನ್ನ ಮನದ ಪಂಚೇಂದ್ರಿಯ ನಿಮ್ಮತ್ತಲಾದರೆ ತನ್ನತ್ತ ಮಾಡುವ ಕೂಡಲಸಂಗಮದೇವಾ.

೨. ಹೊರಗೆ ಹುಸಿ ಏವೆನಯ್ಯಾ, ಒಳಗೆ ಶುದ್ಧವಾಗದನ್ನಕ್ಕ? ಮಣಿಯ ಕಟ್ಟಿ ಏವೆನಯ್ಯಾ ಮನಮುಟ್ಟದನ್ನಕ್ಕ? ನೂರನೋದಿ ಏವೆನಯ್ಯಾ ನಮ್ಮ ಕೂಡಲಸಂಗಮದೇವನ ಮನ ಮುಟ್ಟದನ್ನಕ್ಕ?

೩. ಸುಚಿತ್ತದಿಂದ ನಿಮ್ಮ ನೆನೆಯಲೊಲ್ಲದೆನ್ನಮನ ಎಂತಯ್ಯ? ಎನಗಿನ್ನಾವುದು ಗತಿ ಎಂತಯ್ಯ? ಎನ್ನಗಿನ್ನಾವುದು ಮತಿ ಎಂತಯ್ಯ? ಹರ ಹರಾ, ಕೂಡಲಸಂಗಮದೇವಾ, ಮನದ ಸಂಚೈಸೆನ್ನ.

೪. ಅಷ್ಟದಳಕಮಲವ ಸುತ್ತುವ ಜೀವಾತ್ಮನೆ ಮೆಟ್ಟಿದ ದಳವನರಿಯದೆ, ಆನು ಭಕ್ತನೆಂತೆಂಬೆ? ಆನು ಶರಣನೆಂತೆಂಬೆ? ಆನು ಲಿಂಗೈಕ್ಯನೆಂತೆಂಬೆ? ಕೂಡಲಸಂಗಮದೇವಾ, ಎನ್ನ ಮನವು ಸಮಾಧಾನವಾಗದನ್ನಕ್ಕ?

೫. ನಾ ನಿಮ್ಮ ನೆನೆವೆನು. ನೀವೆನ್ನನರಿಯಿರಿ. ನಾ ನಿಮ್ಮನೋಲೈಸುವೆನು. ನೀವೆನ್ನ ಕಾಣಿರಿ. ನಾನೆಂತು ಬದುಕುವೆನೆಂತು ಜೀವಿಸುವೆನಯ್ಯಾ? ಕೂಡಲಸಂಗಮದೇವಾ, ಎನಗೆ ನೀವೇ ಪ್ರಾಣಗತಿಮತಿ ನೋಡಯ್ಯಾ.

೬. ತಂದೆ ತಾಯಿ ನೀನು, ತಾಯಿ ನೀನು, ಬಂಧು ನೀನು, ಬಳಗ ನೀನು. ನೀನಲ್ಲದೆ, ಮತ್ತಾರು ಇಲ್ಲವಯ್ಯಾ. ಕೂಡಲಸಂಗಮದೇವಾ, ಹಾಲಲದ್ದು, ನೀರಲದ್ದು.

೭. ಎನ್ನ ಆಪತ್ತು ಸುಖದುಃಖ ನೀವೇ ಕಂಡಯ್ಯಾ! ಮತ್ತಾರೂ ಇಲ್ಲ. ಹರಹರಾ, ನೀನೇ ಕಂಡಯ್ಯ! ಎನ್ನ ಮಾತಾಪಿತನು ನೀನೇ ಕಂಡಯ್ಯ ಕೂಡಲಸಂಗಮದೇವಾ.

೮. ಎನ್ನ ಜನ್ಮವ ತೊಡೆದ ನೀ ಧರ್ಮಿ, ಎನ್ನ ಜನ್ಮವನತಿಗಳೆದ ನೀ ಧರ್ಮಿ, ಎನ್ನ ಭವಬಂಧನವ ನೀಕರಿಸಿದೆಯಾಗಿ, ಶಿವನೇ ಗತಿ ಎಂದು ನಂಬಿದೆನಯ್ಯಾ! ಎನ್ನಷ್ಟಮದಂಗಳ ಸುಟ್ಟುರುಹಿದೆಯಾಗಿ ಕಟ್ಟುಗ್ರದಿಂದ ನಿಮ್ಮ ಶ್ರೀ ಚರಣವ ಕಂಡೆ. ಸೃಷ್ಟಿಪ್ರತಿಪಾಲಕಾ, ನಿಮ್ಮ ನಂಬಿದೆ, ಕರುಣಿಸು ಕೂಡಲಸಂಗಮದೇವಾ.

೯. ಭವರೋಗ ವೈದ್ಯನೆಂದು, ನಾ ನಿಮ್ಮ ಮರೆಹೊಕ್ಕೆ. ಭಕ್ತಿ ದಾಯಕ ನೀನು. ಕರುಣಿಸು ಲಿಂಗ ತಂದೆ, ಜಯ ಜಯ ಶ್ರೀ ಮಹಾದೇವ, ಜಯ ಜಯ ಶ್ರೀ ಮಹಾದೇವ, ಜಯ ಜಯ ಶ್ರೀ ಮಹಾದೇವ ಎನುತಿದ್ದಿತ್ತೆನ್ನಮನವು. ಕೂಡಲಸಂಗಮದೇವಂಗೆ ಶರಣೆಂದಿತ್ತೆನ್ನಮನವು.

## ಭಕ್ತನ ಶರಣ.

೧. ಅಂಗೈಯ್ಯೊಳಗಣ ಲಿಂಗವ ನೋಡುತ್ತ ಕಂಗಳು ಕಡೆಗೋಡಿ ವರಿಯುತ್ತ ಸುರಿವುತ್ತ ಎಂದಿಪ್ಪೆನೋ! ನೋಟವೇ ಪ್ರಾಣವಾಗಿ ಎಂದಿಪ್ಪೆನೋ! ಕೂಟವೇ ಪ್ರಾಣವಾಗಿ ಎಂದಿಪ್ಪೆನೋ! ಎನ್ನ ಅಂಗವಿಕಾರದ ಸಂಗವಳಿದು ಕೂಡಲಸಂಗಯ್ಯಾ ಲಿಂಗ ಲಿಂಗವೆನುತ್ತ?

೨. ಎದೆ ಬಿರಿವನ್ನಕ್ಕ, ಮನದಣಿವನ್ನಕ್ಕ, ನಾಲಿಗೆ ನಲಿನಲಿದೋಲಾಡುವನ್ನಕ್ಕ, ನಿಮ್ಮ ನಾಮಾಮೃತವ ತಂದಿರಿಸು ಕಂಡಯ್ಯಾ ಎನಗೆ ಎನ್ನ ತಂದೆ. ಬಿರಿಮುಗುಳಂತೆ ಎನ್ನ ಹೃದಯ ನಿಮ್ಮ ಶ್ರೀ ಚರಣದ ಮೇಲೆ ಬಿದ್ದುರುಳುಗೆ ಕೂಡಲಸಂಗಮದೇವಾ.

೩. ಆಡಿ ಕಾಲು ದಣಿಯವು, ನೋಡಿ ಕಣ್ಣು ದಣಿಯವು, ಹಾಡಿ ನಾಲಿಗೆ ದಣಿಯದು. ಇನ್ನೇವೆನಿನ್ನೇವೆ? ನಾ ನಿಮ್ಮ ಕಯ್ಯಾರೆ ಪೂಜಿಸಿ ಮನದಣಿಯಲೊಲ್ಲದಿನ್ನೇವೆ ನಿನ್ನೇವೆ? ಕೂಡಲಸಂಗಮದೇವ, ಕೇಳಯ್ಯಾ ನಿಮ್ಮ ಉದರವ ಬಗಿದಾನು ಹೊಗುವ ಭರವೆನಗೆ.

೪. ಕಾಮಸಂಗ ನಿಸ್ಸಂಗವಾಗಿ, ಇನ್ನಾವ ಸಂಗವನರಿಯೆನಯ್ಯಾ. ನಿಮಗೆ ಒಲಿದೆನಾಗಿ, ಅಗಲಲಾರೆ, ನಗೆಮೊಗದರಸ, ಅವಧಾರು. ಕೂಡಲಸಂಗಮದೇವಾ, ಬಗಿದು ಹೋಗುವೆ ನಾ ನಿಮ್ಮ ಮನವನು.

೫. ನೋಡಿ ನೋಡಿ ಲಿಂಗಧ್ಯಾನವೆನ್ನ ಮನರಾಗರಂಜನೆಯು. ಉತ್ಪತ್ತಿ ಸ್ಥಿತಿ ಲಯ ನಿನಗೆಂದಾದವು. ರಾಗರಂಜನೆಯ ಪೂಜೆ ಎನ್ನಮನ ಕೂಡಲಸಂಗಮದೇವಾ, ಆಹಾ ಎನ್ನ ಮನ.

೬. ವಾರವೆಂದರಿಯೆ, ದಿನವೆಂದರಿಯೆ, ಏನೆಂದರಿಯೆನಯ್ಯಾ! ಇರುಳೆಂದರಿಯೆ, ಹಗಲೆಂದರಿಯೆ, ಏನೆಂದರಿಯೆನಯ್ಯಾ! ನಿಮ್ಮನ ಪೂಜಿಸಿ, ಎನ್ನನ ಮರೆದೆ ಕೂಡಲಸಂಗಮದೇವಾ.

೭. ನಿಮ್ಮ ನೋಟವನಂತ ಸುಖ. ನಿಮ್ಮ ಕೂಟ ಪರಮ ಸುಖ. ಅಷ್ಟಕೋಟಿ ರೋಮಂಗಳೆಲ್ಲ ಕಂಗಳಾಗಿ ನೋಡುತಿದ್ದೆನು. ಕೂಡಲ

ಸಂಗಮದೇವಯ್ಯಾ, ನಿಮ್ಮ ನೋಡಿ ನೋಡಿ ಮನದಲ್ಲಿ ರತಿಹುಟ್ಟಿ, ನಿಮಿರ್ದವೆನ್ನ ಕಳೆಗಳು.

೮. ವಚನದಲ್ಲಿ ನಾಮಾಮೃತ ತುಂಬಿ, ನಯನದಲ್ಲಿ ನಿಮ್ಮ ಮೂರುತಿ ತುಂಬಿ, ಮನದಲ್ಲಿ ನಿಮ್ಮ ನೆನಹು ತುಂಬಿ, ಕಿವಿಯಲ್ಲಿ ನಿಮ್ಮ ಕೀರ್ತಿ ತುಂಬಿ, ಕೂಡಲಸಂಗಮದೇವಾ, ನಿಮ್ಮ ಚರಣಕಮಲದೊಳಗಾನು ತುಂಬಿ.

೯. ಅಡಿಗಡಿಗೆ ಲಿಂಗವನಡರಿಯಡರಿ ನೋಡಿ ನೋಡಿ ಕಂಗಳು ಕಡೆಗೋಡಿವರಿದವೆನಗಯ್ಯಾ. ಎನ್ನಶ್ರುಜಲಂಗಳು ಆಲಿಕಲ್ಲರೂಹಿನಂತೆ ಅರಗಿನ ಪುತ್ಥಳಿಯಂತೆ ತನುಪುಳಕಿತವಾದ ಬೆಮರುಬಿಂದುಗಳೆಲ್ಲ. ಕೂಡಲಸಂಗನ ದರ್ಶನ ಸ್ಪರ್ಶನದಿಂದ ಮನ ಒಲಿದು ನೆರೆವ ಭರವನೇನ ಹೇಳುವೆನಯ್ಯಾ?

೧೦. ತಾಳಮಾನ ಸರಸವ ನರಿಯೆ. ಒಜೆ ಬಜಾವಣೆಯ ಲೆಕ್ಕವನರಿಯೆ. ಅಮೃತಗಣ ದೇವಗಣವನರಿಯೆ. ಕೂಡಲಸಂಗಮದೇವ, ನಿನಗೆ ಕೇಡಿಲ್ಲವಾಗಿ, ಆನು ಒಲಿದಂತೆ ಹಾಡುವೆ.

೧೧. ಶ್ಲೋ॥ ವರಂಪ್ರಾಣ ಪರಿತ್ಯಾಗೋ ಛೇದನಂ ಶಿರಸೋಪಿವಾ। ನತ್ವಮಭ್ಯರ್ಚ್ಯ ಭುಂಜೀಯಾತ್ ಭಗವಂತಂ ತ್ರಿಲೋಚನಂ॥ ಎಂದುದಾಗಿ ದೇಹಧರ್ಮ ತನ್ನ ಆದಂತಾಗಲಿ ಕೂಡಲಸಂಗನ ಪೂಜಿಸಿದಲ್ಲದೆ ನಿಲ್ಲಲಾರೆನು.

೧೨. ಸುರರು, ಕಿನ್ನರರು, ಕಿಂಪುರುಷರೆಂಬುವರನಾರು ಬಲ್ಲರು? ಎನ್ನ ಚಿತ್ತವು ನಿಮ್ಮ ಮೇಲೆ ಸಂಗಯ್ಯ. ಎನ್ನ ಚಿತ್ತವು ನಿಮ್ಮ ಮೇಲೆ ಲಿಂಗಯ್ಯಾ. ಕೂಡಲಸಂಗಮದೇವಾ, ಅನ್ಯವೆಂಬುದನರಿಯೆನಯ್ಯಾ.

೧೩. ಮುಂಡೆಯ ಬೋಳಿಸಿಕೊಂಡು ಗಂಡು ತೊತ್ತು ಪೊಕ್ಕೆನಯ್ಯ. ಲಜ್ಜೆಗೆಟ್ಟಾದರೂ, ಲಿಂಗವನೊಲಿಸುವೆ. ನಾಣುಗೆಟ್ಟಾದರೂ ಲಿಂಗವನೊಲಿಸುವೆ. ಕೆಲದ ಸಂಸಾರಿಗಳು ನಗುತಿರ್ದರೆ ಇರಲಿ. ಕೂಡಲಸಂಗಮದೇವಾ, ಶರಣು ಗತಿಪೊಕ್ಕೆನಯ್ಯ.

೧೪. ಎನಗೆ ನಿಮ್ಮ ನೆನಹಾದಾಗವೇ ಉದಯ. ಎನಗೆ ನಿಮ್ಮ ಮರಹಾದಾಗವೇ ಅಸ್ತಮಾನ. ಎನಗೆ ನಿಮ್ಮ ನೆನಹವೇ ಜೀವನ. ಎನಗೆ ನಿಮ್ಮ ನೆನಹವೇ ಪ್ರಾಣ, ಕಾಣಾ ತಂದೆ ಸ್ವಾಮಿ. ಎನ್ನ ಹೃದಯ

ದಲ್ಲಿ ನಿಮ್ಮ ಚರಣ ಮುಂಡಿಗೆಯನೊತ್ತಯ್ಯಾ! ವದನದಲ್ಲಿ ಷಡಕ್ಷರಿಯ ಬರೆಯಯ್ಯಾ, ಕೂಡಲಸಂಗಮದೇವಾ.

೧೫. ಎನ್ನ ಕಾಯವ ದಂಡಿಗೆಯ ಮಾಡಯ್ಯಾ! ಎನ್ನ ಶಿರವ ಸೋರೆಯ ಮಾಡಯ್ಯಾ! ಎನ್ನ ನರವ ತಂತಿಯ ಮಾಡಯ್ಯಾ! ಎನ್ನ ಬೆರಳ ಕಡ್ಡಿಯ ಮಾಡಯ್ಯಾ! ಬತ್ತೀಸ ರಾಗವ ಹಾಡಯ್ಯಾ! ಉರದ ಲೊತ್ತಿ ಬಾರಿಸು ಕೂಡಲಸಂಗಮದೇವಾ.

೧೬. ಕುರುಳು, ಬೆರಳು, ಮುಡುಹು, ಮುಂಬಲ್ಲ, ಕೊಳ್ಳಾ. ನಿರಿಯನಿಕ್ಕಿ, ದಾಂಟವಡೆ ಅಂತೆನ್ನ ನಂಬ. ಪರ ಪುರುಷರ ಮುಖವ ನೋಡದಂತೆ ಮಾಡಾ. ಬಳಿಕ ನೀನೇ ಹೇಗೆ ಇರಿಸಿದಂತೆ ಇರಿಸಾ. ಎನ್ನ ಉರದಲ್ಲಿ ಕೂಡಲಸಂಗಯ್ಯನೆಂದು ಬರೆಯಾ. ಹರಿಬ್ರಹ್ಮರಿಗೆರಗದಂತೆ, ಬಳಿನೀರನೆರೆಯಾ.

೧೭. ಕಂಡಕನಸು ನಿಧಾನವ ಕಂಡೆನಯ್ಯಾ! ಬಿಡಲಾರದ ನಿಧಾನವ ಕಂಡೆನಯ್ಯಾ! ಕೂಡಲಸಂಗಯ್ಯನೆಂಬ ನಿಧಾನವ ಕಂಡು ಬಿಡಲಾರೆನಯ್ಯಾ.

೧೮. ಹೊನ್ನ ಹಾವಿಗೆಯ ಮೆಟ್ಟಿದವನ, ಮಿಡಿಯ ಮುಟ್ಟಿದ ಕೆಂಜೆಡೆಯವನ, ಮೈಯ್ಯಲ್ಲಿ ವಿಭೂತಿಯ ಧರಿಸಿದವನ, ಕರದಲ್ಲಿ ಕಪಾಲವ ಹಿಡಿದವನ, ಅರ್ಧನಾರಿಯಾದವನ, ಬಾಣನ ಬಾಗಿಲ ಕಾಯ್ದವನ, ನಂಬಿಗೆ ಕುಂಟಣಿಯಾದವನ, ಚೋಳಂಗೆ ಹೊನ್ನ ಮಳೆಯ ಕರೆದವನ, ಎನ್ನ ಮನಕ್ಕೆ ಬಂದವನ, ಸದ್ಭಕ್ತರ ಹೃದಯದಲ್ಲಿಪ್ಪವನ, ಮಾಡುವ ಪೂಜೆಯಲೊಪ್ಪುವನ, ಕೂಡಲಸಂಗಯ್ಯನೆಂಬುವನ.

೧೯. ಮನಕ್ಕೆ ಮನೋಹರವಲ್ಲದ ಗಂಡರು ಮನಕ್ಕೆ ಬಾರರು ಕೇಳವ್ವ, ಕೇಳದಿ. ಪನ್ನಗಭೂಷಣನಲ್ಲದ ಗಂಡರು ಇನ್ನೆನಗಾಗದ ಮೊರೆ ನೋಡವ್ವ! ಕನ್ನೆಯಂದಿನ ಕೂಟ ಚಿಕ್ಕಂದಿನ ಬಾಳುವೆ. ನಿಮ್ಮಾಣೆಯಯ್ಯಾ, ಕೂಡಲಸಂಗಮದೇವಾ.

೨೦. ಜಗವೆಲ್ಲರಿಯಲು, ಎನಗೊಬ್ಬ ಗಂಡನುಂಟು. ಆನು ಮುತ್ತೈದೆ, ಆನು ನಿಷ್ಠೆದೆ ಕೂಡಲಸಂಗಮದೇವಯ್ಯನಂತಪ್ಪ ಎನಗೊಬ್ಬ ಗಂಡನುಂಟು.

೨೧. ಸಂಸಾರವೆಂಬ ಶ್ವಾನನಟ್ಟಿ ಮೊಸಲಬೀಸರವ ಮಾಡದಿರಯ್ಯಾ! ಎನ್ನ ಚಿತ್ತವು ನಿಮ್ಮ ಧ್ಯಾನದಯ್ಯ! ನೀನಲ್ಲದೆ ಮತ್ತೇನನು

ಅರಿಯೆನು. ಕನ್ಸೆಯಲ್ಲಿ ಕೈವಿಡಿದೆನು. ನಿಮ್ಮಲ್ಲಿ ನೆರೆದೆನು. ಮುನ್ನಿನ ಕಂಡ್ಯಾ ಮಹಾಲಿಂಗವೆ. ಸತಿಯಾನು, ಪತಿ ನೀನಯ್ಯ. ಮನೆಯ ಕಾಯ್ದಿಪ್ಪಂತೆ ನೀನೆನ್ನ ಮನವ ಕಾಯ್ದಿಪ್ಪ ಗಂಡನು. ನಿನ ಗೋತ ಮನಪನನ್ಯಕ್ಕೆ ಹರಿಸಿದರೆ, ನಿನ್ನಭಿಮಾನ ಹಾನಿ ಕೂಡಲ ಸಂಗಮದೇವಾ.

## ಭಕ್ತನೈಕ್ಯ.

೧. ನೀನೊಲಿಯಿತ್ತೆ ಪುಣ್ಯ, ನೀ ಒಲ್ಲದುದೇ ಪಾಪ, ಕಂಡೆಯ್ಯಾ. ಸಕಲ ಜಗದೊಳಗೆ ಅನುಶ್ರುತನಾಗಿಪ್ಪೆಯಯ್ಯಾ. ನೀನೊಲಿದವನೇ ನಿಮ್ಮ ನರಿವನು. ॥ಶ್ಲೋ॥ ಪ್ರಸಾದಾದ್ದೇವತಾ ಭಕ್ತಿಃ ಪ್ರಸಾದಾತ್ ಭಕ್ತಿಸಂಭವಃ। ಯಥಾಂಕುರಸ್ತಥಾಬೀಜಂ ಬೀಜತೋ ವಾ ಯಥಾಂಕುರಃ॥ ಎಂದು ದಾಗಿ, ನೀ ಒಲಿದವನೇ ಧನ್ಯ ಜಗಕ್ಕೆ ಪಾವನ ಕೂಡಲಸಂಗಮದೇವಯ್ಯಾ.

೨. ಅಷ್ಟವಿಧಾರ್ಚನೆ ಷೋಡಶೋಪಚಾರವ ಅಂದಂದಿನ ಕೃತ್ಯವ ಆಂದಂದಿಂಗೆ ಆನು ಮಾಡಿ ಶುದ್ಧನಯ್ಯಾ! ಹಂಗುಹರಿಯಿಲ್ಲದ ಕಾರಣ, ಕೂಡಲಸಂಗಮದೇವ, ನಿಃಫಲದಾಯಕನಾಗಿ, ಆನು ಮಾಡಿ ಶುದ್ಧನಯ್ಯ.

೩. ಮಾಟಕೂಟ ಫಲಪ್ರಾಪ್ತಿ ಎಂಬ ಮಾತ ಕೇಳಲಾಗದು. ಶಿವ ಶಿವ, ನಿಮ್ಮ ಭಕ್ತರಿಗೆ ಮಾಡಿದೆನೆಂದೆನ್ನದಿರೆಂದು, ಶ್ರೀ ಗುರು ಲಿಂಗವು ಕೃಪೆಮಾಡಿದ ಕಾರಣ, ಅಲ್ಲಿ ಮಾಡುವರು ಮಾಡಿಸಿಕೊಂಬುವರು ನೀವೇ ಕೂಡಲಸಂಗಮದೇವಾ.

೪. ಅಯ್ಯ, ನಿಮ್ಮ ಅನುಭಾವದಿಂದ ಎನ್ನ ತನುವು ಹಾಳಾಯಿತ್ತಯ್ಯಾ! ನಿಮ್ಮನುಭಾವದಿಂದ ಎನ್ನ ಮನ ಹಾಳಾಯಿತ್ತಯ್ಯ! ಅಯ್ಯ ನಿಮ್ಮ ಅನುಭಾವದಿಂದ ಎನ್ನ ಕರ್ಮಛೇದನವಾಯಿತ್ತಯ್ಯಾ! ನಿಮ್ಮವರು ಅಡಿಗಡಿಗೆ ಹೇಳಿ ಭಕ್ತಿ ಎಂಬ ಒಡವೆಯನು ದಿಟಮಾಡಿ ತೋರಿದರು ಕಾಣಾ ಕೂಡಲಸಂಗಮದೇವಾ.

೫. ಭಕ್ತನೆಂತೆಂಬೆನಯ್ಯ, ಭವಿಸಂಗ ಬಿಡದನ್ನಕ್ಕ? ಮಾಹೇಶ್ವರನೆಂತೆಂಬೆನಯ್ಯಾ, ಪರಸ್ತ್ರೀ ಪರದರ್ಥದಾಸೆ ಬಿಡದನ್ನಕ್ಕ? ಪ್ರಸಾದಿ ಎಂತೆಂಬೆನಯ್ಯ, ಆಧಿ ವ್ಯಾಧಿ ನಷ್ಟವಾಗದನ್ನಕ್ಕ? ಪ್ರಾಣಲಿಂಗಿ ಎಂತೆಂಬೆನಯ್ಯ, ಪ್ರಾಣ ಸುಸ್ಥಿರವಾಗದನ್ನಕ್ಕ? ಶರಣನೆಂತೆಂಬೆನಯ್ಯ, ಪಂಚೇಂದ್ರಿ

ಯನಾಸ್ತಿಯಾಗದನ್ನಕ್ಕ? ಐಕ್ಯನೆಂತೆಂಬೆನಯ್ಯ, ಜನನ ಮರಣವಿರಹಿ
ತವಾಗದನ್ನಕ್ಕ? ಇಂತಿಪ್ಪ ಭಾಷೆ ಪ್ರತವೇಷಗಳ ನಾನರಿಯೆನಯ್ಯ.
ಅಘಟಿತಘಟಿತ ವರ್ತಮಾನವ ನಾನರಿಯೆನಯ್ಯ! ನಿಮ್ಮ ಶರಣರ
ತೊತ್ತು ಭೃತ್ಯಾಚಾರವ ಮಾಡುವೆ ಕೂಡಲಸಂಗಮದೇವಾ.

೬. ಅಭ್ಯಾಸವೆನ್ನ ವರ್ತಿಸಿತ್ತಯ್ಯಾ! ಭಕ್ತಿಸಾಧ್ಯವಾಗದು. ನಾನೇ ವೆನಯ್ಯ! ಆ ನಿಮ್ಮ ಮನಬೊಗುವನ್ನಕ್ಕ, ನೀವೆನ್ನ ಮನಜೊಗುವನ್ನಕ್ಕ, ಕಾಯದ ಗುಣಂಗಳಳಿದವರಿಗೆ ಶರಣೆಂಬೆ, ಕೂಡಲಸಂಗಮದೇವಾ.

೭. ತನುಸಾರಾಯರ, ಮನಸಾರಾಯರ, ಜ್ಞಾನಸಾರಾಯರ ತೋರಯ್ಯ ನಿಮ್ಮ ಧರ್ಮ. ಭಾವಸಾರಾಯರ, ಭಕ್ತಿ ಸಾರಾಯರ, ತೋರಯ್ಯ ನಿಮ್ಮ ಧರ್ಮ. ಕೂಡಲಸಂಗಮದೇವಯ್ಯ, ನಿಮ್ಮನರಿಯದ ಅವಗುಣಿಗಳ ತೋರದಿರಯ್ಯ ನಿಮ್ಮ ಧರ್ಮ.

೮. ಸಂಚಲವಿಲ್ಲದ ಭಕ್ತಿ, ವಂಚನೆ ಇಲ್ಲದ ಮಹಂತನ ತೋರಾ! ತನುಶುಚಿಗಳ, ಮನಶುಚಿಗಳ ತೋರಾ! ಇಂತಪ್ಪ ಶಿವಲಿಂಗೈಕ್ಯರ ತೋರಿ ಬದುಕಿಸು, ಕೂಡಲಸಂಗಮದೇವಾ.

೯. ಕಾಮಸಂಗವಳಿದು, ಅನುಭಾವ ಸಂಗದಲುಳಿದವರ ಅಗಲಲಾರೆನು. ಶಿವಂಗೆ ಮಿಗೆ ಒಲಿದವರನು ನಾನು ಅಗಲಲಾರೆನು, ಕಾಣಾ ಕೂಡಲಸಂಗಮದೇವಾ.

೧೦. ಭಕ್ತಿರತಿಯ ವಿಕಲತೆಯ ಯುಕುತಿಯನೇನ ಬೆಸಗೊಂಬಿರಯ್ಯ! ಕಾಮಿಗೆ ಉಂಟೆ ಲಜ್ಜೆ ನಾಚಿಕೆ? ಕಾಮಿಗೆ ಉಂಟೇ ಮಾನಾಪಮಾನವು? ಕೂಡಲಸಂಗನ ಶರಣರಿಗೊಲಿದ ಮರುಳನನೇನ ಬೆಸಗೊಂಬಿರಯ್ಯಾ?

೧೧. ಇಂದು ಹುಟ್ಟಿದ ಕೂಸಿಂಗೆ ಇಂದೇ ಜವ್ವನವಾಯಿತ್ತಯ್ಯಾ! ಆ ಕೂಸು ಬೀದಿಯಲ್ಲಿ ಒತ್ತೆಗೊಳಲು ನಿಂದಿತ್ತಯ್ಯಾ! ಇದರ ಸಂಗಸುಖದನುಭಾವವನು ಕೂಡಲಸಂಗಮದೇವ ತಾನೇ ಬಲ್ಲ.

೧೨. ಸಕ್ಕರೆಯ ಕೊಡನ ತುಂಬಿ ಹೊರಗೆ ಸವಿದಡೆ, ರುಚಿಯುಂಟೆ? ತರ್ಕೈಸಿ ಭುಜತುಂಬಿ ಲಿಂಗಸ್ಪರ್ಶನವ ಮಾಡದೆ, ಅಕಟಕಟಾ, ಸಂಸಾರವ್ಯಥಾ ಹೋಯಿತ್ತಲ್ಲಾ! ಅದೇತರ ಭಕ್ತಿ, ಅದೇತರ ಯುಕ್ತಿ? ಕೂಡಿಕೋ ಕೂಡಲಸಂಗಮದೇವಾ.

೧೫. ಕಾಳಿದಾಸಂಗೆ ಕಣ್ಣನಿತ್ತೆ, ಮಹಿಲಯ್ಯನ ನಿಜಪುರಕೊಯ್ದೆ. ನಂಬಿ ಕರೆದಡೋ ಎಂದೆ. ತೆಲುಗು ಜೊಮ್ಮಯ್ಯಂಗೆ ಒಲಿದೆ ದೇವಾ! ಕೂಡಲಸಂಗಮದೇವಾ ಎನ್ನನೇಕೊಲ್ಲೆಯಯ್ಯಾ?

೧೬. ಪರ ಚಿಂತೆ ಎಮಗೇಕಯ್ಯ? ನಮ್ಮ ಚಿಂತೆ ನಮಗೆ ಸಾಲದೆ? ಕೂಡಲಸಂಗಯ್ಯ ಒಲಿದನೋ ಒಲಿಯನೋ ಎಂಬ ಚಿಂತೆ ಹಾಸಲುಂಟು ಹೊದೆಯಲುಂಟು.

೧೭. ಕಣ್ಣ ಕೋಪಕ್ಕೆ ಮುಂದರಿಯದೆ ನುಡಿದು, ಮನಮುಚ್ಚಿ ಮರುಳಾದೆ ನೋಡವ್ವಾ! ಕೇಳು, ಕೇಳವ್ವಾ, ಕೆಳದಿ. ಸಖಿಯರಿಲ್ಲದೆ ಸುಖವ ಬಯಸಿದರೆ ದೊರೆಕೊಂಬುವದೆ ಹೇಳಾ! ಎನ್ನ ಮುನಿಸು ಎನ್ನಲಡಗಿತ್ತು. ಇನ್ನು ಬಾರಯ್ಯ, ಕೂಡಲಸಂಗಮದೇವಾ.

೧೮. ಲಜ್ಜೆಗೆಟ್ಟೆನು, ನಾಣುಗೆಟ್ಟೆನು, ಕುಲಗೆಟ್ಟೆನು, ಛಲಗೆಟ್ಟೆನು, ಸಂಗಾ ನಿಮ್ಮ ಪೂಜಿಸಿ ಭವಗೆಟ್ಟೆನು. ನಾನಯ್ಯ ಕೂಡಲಸಂಗಮದೇವಯ್ಯಾ ನಿಮ್ಮ ಮುಟ್ಟಿ ಹುಟ್ಟುಗೆಟ್ಟೆನು.

೧೯. ಮಾಡುವ ಭಕ್ತನ ಕಾಯ ಬಾಳೆಯ ಕಂಭದಂತಿರಬೇಕು. ಮೆಲ್ಲ ಮೆಲ್ಲನೆ ಹೊರೆ ಎತ್ತಿ ನೋಡಿದಡೆ, ಒಳಗೆ ಕೆಚ್ಚಿಲ್ಲದಿರಬೇಕು. ಮೇಲಾದ ಫಲವ ನಮ್ಮವರು ಬೀಜಸಹಿತ ನುಂಗಿದರು. ಎನಗಿನ್ನಾವ ಭವವಿಲ್ಲ ಕೂಡಲಸಂಗಮದೇವಾ.

೧೦. ಜಂಗಮವ ಕೂಡಿಕೊಂಡು, ಲಿಂಗಾರ್ಚನೆಯ ಮಾಡುವದು ಲೇಸಯ್ಯ ಭಕ್ತಂಗೆ. ಆ ಭಕ್ತನ ಕೂಡಿಕೊಂಡು ಲಿಂಗಾರ್ಚನೆಯ ಮಾಡುವುದು ಲೇಸಯ್ಯ ಜಂಗಮಕ್ಕೆ. ಆ ಜಂಗಮದ ಕರ್ತವ್ಯವೇ ಭಕ್ತಂಗೆ ದಾಸೋಹ. ಆ ಭಕ್ತನ ಕಿಂಕಲವೇ ಜಂಗಮಕ್ಕೆ ದಾಸೋಹ. ಆ ಭಕ್ತನೊಳಗೆ ಜಂಗಮವಡಗಿ, ಆ ಜಂಗಮದೊಳಗೆ ಭಕ್ತನಡಗಿ ಇದನೇನೆಂದು ಹವಣಿಸುವೆನಯ್ಯಾ? ಎರಡೊಂದಾದ ಘನವ ಇದನೆಂತುಪಮಿಸುವೆನಯ್ಯಾ? ತೆರಹಿಲ್ಲದ ಘನವ, ಈ ಎರಡಕ್ಕೆ ಭವವಿಲ್ಲೆಂದು, ಕೂಡಲಸಂಗಯ್ಯ, ನಿಮ್ಮ ಶ್ರುತಿಗಳು ಹೇಳಿದವಾಗಿ ನಿಮ್ಮ ಕರುಣವೆನಗಾಯಿತ್ತು.

೧೧. ಹರಿವ ನದಿಯ ತೆರನ ಹೋಲಬಲ್ಲರೆ ಭಕ್ತ. ಕೂಡೆ ಸುಯಿಧಾನವ ನೀಡಬಲ್ಲರೆ ಭಕ್ತ. ನೀಡಿ ಮಿಕ್ಕುದ ಕಾಯ್ದುಕೊಂಡಿರಬಲ್ಲರೆ, ಕೂಡಿಕೊಂಡಿಪ್ಪ ನಮ್ಮ ಕೂಡಲಸಂಗಮದೇವಾ.

೨೦. ಏನು ಮಾಡುವೆ? ನನ್ನ ಪುಣ್ಯದ ಫಲವು. ಶಾಂತಿಯ ಮಾಡ ಹೋದರೆ ಬೇತಾಳನಾಯಿತ್ತು. ಕೂಡಲಸಂಗಮದೇವನ ಪೂಜಿಸಿಹೆನೆಂಬರೆ ಭಕ್ತಿ ಎಂಬ ಮೃಗ ಎನ್ನನಟ್ಟಿ ಬಂದು ನುಂಗಿತ್ತಯ್ಯಾ.

೨೧. ಭಕ್ತಿ ಎಂಬ ಪೃಥ್ವಿಯ ಮೇಲೆ ಗುರುವೆಂಬ ಬೀಜವಂಕುರಿಸಿ, ಲಿಂಗವೆಂಬ ಎಲೆಯಾಯಿತ್ತು. ಲಿಂಗವೆಂಬ ಎಲೆಯ ಮೇಲೆ ವಿಚಾರವೆಂಬ ಹುವ್ವಾಯಿತ್ತು. ಆಚಾರವೆಂಬ ಕಾಯಾಯಿತ್ತು. ನಿಷ್ಪತ್ತಿ ಎಂಬ ಹಣ್ಣಾಯಿತ್ತು. ನಿಷ್ಪತ್ತಿ ಎಂಬ ಹಣ್ಣು ತೊಟ್ಟು ಬಿಟ್ಟು ಕಳಚಿ ಬೀಳುವಲ್ಲಿ, ಕೂಡಲಸಂಗಮದೇವ ತನಗೆ ಬೇಕೆಂದು ಎತ್ತಿಕೊಂಡಾ.

---

## ಮಹೇಶ್ವರಜ್ಞಾನಿ.

೧. ಸ್ವಾಮಿ ನೀನು, ಶಾಶ್ವತ ನೀನು. ಎತ್ತಿದೆ ಬಿರಿದ ಜಗವೆಲ್ಲರಿಯಲು. ಮಹಾದೇವ ಮಹಾದೇವ ಇಲ್ಲಿಂದ ಮೇಲೆ ಶಬ್ದವಿಲ್ಲ. ಪಶುಪತಿ ಜಗಕ್ಕೆ ಏಕೋದೇವ. ಸ್ವರ್ಗ ಮರ್ತ್ಯ ಪಾತಾಳದೊಳಗೆ ಒಬ್ಬನೇ ದೇವ ಕೂಡಲಸಂಗಮದೇವಾ.

೨. ಶೃತಿಗಗಮ್ಯ ದ್ವಾದಶಾಂತ್ಯನಪ್ರತಿ ಮಹಿಮಂಗೆ ಪ್ರತಿಯುಂಟೇ? "ಸೋಮಃ ಪವತೆ" ಎಂಬ ಶೃತಿಯುನರಿದು, ಶಿವನೇಕೋದೇವ ರುದ್ರ ನ ದ್ವಿತೀಯನೆಂದು ನಂಬುವುದು, ಕಾಣಿರಣ್ಣಾ. ಕೂಡಲಸಂಗಮದೇವನಲ್ಲದೆ ಇಲ್ಲವೆಂದು ಎತ್ತಿದೆ ಬಿರಿದ ಜಗವೆಲ್ಲರಿಯಲು.

೩. ಉಪ್ಪರ ಗುಡಿ, ನಂದಿವಾಹನ, ಸದ್ಯೋಜಾತನ ಬಾಗಿಲ ಮುಂದೆ ಸಾರುತಿದ್ದಾವೆ ನೋಡಾ. ಶೃತಿಗಳು ನಾಲ್ಕುವೇದವು ಹುಸಿಯದೆ 'ಭರ್ಗೋ ದೇವಸ್ಯ ಧೀಮಹಿ' ಎಂದುದಾಗಿ ಕೂಡಲಸಂಗನಲ್ಲದಿಲ್ಲೆಂಬುದು ವೇದ.

೪. ವೇದ ಸ್ವಯಂಭುವೆಂಬ ವಾದಿ ನೀ ಕೇಳೆಲವೋ. ಏಕೋದೇವ ರುದ್ರ ನ ದ್ವಿತೀಯನೆಂದು ನಂಬುವುದು ಕಾಣಿರಣ್ಣಾ. ಓಂ ದ್ಯಾವಾ ಭೂಮಿಜನಯಂ ದೇವ, ಏಕಏವ ರುದ್ರ ನ ದ್ವಿತೀಯನೆಂದು ನಂಬುವುದು ಕಾಣಿರಣ್ಣಾ. ಚಕಿತಮಭಿಧತ್ತೇ ಎಂದು ಶೃತಿ ಸಾರುತಿಪ್ಪಾವೆ. ಜಗವ ಕರ್ತ ಕೂಡಲಸಂಗಮದೇವನೊಬ್ಬನೇ ಕಾಣಿರಣ್ಣಾ.

೫. ಶೃತಿ ತತಿ ಶಿರವ ಮೇಲೆ ಅತ್ಯತಿಷ್ಠದ್ದಶಾಂಗುಲವ ನಾನೇ ನೆಂಬೆನಯ್ಯ. ಘನಕ್ಕೆ ಘನ ಮಹಿಮನ ಮನಕ್ಕಗೋಚರನ ಅಣೋರ ಣೀಯಾನ್ ಮಹತೋಮಹಿಯಾನ್ ಮಹಾದಾನಿ ಕೂಡಲಸಂಗಮದೇವ.

೬. ಸಕಲ ನಿಃಕಲವ ಕೂಡಿಕೊಂಡಿಪ್ಪೆಯಾಗಿ, ಸಕಲ ನೀನೇ ನಿಃಕಲ ನೀನೇ ಕಂಡಯ್ಯ. ವಿಶ್ವತೋ ಚಕ್ಷು ನೀನೇ ದೇವಾ, ವಿಶ್ವತೋ ಮುಖ ನೀನೇ ದೇವಾ- ವಿಶ್ವತೋ ಬಾಹು ನೀನೇ ದೇವಾ, ಕೂಡಲಸಂ ಗಮದೇವಾ.

೭. ಎತ್ತೆತ್ತ ನೋಡಿದಡತ್ತತ್ತ ನೀನೇ ದೇವಾ. ಸಕಲ ವಿಸ್ತಾರದ ರೂಹು ನೀನೇ ದೇವಾ. ವಿಶ್ವತೋ ಬಾಹು ನೀನೇ ದೇವಾ. ವಿಶ್ವತೋ ಚಕ್ಷು ನೀನೇ ದೇವಾ. ವಿಶ್ವತೋ ಮುಖ ನೀನೇ ದೇವಾ. ವಿಶ್ವತೋ ಪಾದ ನೀನೇ ದೇವಾ, ಕೂಡಲಸಂಗಮದೇವಾ.

೮. ಜಲ ಕೂರ್ಮ ನಾಗ ಮೇದಿನಿ ಸಪ್ತಸಾಗರ ಅಜಾಂಡಭಾಂಡ ಹರಿವಿರಿಂಚಿಗಳು ನಿಮ್ಮ ಉದರದ ಕೊನೆಯ ಪ್ರಾಣಿಗಳಯ್ಯ. ಕೂಡಲ ಸಂಗನ ಮಹಾಮನೆಯಲ್ಲಿ ಅಸ್ತಿಗ್ರಾಹಕನೆಂಬ ಗಣೇಶ್ವರನ ಇಚ್ಛಾಮಾ ತ್ರದಿಂದ ಜಗಜುಗವಯ್ಯ.

೯. ರುದ್ರ ಮುಖದಲ್ಲಿ ವಿಷ್ಣು ಭುಜದಲ್ಲಿ ಜಂಘೆಯಲ್ಲಿ ಅಜನ ಜನನವು. ಇಂದ್ರ ಪಾದದಲ್ಲಿ ಚಂದ್ರ ಮನದಲ್ಲಿ ಚಕ್ಷುವಿನಲ್ಲಿ ಸೂರ್ಯ ಜನನವು. ಮುಖದಲ್ಲಿ ಅಗ್ನಿ, ಪ್ರಾಣದಲ್ಲಿ ವಾಯು, ನಾಭಿಯಲ್ಲಿ ಅಂತ ರಿಕ್ಷವು. ಶಿರದಲುದಯ ತೆತ್ತೀಸ ಕೋಟಿ ದೇವರ್ಕಳು. ಪಾದ ತಳದಲ್ಲಿ ಭೂಮಿಜನನವು. ಶ್ರೋತ್ರದಲ್ಲಿ ದಶದಿಕ್ಕುವು. ಜಗವ ನಿಕ್ಷೇಪಿಸಿದ ಕುಕ್ಷಿ ಯಲ್ಲಿ. ಅಕ್ಷಯನಗಣಿತನು. ಸಾಸಿರತಲೆ, ಸಾಸಿರಕಣ್ಣು. ಸಾಸಿರಕೈ, ಸಾಸಿ ರಪಾದ, ಸಾಸಿರ ಸನ್ನಿಹಿತ ನಮ್ಮ ಕೂಡಲಸಂಗಯ್ಯ.

೧೦. ವಿಶ್ವಾಧಿಕೋ ರುದ್ರನ ಹೊಗಳುವ ಶೃತಿಗಳು ವಿಶ್ವರೂಪಾಯ ವೈ ನಮಃ ಪರಮರೂಪಿನೇ ನಮೋ ಪರತತ್ವನೆ ನಮೋ ಆದಿಯಾರೂ ಢ ಭಯಂಕರನೇ ನಮೋ. ಹರಿಯನು ಹರಿಸಿಗನೆಂದು ಶೃತಿಯು ಸಾರು ತ್ತಿರಲು ಸಂಹಾರ ಕಾರಣನೇ ನಮೋ. ನಮ್ಮ ಕೂಡಲಸಂಗಮದೇವರ ಮಹಾನ್ಮಹದ್ಭ್ಯೋ ನಮಃ

೧೧. ಐದೂಡೆ ಬ್ರಹ್ಮನ ಕಪಾಲ ಕರದಲ್ಲಿ? ಐದೂಡೆ ವಿಷ್ಣುವಿನ ನಯನ ಪಾದದಲ್ಲಿ? ಐದೂಡೆ ಕಾಮನ ಸುಟ್ಟ ಭಸ್ಮ ಮೈಯ್ಯಲ್ಲಿ? ಮುಖ ಮೂದಲೇ ಏಕಯ್ಯ ಕೂಡಲಸಂಗಮದೇವಾ?

೧೨. ಹರನ ಕೊರಳಲ್ಲಿಪ್ಪ ಕರೋಟಿ ಮಾಲೆಯ ಶಿರದ ಲಿಖಿತವ ಕಂಡು ಮರುಳು ತಾಂಡವಗಳು ಓದಿನೋಡಲು ಇವನಜ ಇವ ಹರಿ ಇವ ಸುರಪತಿ ಇವ ಧರಣೇಂದ್ರ ಇವನಂತಕನೆಂದು ಹರುಷದಿಂದ ಸರಸವಾಡಿತ್ತ ಕಂಡು, ಹರ ಮುಕುಳಿತನಾಗಿ ನಕ್ಕ ನಮ್ಮ ಕೂಡಲಸಂಗಮದೇವಾ.

೧೩. ಅದರಿತು ಪಾದಘಾತದಿಂದ ಧರೆ. ಬಿದಿರಿದವು ಮಕುಟ ತಾಗಿ ತಾರಕಿಗಳು. ಉದರಿದವು ಕೈತಾಗಿ ಲೋಕಂಗಳೆಲ್ಲ. ॥ಶ್ಲೋ॥ ಮಹೀ ಪಾದಾಘಾತಾದ್ವ್ರಜತಿ ಸಹಸಾ ಸಂಶಯಪದಂ। ಪದಂವಿಷ್ಣೋರ್ಭ್ರಾಮ್ಯದ್ಭುಜಪರಿಘರುಗ್ಣಗ್ರಹಗಣಂ। ಮುಹುರ್ದ್ಯೌರ್ದೌಸ್ಥ್ಯಮಾತ್ಯ ನಿಭೃತಜಟಾತಟಿತ ತಟಾ ಜಗದ್ರಕ್ಷಾಯೈತ್ವಂ ನಟಸಿ ನನು ವಾ ಮ್ಯೈವವಿಭುತಾಂ। ನಮ್ಮ ಕೂಡಲಸಂಗಮದೇವ ನಿಂದು ನಾಟ್ಯವನಾಡೆ.

೧೪ ಆರುಕೋಟಿ ಬ್ರಹ್ಮರು ಮಡಿವಲ್ಲಿ ನಾರಾಯಣಗೆ ಒಂದ ದಿನವಾಯಿತ್ತು. ನಾರಾಯಣರೊಂದು ಕೋಟಿ ಮಡಿವಲ್ಲಿ ರುದ್ರನ ಕಣ್ಣೆವೆ ಹಳಚಿತ್ತು. ರುದ್ರಾವತಾರ ಹಲವಳಿವಲ್ಲಿ ನಮ್ಮ ಕೂಡಲಸಂಗಮದೇವನೇನೆಂದು ಅರಿಯಾ.

೧೫ ಯುಗಜುಗಪ್ರಳಯವಾಹಂದು ಕಾಣೆನಿಂದೂ ಕಾಣೆ. ಧಿಗಿಲುಭುಗಿಲೆಂದುರಿವಂದು ಕಾಣೆನಿಂದು ಕಾಣೆ. ನಮ್ಮ ಕೂಡಲಸಂಗಮದೇವನಲ್ಲದೆ ತಲೆದೋರುವ ದೈವಂಗಳನಂದೂ ಕಾಣೆನಿಂದೂ ಕಾಣೆ.

೧೬ ಒಬ್ಬ ಕೆಂಜ, ಒಬ್ಬ ಕರಿಕ, ಒಬ್ಬ ಶುದ್ಧ ಧವಳಿತನೆಂತಯ್ಯ ಲಿಂಗವೇ? ಒಬ್ಬರಿಗೊಬ್ಬರು ಘನವೆಂಬರು, ಅದೆಂತಯ್ಯ? ಒಬ್ಬರಿಗೊಬ್ಬರು ಕಿರಿಯದೆಂಬರು ಎಂತಯ್ಯ? ಬ್ರಹ್ಮ ಪ್ರಳಯ, ವಿಷ್ಣುವು ಮರಣ ಉಂಟು. ನಮ್ಮ ಕೂಡಲಸಂಗಂಗಿಲ್ಲ.

೧೭ ಹರಿಹರನೊಂದೇ ಎಂದರೆ ಸುರಿಯವೆ ಬಾಯಲ್ಲಿ ಬಾಲಹುಳುಗಳು? ಹರಿಗೆ ಹತ್ತು ಪ್ರಳಯ, ಬ್ರಹ್ಮಂಗನಂತ ಪ್ರಳಯ. ಹರಂಗೆ ಪ್ರಳಯ ಉಂಟೆಂಬುವ ಬಲ್ಲರೆ, ನೀವು ಹೇಳಿರೇ. ಪ್ರಳಯ ಪ್ರಳಯ ಅಂದಂದಿಗೆ ಹಳೆಯ ಕೂಡಲಸಂಗಮದೇವಾ.

೧೮ ವಿಷ್ಣು ಕರ್ಮಿ, ರುದ್ರ ನಿಃಕರ್ಮಿ. ಕ್ರಮವನರಿಯದೆ ನುಡಿವಿರಿ ಭೋ. ವೇದ ಸ್ಮೃತಿಗಳ ತಿಳಿಯಲರಿಯದೆ, ಪಾಪವ ಮಾಡುವರಲ್ಲಾ. ವಿಷ್ಣು ನಾನಾಯೋನಿಯಲ್ಲಿ, ಬಾರದ ಭವಂಗಳಲ್ಲಿ ಬರುತಿಪ್ಪ. ರುದ್ರನಾವಯೋನಿಯಲ್ಲಿ ಬಂದನೆಂದು, ನೀವು ಹೇಳಿರೋ. ಓಂ ವಿಷ್ಣು ಕರ್ಮಾಣಿ ಪಶ್ಯತಿಯತೋ ಪ್ರತಾನಿ ಪಸ್ಪೃಶೆ ಇಂದ್ರಸ್ಯಯುಜ್ಯಃ ಸಂಖ್ಯಾತ್ರೀಣಿ ಪದ ವಿಚಕ್ರಮೇ। ವಿಷ್ಣೋಃ ಪಾಲದಾಭ್ಯಃ ॥ ಅತೋ ಕರ್ಮಾಣಿ ಧಾರಯನ್ ತದ್ವಿಪ್ರಾಸೋವಿಪನ್ಯವೋಜಾಂ ಗ್ರಹವಾಸಃ ಸಮಿಂಧತೆ ವಿಷ್ಣೋರ್ಯತ್ಪರಮಂ ಪದಂ ಎಂಬ ಶೃತಿಯ ವಚನವ ತಿಳಿಯಿ, ಭೋ. ವರ್ಮವನೆತ್ತಿ ನುಡಿದಲ್ಲದೆ, ನಿಲ್ಲಿರಿ. ನಿಮ್ಮ ಕರ್ಮವು ಅತ್ಯತಿಷ್ಠದ್ದಶಾಂಗುಲದಿಂ ಪತ್ತತ್ತಲೆ ಕೂಡಲಸಂಗಮದೇವಾ.

೧೯. ಅಮೃತಮತಿ ಸೋಮಶಂಭುವಿಂಗೆ ಹುಟ್ಟಿದಾತ ಇಂದ್ರ. ಸತ್ಯಋಷಿ ಜ್ಯೇಷ್ಠಾದೇವಿಗೆ ಹುಟ್ಟಿದಾತ ಬ್ರಹ್ಮ. ವಸುದೇವ ದೇವಕಿಗೆ ಹುಟ್ಟಿದಾತ ವಿಷ್ಣು. ನಾಭಿರಾಜ ಮರುತಾದೇವಿಗೆ ಹುಟ್ಟಿದಾತನರುಹ. ಇವರೆಲ್ಲರು ಯೋನಿಜರೆಂಬುದು ತ್ರೈಜಗ ಬಲ್ಲುದು. ಉತ್ಪತ್ತಿ ಸ್ಥಿತಿ ಪ್ರಳಯಕ್ಕೆ ಹೊರಗಾದ ಕೂಡಲಸಂಗಮದೇವಂಗೆ ಮಾತಾಪಿತರುಗಳುಳ್ಳರೆ ಹೇಳಿರೋ.

೨೦. ಇಬ್ಬರು ಮೂವರು ದೇವರೆಂದು ಉಬ್ಬಿ ಮಾತನಾಡಬೇಡ. ಒಬ್ಬನೇ ಕಾಣಿರೋ. ಇಬ್ಬರೆಂಬುದು ಹುಸಿನೋಡಾ. ಕೂಡಲಸಂಗಮದೇವನಲ್ಲದಿಲ್ಲೆಂದಿತ್ತು ವೇದ.

೨೧. ಹುಟ್ಟಿಸುವಾತ ಬ್ರಹ್ಮನೆಂಬರು. ರಕ್ಷಿಸುವಾತ ವಿಷ್ಣುವೆಂಬರು ನೋಡಾ. ಬ್ರಹ್ಮ ತನ್ನ ಶಿರವನ್ನೇಕೆ ಹುಟ್ಟಿಸಲಾರ? ವಿಷ್ಣು ತನ್ನ ಮಗನನ್ನೇಕೆ ರಕ್ಷಿಸಲಾರ? ದುಷ್ಟನಿಗ್ರಹ ಶಿಷ್ಟಪರಿಪಾಲಕ ನಮ್ಮ ಕೂಡಲಸಂಗಮದೇವ.

೨೨. ಕೇಶವನಲ್ಲದೆ ಅತಃಪರ ದೈವವಿಲ್ಲೆಂದು ವೇದವ್ಯಾಸ ಮುನಿ ಭಂಗಪಾಗುಮುದನರಿಯಿರೇ. ಅಹಂ ಸರ್ವಜಗತ್ಕರ್ತಾ ಮಮ ಕರ್ತಾ ಮಹೇಶ್ವರಃ ಎಂದು ವಿಷ್ಣು ಹೇಳಿದ ವಚನವನರಿಯರಲ್ಲಾ. ಕೂಡಲಸಂಗಮದೇವನು ದಕ್ಷನ ಯಜ್ಞವ ಕೆಡಿಸಿದುದ ಮರೆದಿರಲ್ಲಾ.

೨೩. ನಾರಾಯಣನೆಂಬವನ ಕಾಣೆ. ಗಿರಾಯಣನೆಂಬವನ ಕಾಣೆ. ಬೊಮ್ಮನೆಂಬವನ ಕಾಣೆ. ಬೊಮ್ಮಗನೆಂಬವನ ಕಾಣೆ. ವಿಷವಟ್ಟಿ ಸುಡುವಲ್ಲಿ, ವೀರಭದ್ರ ಬಡಿವಲ್ಲಿ, ಕೂಡಲಸಂಗಯ್ಯಂಗೆ ಶರಣೆಂದು ಮೊರೆ ಇಟ್ಟರೆಲ್ಲರು.

೨೪. ಅಮೃತವ ಕಡೆವಲ್ಲಿ, ವಿಷವಟ್ಟಿ ಸುಡುವಲ್ಲಿ, ದೇವರೆಂಬುವರತ್ತ ಹೋದರೇನೆಂಭೋ. ಅಂದೊಮ್ಮೆ ಓಡಿಹೋಗಿ, ಆ ಶಿವನ ಮೊರೆಯ ಹೊಗುವಂದು, ದೇವರೆಂಬುವರತ್ತ ಹೋದರೇನೆಂಭೋ. ಕೂಡಲಸಂಗಯ್ಯ ದೇವರಿಗೆ ದೇವನು, ನೀವೆಲ್ಲ ಆಳೆಂಬುವನರಿಯಿರೆಂಭೋ

೨೫. ವಿಷ್ಣು ಬಲ್ಲಿದನೆಂಬೆನೆ? ದಶಾವತಾರದಲ್ಲಿ ಭಂಗಬಟ್ಟುದಕ್ಕೆ ಕಡೆ ಇಲ್ಲ. ಬ್ರಹ್ಮ ಬಲ್ಲಿದನೆಂಬೆನೆ? ಶಿರಹೋಗಿ ನಾನಾವಿಧಿಯಾದ. ವೇದ ಬಲ್ಲಿತ್ತೆಂಬೆನೆ? ನಾನಾಮುಖದಲ್ಲಿ ಸ್ತುತಿಯಿಸಿತಲ್ಲದೆ, ಲಿಂಗದ ನಿಲುಕಡೆಯ ಕಾಣದು. ಶಾಸ್ತ್ರಬಲ್ಲಿತ್ತೆಂಬೆನೆ? ಶಬ್ದಕ್ರಿ. ಪುರಾಣ ಬಲ್ಲಿತ್ತೆಂಬೆನೆ? ಪೂರ್ವಕ್ರಿ. ಆಗಮ ಬಲ್ಲಿತ್ತೆಂಬೆನೆ? ಮಾಯ ಹೊಂದಿತ್ತು. ಇದು ಕಾರಣ ಕೂಡಲಸಂಗಮದೇವನೇ ನಿತ್ಯ. ಉಳಿದ ದೈವವೆಲ್ಲ ಅನಿತ್ಯ ಕಾಣಿಭೋ.

೨೬. ಮರೆಯಲಾಗದೆ ಹರಿಯು? ಮರೆಯಲಾಗದೆ ಬ್ರಹ್ಮನ? ಮರೆಯಲಾಗದೆ ತೆತ್ತೀಸ ಕೋಟಿ ದೇವರ್ಕಳ? ನಮ್ಮ ಕೂಡಲಸಂಗಮದೇವರ ಮರೆಯಲಿಹುದು.

೨೭. ಬಿದಿರೆಲೆಯ ಮೆಲಿದರೆ, ಮೆಲಿದಂತಲ್ಲದೆ, ರಸವನು ಹಡೆಯಲು ಬಾರದು. ನೀರ ಕಡೆದರೆ, ಕಡೆದಂತಲ್ಲದೆ, ಬೆಣ್ಣೆಯ ಹಡೆಯಲು ಬಾರದು. ಮಳಲ ಹೊಸೆದರೆ ಹೊಸೆದಂತಲ್ಲದೆ, ಸರವೆಯ ಹಡೆಯಲು ಬಾರದು. ನಮ್ಮ ಕೂಡಲಸಂಗಮದೇವನಲ್ಲದೆ, ಅನ್ಯದೈವಕ್ಕೆರಗಿದರೆ, ಹೊಳ್ಳ ಕುಟ್ಟಿ ಕೈಹೊಟ್ಟೆಯಾದಂತಾಯಿತ್ತಯ್ಯ.

೨೮. ಆಗಳೂ ಲೋಗರ ಮನೆಯ ಬಾಗಿಲ ಕಾಯ್ದುಕೊಂಡಿಪ್ಪವು ಕೆಲವು ದೈವಂಗಳು. ಹೋಗೆಂದರೆ ಹೋಗವು. ನಾಯಿಂದ ಕರಕಷ್ಟ. ಕೆಲವು ದೈವಂಗಳು ಲೋಗರ ಬೇಡಿಕೊಂಡುಂಬ ದೈವಂಗಳು ತಾವೇನ ಕೊಡುವವು ಕೂಡಲಸಂಗಮದೇವಾ?

೨೯. ಗಾಡಿಗ ಡಿಂಬು ಗಂಗೆ ಜಿಕ್ಕು ಮುಟ್ಟಿಗೆ ಪಸುರಂಬಲಿ ಮುಟ್ಟಿಗೆ ಹುರಿಬುತ್ತಿಯ ಬೇಡಿ ಮನುಷ್ಯರ ಹಿಡಿದು ಪೀಡಿಸಿ, ತಮ್ಮ ಬಸುರ್ಗೆ ಕಾಣದೆ ಈಡಾಡಿದ ಕೂಳಂಬಲಿಯಾನಾಯ್ದು, ಕುರುಕುಪ ಹೇಸಿದೈವಂಗಳ ಬೇಡಿ ಬೇಡಿ, ನಿರರ್ಥ ಕೇಡಬೇಡ ಎಲವೋ ಕೂಡಲ ಸಂಗಮದೇವರ ನೆರೆನಂಬುವುದೆಲವೋ.

೩೦. ಹಾಳು ಮೊರಡಿಗಳಲ್ಲಿ, ಊರ ದಾರಿಗಳಲ್ಲಿ, ಕೆರೆ ಬಾವಿ ಹೂ ಗಿಡುಮರಂಗಳಲ್ಲಿ, ಗ್ರಾಮದ ಮಧ್ಯಗಳಲ್ಲಿ, ಚೌಪಥ ಪಟ್ಟಣ ಪ್ರದೇಶದಲ್ಲಿ, ಹಿರಿಯಾಲದ ಮರದಲ್ಲಿ, ಮನೆಯ ಮಾಡಿ ಕರವೆನ್ನೈಯ, ಹಸುಗೂಸು, ಬಸಿರೆ, ಬಾಣಂತಿ, ಕುಮಾರಿ, ಕೊಡಗೂಸೆಂಬವರ ಹಿಡಿದುಂಬ ಕಿರಿ ದುಂಬ ಮಾರಯ್ಯ, ಬೀರಯ್ಯ, ಕೇತರಗಾವಿಲ, ಅಂತರಬೆಂತರ, ಕಾಳಯ್ಯ, ಮಾರಯ್ಯ, ಮಾಳಯ್ಯ, ಕೇತಯ್ಯಗಳೆಂಬ ನೂರು ಮಡಿಕೆಗೆ ನಮ್ಮ ಕೂಡಲಸಂಗಮದೇವ ಶರಣೆಂಬುದೊಂದು ಪಡಿ ಸಾಲದೇ?

೩೧. ಅರಗು ತಿಂದು ಕರಗುವ ದೈವವ ಉರಿಯ ಕಂಡರೆ ಮುರು ಟುವ ದೈವವನೆಂತು ಸರಿ ಎಂಬೆನಯ್ಯ? ಅವಸರ ಬಂದರೆ ಮಾರುವ ದೈವವನೆಂತು ಸರಿ ಎಂಬೆನಯ್ಯ? ಅಂಜಿಕೆ ಬಂದರೆ ಹೂಳುವ ದೈವವ ನೆಂತು ಸರಿ ಎಂಬೆನಯ್ಯ? ಸಹಜ ಭಾವ ನಿಜೈಕ್ಯ ಕೂಡಲಸಂಗಮ ದೇವನೊಬ್ಬನೇ ದೇವ.

೩೨. ಮಾರಿಕವ್ವೆಯನೆಂತು ಕೊರಳಲ್ಲಿ ಕಟ್ಟಿಕೊಂಬರು? ಸಾಲ ಬಟ್ಟರೆ ಮಾರಿಕೊಂಡು ತಿಂಬರು. ಸಾಲಬಟ್ಟರೆ ಅವರ ಒತ್ತೆಯನಿಟ್ಟು ಕೊಂಬರಯ್ಯ. ಮಾರುಹೋಗ ಒತ್ತೆಹೋಗ ನಮ್ಮ ಕೂಡಲಸಂಗಮದೇವ.

೩೩. ಉಣಲುಡಲು ಮಾರಿಯಲ್ಲದೆ ಕೊಲಲು ಕಾಯಲು ಮಾರಿ ಯೆ? ತನ್ನ ಮಗನ ಜವನೊಯ್ದಲ್ಲಿ, ಅದೆತ್ತ ಹೋದಳು ಮಾರಿಕವ್ವೆ? ಇದ ಕಾಯ್ದರೆ, ನಮ್ಮ ಕೂಡಲಸಂಗಯ್ಯನಲ್ಲದೆ, ಮತ್ತೊಂದು ದೈವವಿಲ್ಲ.

೩೪. ಮರನ ಗೊಟಿಗೆ ಒಪ್ಪ ಕಿರುಕುಳ ದೈವಕ್ಕೆ ಕುರಿಯನಿಕ್ಕಿ ಹೆನೆಂದು ನಲಿನಲಿದಾಡುವರು. ಕುರಿ ಸತ್ತು ಕಾವುದೆ, ಹರ ಮುಳಿದವರ? ಕುರಿಬೇಡ ಮರಿಬೇಡ. ಬರಿಯ ಪತ್ರೆಯ ತಂದು, ಮರೆಯದೆ ಪೂಜಿಸು ನಮ್ಮ ಕೂಡಲಸಂಗಮದೇವನ.

೩೫. ಬನ್ನಿರೆ ಅಕ್ಕಗಳು, ಹೋಗಿರೆ ಆಲದ ಮರಕ್ಕೆ. ಕಚ್ಚುವವೇ ನಿಮ್ಮ ಚಿಪ್ಪಿನ ಹಲ್ಲುಗಳು? ಬೆಚ್ಚಿಸುವವೆ ನಿಮ್ಮ ಬಚ್ಚಣಿಯ ರೂಹುಗಳು? ನಮ್ಮ ಕೂಡಲಸಂಗಮದೇವನಲ್ಲದೆ, ಉಳಿದ ಪರದೈವಂಗಳು ಮನಕ್ಕೆ ಬಂದವೆ ಬಿಕ್ಕನೆ ಬಿರಿವ ದೈವಂಗಳು?

೩೬. ಮಡಕೆ ದೈವ ಮೊರ ದೈವ, ಬೀದಿಯ ಕಲ್ಲು ದೈವ, ಹಣಿಗೆ ದೈವ, ಬಿಲ್ಲ ನಾರಿ ದೈವ, ಕಾಣಿರೋ. ಕೊಳಗ ದೈವ, ದೈವವೆಂದು ಕಾಲಿಡಲಿಂಬಿಲ್ಲ. ದೇವನೊಬ್ಬನೇ ನಮ್ಮ ಕೂಡಲಸಂಗಮದೇವಾ.

೩೭. ರಿಣ ತಪ್ಪಿದ ಹೆಂಡಿರಲ್ಲಿ, ಗುಣ ತಪ್ಪಿದ ನೆಂಟರಲ್ಲಿ, ಜೀವವಿಲ್ಲದ ದೇಹದಲ್ಲಿ ಫಲವೇನು? ಆಳ್ದನೊಲ್ಲದಾಳಿನಲ್ಲಿ, ಸಿರಿ ತೊಲಗಿದ ರಸಿನಲ್ಲಿ, ವರವಿಲ್ಲದ ದೈವದಲ್ಲಿ, ಫಲವೇನೋ? ಕಳಿದ ಹೂವಿನಲ್ಲಿ ಕಂಪ ಸುಳಿವ ಸೂಳೆಯಲ್ಲಿ ಪೆಂಪ, ಕೊಳಚೆ ನೀರಿನಲ್ಲಿ ಗುಂಪನರಸುವಿರಿ ಮರುಳೆ. ವರಗುರು ವಿಶ್ವಕ್ಕೆಲ್ಲ ಗಿರಿಜಾಮನೋವಲ್ಲಭ ಕಾರಣಿಕ ನಮ್ಮ ಕೂಡಲಸಂಗಮದೇವಾ,

೩೮. ಗುಡಿಯೊಳಗಿರ್ದು, ಗುಡಿಯ ನೇಣ ಕೊಯ್ವರೆ ಗುಡಿಯ ದಡಿ ಬಿದ್ದು ಹಲ್ಲು ಹೋಹುದು ನೋಡಾ. ಪೊಡವಿಗೀಶ್ವರನ ಗರ್ಭವಾಸದೊಳಗಿರ್ದು ನುಡಿವರು ಮತ್ತೊಂದು ದೈವ ಉಂಟೆಂದು. ತುಡುಗುಣಿ ನಾಯ ಪಿಡಿತಂದು ಸಾಕಿದರೆ, ತನ್ನೊಡೆಯಂಗೆ ಬೊಗಳುವಂತೆ ಕಾಣಾ ಕೂಡಲಸಂಗಮದೇವ.

೩೯. ಅಸಮಾಕ್ಷ ಲಿಂಗಕ್ಕೆ ಅನ್ಯ ದೈವ ಸರಿ ಎಂಬವನ ಬಾಯಲ್ಲಿ ಮಸೆದ ಕೂರಲಗನಿಕ್ಕದೆ ಮಾಣ್ಬನೇ? ಹುಸಿಯಾಗಿ ನುಡಿವವನ ನಾಯಾಗಿ ಬೊಗಳಿಸನೆ? ಹಿರಿಯರುತ್ತಮರೆನ್ನದವನ ಕುದುರೆಯಾಗಿ ಕಟ್ಟಿಸನೆ? ಗುರುಲಘುವೆನ್ನುವವರ ಬಾಯಲ್ಲಿ ಮೆಟ್ಟಿ ಹುಡಿಯ ಹೊಯ್ಯದೆ ಮಾಬನೇ? ಪರಸ್ತ್ರೀಗಳುಪಿದವರ ಗಾಣದಲಿಕ್ಕಿ ಹಿಳಿಯನೇ? ಪರಧನಕ್ಕಳುಪಿದವರ ಹಿಡಿಖಂಡವ ಕೊಯ್ಯನೆ? ಎಲೆ ಕೂಡಲಸಂಗಮದೇವ ನಿಮ್ಮ ಹೇಳಿವ ಹೇಳಿಕೆಯಿಂದ ಸಿಂಜಿರ ನೈಲಗೆ ಮೆಳವಾಡುತ್ತ ಇದ್ದ ಕಾಣಾ ತ್ರಿಜಗದೊಳಗೆ.

೪೦. ಶಿವನು ವಿಷ್ಣುವಲ್ಲ. ವಿಷ್ಣುವು ಶಿವನಲ್ಲ. ನುಡಿಯದಿರಿಂಭೋ. ನಾರಾಯಣ ಹರನಲ್ಲ ನುಡಿಯದಿರಿಂಭೋ. ಶಿವನು ವಿಷ್ಣುವಲ್ಲ

ನುಡಿಯದಿರಿಂಭೋ. ನಮ್ಮ ಕೂಡಲಸಂಗಮದೇವಯ್ಯನನರಿಯದ ಸೂನೆಗಾರರೆಲ್ಲ ನುಡಿಯದಿರಿಂಭೋ.

೪೧. ಅವಲಕ್ಷಣ ನಾಯ ನುಡಿಯ ನಾಲಗೆಯ ಸಡಗರ ಡೋವಿಗೆ ಮೃತ್ಯುವಿನ ನುಡಿಗೊಳಗಾಯಿತ್ತು. ಬೇಡವೋ ಪರವಾದಿಗಳು ಹದಿರಬೇಡವೋ. ಪೂಷಕ ಬೊಗುಳದಿರು. ಶಿವಭಕ್ತಿಗೆಯೂ ಬೇಟಕ್ಕೆಯೂ ಜಾತಿ ಸೂತಕ ಉಂಟೇ ? ಪರುಷ ಮುಟ್ಟಲು ಕಬ್ಬುನ ಹೊನ್ನಾಯಿತ್ತು ಕಾಣಾ. ನಮ್ಮ ಕೂಡಲಸಂಗನ ಶರಣರನವರಿವರೆಂಡಡೆ ಕುಂಭೀಪಾತಕ ನಾಯಕ ನರಕ ತಪ್ಪದು ಕಾಣಾ

೪೨. ವಿಷ್ಣುವ ಪೂಜಿಸಿ ಮುಡುಹ ಸುಡಿಸಿಕೊಂಬುವ ಕಂಡೆ. ಜಿನ್ನನ ಪೂಜಿಸಿ ಬತ್ತಲೆ ಇಪ್ಪುದು ಕಂಡೆ. ಮೈಲಾರನ ಪೂಜಿಸಿ ನಾಯಾಗಿ ಬೊಗಳುವದ ಕಂಡೆ. ನಮ್ಮ ಕೂಡಲಸಂಗನ ಶರಣರ ಪೂಜಿಸಿ ದೇವ ಭಕ್ತನೆನಿಸಿಕೊಂಬುದ ಕಂಡೆ.

೪೩. ಬ್ರಾಹ್ಮಣನೇ ದೈವವೆಂದು ನಂಬಿದ ಕಾರಣ ಗೌತಮ ಮುನಿಗೆ ಗೋವಧೆಯಾಯಿತ್ತು. ಬ್ರಾಹ್ಮಣನೇ ದೈವವೆಂದು ನಂಬಿದ ಕಾರಣ ಬಲಿಗೆ ಬಂಧನವಾಯಿತ್ತು. ಬ್ರಾಹ್ಮಣನೇ ದೈವವೆಂದು ನಂಬಿದ ಕಾರಣ ಕರ್ಣನ ಕವಚ ಹೋಯಿತ್ತು. ಬ್ರಾಹ್ಮಣನೇ ದೈವವೆಂದು ನಂಬಿದ ಕಾರಣ ದಕ್ಷಂಗೆ ಕುರಿದಲೆಯಾಯಿತ್ತು. ಬ್ರಾಹ್ಮಣನೇ ದೈವವೆಂದು ನಂಬಿದ ಕಾರಣ ಪರುಶರಾಮ ಸಮುದ್ರಕ್ಕೆ ಗುರಿಯಾದ. ಬ್ರಾಹ್ಮಣನೆ ದೈವವೆಂದು ನಂಬಿದ ಕಾರಣ ನಾಗಾರ್ಜುನನ ತಲೆ ಹೋಯಿತ್ತು. ದೇವಭಕ್ತರೆಂದು ನಂಬಿದ ಕಾರಣ ನಮ್ಮ ಕೂಡಲಸಂಗನ ಶರಣರು ಕೈಲಾಸವಾಸಿಗಳಾದರು.

೪೪. ಆದಿಪುರಾಣ ಅಸುರರಿಗೆ ಮಾರಿ. ವೇದಪುರಾಣ ಹೋತಿಂಗೆ ಮಾರಿ. ರಾಮಪುರಾಣ ರಕ್ಕಸರಿಗೆ ಮಾರಿ. ಭಾರತಪುರಾಣ ಗೋತ್ರಕ್ಕೆ ಮಾರಿ. ಇವೆಲ್ಲ ಪುರಾಣವು ಕರ್ಮಕ್ಕೆ ಮೊದಲು. ನಿಮ್ಮ ಪುರಾಣಕ್ಕೆ ಪ್ರತಿಯಿಲ್ಲ ಕೂಡಲಸಂಗಮದೇವಾ.

೪೫. ನಿಮ್ಮ ವಚನವೆನ್ನ ಪುಣ್ಯವೆಂಬುದು ಹುಸಿಯಾಯಿತ್ತು ನೋಡಾ. ಶಾಸ್ತ್ರದ ವಚನ ಹೋತಿಂಗೆ ಮಾರಿ. ಎಂತು ನಂಬುವೆನಯ್ಯ? ನಾನು ಕೊಲ್ಲೆನು, ನೇಣು ಕೊಂದಿತ್ತೆಂಬ ಸೂನೆಗಾರರನೇನೆಂಬೆನಯ್ಯ ಕೂಡಲಸಂಗಮದೇವಾ.

೪೬. ಮಾತಿನ ಮಾತಿಂಗೆ ನಿನ್ನ ಕೊಂದಾರೆಂದು, ಎಲೆ ಹೋತೇ ಅಳು ಕಂಡೆಯಾ. ವೇದವನೋದಿದವರ ಮುಂದೆ, ಅಳು ಕಂಡೆಯಾ, ಹೋತೆ. ಶಾಸ್ತ್ರವ ಕೇಳಿದವರ ಮುಂದೆ, ಅಳುಕಂಡೆಯಾ. ನೀನತ್ತುದಕ್ಕೆ ತಕ್ಕುದ ಮಾಡುವ ಕೂಡಲಸಂಗಮದೇವ.

೪೭. ದಕ್ಷ ಯಾಗವ ನಡಿಸಲೆಂದು ಅಜಮುಖ್ಯರಾದ ಸುರರೆಲ್ಲ ನೆರೆದುಬಂದ ಬಾಯ ನೋಡಾ. ಬಾಯ ತಪ್ಪಿಸಿ ಉಣಬಂದ ದೈವದ ಬಂದ ಬಾಯ ನೋಡಾ. ಉಣದೆ, ಉಡದೆ ಹೊಗೆಯ ಕೈಯ್ಯಲ್ಲಿ ಸತ್ತ ಅಣ್ಣಗಳ ಕೇಡ ನೋಡಾ ಕೂಡಲಸಂಗಮದೇವಾ.

೪೮. ಏನಯ್ಯ ವಿಪ್ರರು ನುಡಿದಂತೆ ನಡೆಯರು. ಇದೆಂತಯ್ಯ? ತಮಗೊಂದು ಬಟ್ಟೆ ಶಾಸ್ತ್ರಕೊಂದು ಬಟ್ಟೆ. ಕೂಡಲಸಂಗಮದೇವಯ್ಯ ಹೊಲೆಯರ ಬಸುರಲ್ಲಿ ವಿಪ್ರರು ಹುಟ್ಟಿ ಗೋಮಾಂಸವ ತಿಂಬುರೆಂಬುದಕ್ಕೆ ಇದೇ ದೃಷ್ಟ.

೪೯. ಹೊಲೆಯೊಳಗೆ ಹುಟ್ಟಿ, ಕುಲವನರಸುವೆ. ಎಲವೊ ಮಾತಂಗಿಯ ಮಗ ನೀನು. ಸತ್ತುದನೆಳೆವನೆತ್ತಣಹೊಲೆಯ? ಹೋತ ತಂದು ನೀವು ಕೊಲುವಿರಿ. ಶಾಸ್ತ್ರವೆಂಬುದು ಹೋತಿಂಗೆ ಮಾರಿ. ವೇದವೆಂಬುದು ನಿಮಗೆ ತಿಳಿಯದು. ನಮ್ಮ ಕೂಡಲಸಂಗಮದೇವನ ಶರಣರು ಕರ್ಮವಿರಹಿತರು, ಶರಣ ಸನ್ನಿಹಿತರು, ಅನುಪಮ ಚರಿತ್ರರು, ಅವರಿಗೆ ತೋರಲು ಪ್ರತಿಇಲ್ಲವೋ.

೫೦. ಇಟ್ಟಿಯ ಹಣ್ಣ ನರಿತಿಂದು ಸೃಷ್ಟಿ ತಿರುಗಿತೆಂಬಂತೆ, ಮುಷ್ಟಿಯ ನಿಟ್ಟ ದ್ವಿಜರ ಮಾತದೇಕೆ? ಹಗಲು ಕಾಣದ ಗೂಗೆ ಇರುಳಾಯಿತ್ತೆಂದರೆ, ಜಗಕ್ಕೆ ಇರುಳಪ್ಪುದೆ ಮರುಳೆ? ಹೋಮದ ನೆವದಿಂದ ಹೋತನ ಕೊಂದು ತಿಂಬ ಅನಾಮಿಕರೊಡನಾಡಿ ಗೆಲುವುದೇನು ಕೂಡಲಸಂಗಮದೇವ?

೫೧. ಮಿಂಬುಲಿಗನ ಹಕ್ಕಿಯಂತೆ ನೀರ ತಡಿಯಲಿರ್ದು, ಮೂಗ ಹಿಡಿದು, ಧ್ಯಾನವ ಮಾಡುವರಯ್ಯ. ಬಿಟ್ಟ ಮಂಡೆವೆರಸಿ, ಬಾಯಮಿಡುಕಿಸುತ್ತ ಕಣ್ಣ ಮುಚ್ಚಿ ಜಿರಳನೆಣಿಸುವರಯ್ಯ. ನಿಮ್ಮ ಕೈಯಲ್ಲಿ ಕಟ್ಟಿದ ದರ್ಭೆಯ ಹುಲ್ಲು, ಕೂಡಲಸಂಗನನರಿಯದೆ, ಮೊರೆ ಇಡುವಂತೆ.

೫೨. ಮಾಣದೆ ಅರಳಿಯ ತಿಷ್ಟನೆ ತಿರುಗುವ ಗಾಣದೆತ್ತಿನಂತೆ,
ಪೂರ್ವ ಲಿಖಿತ ಮುಂದುಗಾಣಲೀಯ್ಯದು. ನೀವೆಲ್ಲ ವಾಯಕ್ಕೆ ಕೆಡಬೇಡ.
ಮಾಣದೆ ಪೂಜಿಸು ಲಿಂಗವ. ಹೆರರ ಗೋಣ ಕೊಯ್ದೆನೆಂಬ ಮಂತ್ರವ
ನೋದುವ ನೇಣುಗಾರರ ಮೆಚ್ಚ ಕೂಡಲಸಂಗಮದೇವ.

೫೩. ನೀರ ಕಂಡಲ್ಲಿ ಮುಳುಗುವರಯ್ಯಾ. ಮರನ ಕಂಡಲ್ಲಿ ಸುತ್ತು
ವರಯ್ಯಾ. ಬತ್ತುವ ಜಲವನೊಣಗುವ ಮರನ ಮಚ್ಚಿದವರು ನಿಮ್ಮ
ನೆತ್ತ ಬಲ್ಲರು ಕೂಡಲಸಂಗಮದೇವ?

೫೪. ಕಣ್ಣ ಮುಚ್ಚಿ ಕನ್ನಡಿಯ ತೋರುವಂತೆ, ಇರುಳು ಹಗ
ಲಿನ ನಿದ್ರೆ ಸಾಲದೇ? ಜೆರಳನೆಣಿಸಿ, ಪರಮಾರ್ಥವ ಹಡೆವದು ಚೋದ್ಯ
ವಲ್ಲವೆ ಹೇಳಾ? ಮೂಗ ಮುಚ್ಚಿ ಮುಕ್ತಿಯ ಬಯಸುವ ನಾಚಗೆ ಇಲ್ಲ
ದವರ ನಾನೇನೆಂಬೆ ಕೂಡಲಸಂಗಮದೇವಾ?

೫೫. ಬ್ರಹ್ಮ ಸಭೆ ನೆರೆದಲ್ಲಿ ಬ್ರಹ್ಮ ವಿತ್ತುಗಳು ಬ್ರಹ್ಮತ್ವವಡೆದು
ತಮ್ಮ ವಚನಬ್ರಹ್ಮರೆನಿಸಿಕೊಂಡು ನೆಮ್ಮುವರು ವಿಷ್ಣುವನು. ತಮ್ಮ ದೈವವ
ಬಿಡುವುದಾವುದುಚಿತ? ವಿಷ್ಣು ಶಿವಭಕ್ತನಾಗಿ ನಿಷ್ಠೆಯಿಂದ ಕಣ್ಣ
ನಿತ್ತು ಹಡೆದನು ಶಿವಭಕ್ತಿಯಂ. ಕಷ್ಟ ಜಾತಿ ಜೀವಿಗಳಿಗೆ ಮುಟ್ಟ
ಎಂತು ಬಂದಿತ್ತೋ? ಮುಟ್ಟರೊಂದುವನು. ಮೂವಿಧಿ ಬಟ್ಟರೋ ಹುಸಿ
ವನೇ ಹೊಲೆಯನೆಂಬ ವಚನ ಉಂಟು. ಲೋಕದಲ್ಲಿ ಹುಸಿದಜನ
ಶಿರ ಹೋಯಿತ್ತಾದಿಯಲ್ಲಿ. ಎಸೆವಕಿರು ಪಶುವನು ಸುರಲೀಯದೆ ವಿಧಾವಿಸಿ
ತಿಂಬ ಜನ್ಮ ಆದಾವ ಫಲವು? ದಕ್ಷ ಯಾಗವಮಾಡಿ ನಿಕ್ಷೇತ್ರನೆನೆದ. ಅಕ
ಟಕಟಾ ಕೇಳಿ ಏಕೆ ಮಾಣಿರೋ? ಮಮ ಕರ್ತ ಕೂಡಲಸಂಗನ ಶರಣರು
ಅಕ್ಷಯರಧಿಕರು ವಿಪ್ರರು ಕೀಳು ಜಗವೆಲ್ಲರಿಯಲು.

೫೬. ಕುಲದಲ್ಲಿ ಹಾರುವನು ಬ್ರಹ್ಮೇತಿಗೆ ಸಾರುವನು. ಆರು ಮಾಡಿ
ದ ಪಾಪಕ್ಕೆ ತಾನೆ ಕೈಯ್ಯಾನುವನು. ಸರಿಯೇ ದೇವಾ ಭಕ್ತಂಗಿವನು?
ಬಡಿಗಿ ಮಾಚಲದೇವಿಯ ಕುಲಜೆಯ ಮಾಡಿಹೆವೆಂದು ಹೊನ್ನಕಪಿ
ಲೆಯ ರಾವಣ ಶಾಖದ ಉಚ್ಛಿಷ್ಟದ ಹಾಲಿನಿಂದ ಕೊಳನಟ್ಟುಂಬವರನೇ
ನೆಂಬೆ ಕೂಡಲಸಂಗಮದೇವ?

೫೭. ನರಜನ್ಮದಲ್ಲಿ ಹುಟ್ಟಿ, ಲಿಂಗಮುಖವನರಿಯದೆ ಉದಮದ
ಸೊಕ್ಕಿ ತಲೆಗೇರಿತ್ತಯ್ಯಾ. ‘‘ಜೀವಂ ಜೀವೇನ ಭಕ್ಷಯೇತ್,, ಕರ್ಮಕರ್ಮ

ದಲಿಪ್ಪೆಯಯ್ಯ. ಅಂದೊಮ್ಮೆ ದಕ್ಷನು ಹೋತನ ಕೊಂದಲ್ಲಿ ಘೋಳಿಡಿ ಘೋಳಿಡೆ, ತಂದಿಕ್ಕಿತ್ತೆ ನಿಮ್ಮ ವೇದಶಾಸ್ತ್ರಂಗಳು? ಮೂರುತಿಗೊಂಡಲ್ಲಿ ಚತುರ್ವೇದಿಗಳಿಗೊಮ್ಮೆ ಅಕ್ಕಿತ್ತೆ ಅಯ್ಯ? ನಮ್ಮ ಕೂಡಲಸಂಗನನರಿಯದ ಕಾರಣ ನಾಯಕನರಕದಲ್ಲಿಕ್ಕಿತಯ್ಯ.

೫೮. ಕಿಚ್ಚು ದೈವವೆಂದು ಹವಿಯನಿಕ್ಕುವ ಹಾರುವರ ಮನೆಯಲು ಕಿಚ್ಚೆದ್ದು ಸುಡುವಾಗ, ಬಚ್ಚಲನೀರ ಬೀದಿಯ ದೂಳವ ಹೊಯ್ದು ಬೊಬ್ಬಿಟ್ಟೆಲ್ಲರ ಕರೆವರಯ್ಯ. ಕೂಡಲಸಂಗಮದೇವ ವಂದನೆಯ ಮರೆದು ನಿಂದಿಸುತಿರ್ದರಯ್ಯಾ.

೫೯. ವೇದವನೋದಿದ ವಿಪ್ರನು ಹೊಸಲಲ್ಲಿ ಹೋದ ಕೇಡ ನೋಡಿರೇ. "ಭರ್ಗೋ ದೇವಸ್ಯ ಧೀಮಹಿ" ಎಂಬರು. ಒಬ್ಬರಿಗಾಗಿ ವಿಚಾರವಿಲ್ಲ ನೋಡಿರೇ, ಕೂಡಲಸಂಗಮದೇವಾ.

೬೦. ಎನಿಸನೋದಿದರೇನು, ಎನಿಸ ಕೇಳಿದರೇನು, ಚತುರ್ವೇದಪಾಠ ತೀವ್ರವಾದರೇನು, ಲಿಂಗಾರ್ಚನೆ ಹೀನವಾದರೆ ಶಿವ, ಶಿವಾ ಬ್ರಾಹ್ಮಣನೆಂಬೆನೆ? ಎನ್ನಲಾಗದು. "ಜನ್ಮನಾ ಜಾಯತೇ ಶೂದ್ರಃ। ಕ್ರಿಯಾಣಾಂ ದ್ವಿಜಮುಚ್ಯತೆ॥ ಶ್ರುತಂಚ ಶ್ರೋತ್ರಿಯಂಚೈವ ಬ್ರಹ್ಮಂಚರತಿ ಬ್ರಾಹ್ಮಣಃ" ಎಂದುದಾಗಿ "ಬ್ರಹ್ಮನಾಸ್ತಿ ಶ್ವಪಚರಮನೆ" ಎಂದುದಾಗಿ, ಇದು ಕಾರಣ ಕೂಡಲಸಂಗಮದೇವ ವೇದಭಾರಭರಾಕ್ರಾಂತಿಕೋ ಬ್ರಾಹ್ಮಣ ಗಾರ್ದಭನೆಂಬೆನು.

೬೧. ನಿಮ್ಮ ನರಿಯದ ಕಾರಣ ಕೈಯ್ಯಲ್ಲಿ ಹುಲ್ಲು, ನಿಮಗೆರಗದ ಕಾರಣ ಕೊರಳಲ್ಲಿ ನೇಣು. ಹಿಂಡಲೇಕೋ, ತೊಳೆಯಲೇಕೋ? ಮುಳು ಮುಳುಗಿ ಮೂಗ ಹಿಡಿಯಲೇಕೋ? ಕೂಡಲಸಂಗನ ಶರಣರಲ್ಲಿ ಡೋಹರ ಕಕ್ಕಯ್ಯನಾವತೊರೆಯಲ್ಲಿ ಮಿಂದ?

೬೨. ವ್ಯಾಸ ಬೋಯಿತಿಯ ಮಗ, ಮಾರ್ಕಂಡೇಯ ಮಾತಂಗಿಯ ಮಗ, ಮಂಡೋದರಿ ಕಪ್ಪೆಯ ಮಗಳು. ಕುಲವನರಸದಿರಿ, ಭೋ. ಕುಲದಿಂದ ಮುನ್ನೇನಾದಿರಿಂಭೋ. ಸಾಕ್ಷಾತ್ ಅಗಸ್ತ್ಯ ಕಬ್ಬಿಲ, ದೂರ್ವಾಸ ಮಚ್ಚಿಗ, ಕಶ್ಯಪ ಕಮ್ಮಾರ, ಕೌಂಡಿಲ್ಯನೆಂಬ ಋಷಿ ಮೂರು ಭುವನವರಿಯೆ ನಾಯಿದ ಕಾಣಿಭೋ. ನಮ್ಮ ಕೂಡಲಸಂಗಮದೇವ ವಚನವಿಂತೆಂದುದು, ಶ್ವಪಚೋಪಿಯಾದರೇನು? ಶಿವಭಕ್ತನೇ ಕುಲಜ ಭೋ.

೬೩. ಹೊಲೆಗಂಡಲ್ಲದೆ ಪಿಂಡದ ನೆಲೆಗಾಶ್ರಯವಿಲ್ಲ. ಜಲಬಿಂದುವಿನ ವ್ಯವಹಾರ ಒಂದೇ. ಆಶೆಯಾಮಿಷ ಹರುಷ ವಿಷಯಾದಿಗಳೆಲ್ಲ ಒಂದೇ. ಏನನೋದಿ ಏನ ಕೇಳಿ ಏನು ಫಲ? ಕುಲಜನೆಂಬುದಕ್ಕೆ ಆವುದು ದೃಷ್ಟ? "ಸಪ್ತಧಾತು ಸಮಂ ಪಿಂಡಂ। ಸಮಯೋನಿ ಸಮುದ್ಭವಂ॥ ಆತ್ಮ ಜೀವಸಮುತ್ಪನ್ನಂ ವರ್ಣಾನಾಂ ಕಿಂ ಪ್ರಯೋಜನಂ॥" ಕಾಸಿ ಕಮ್ಮಾರನಾದ, ಬೀಸಿ ಮಡಿವಳನಾದ, ಹಾಸನಿಕ್ಕಿ ಸಾಲಿಗನಾದ, ವೇದವನೋದಿ ಹಾರುವನಾದ, ಕರ್ಣದಲಿ ಜನಿಸಿದವರುಂಟೇ ಜಗದೊಳಗೆ? ಇದು ಕಾರಣ ಕೂಡಲಸಂಗಮದೇವ ಲಿಂಗಸ್ಥಲವನರಿದವನೇ ಕುಲಜನು.

೬೪. ಕೊಲ್ಲುವನೇ ಮಾದಿಗ, ಹೊಲಸು ತಿಂಬುವನೇ ಹೊಲೆಯ. ಕುಲವೇನೋ, ಆವಂದಿರ ಕುಲವೇನೋ? ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ನಮ್ಮ ಕೂಡಲಸಂಗನ ಶರಣರೇ ಕುಲಜರು.

೬೫. ಹಾರುವನ ಭಕ್ತಿ ಓಡಿನೊಳಗೆ ಅಗೆಯ ಹೊಯ್ದಂತೆ. ಕೆಳಯಿಂಕೆ ಬೇರೂರದು. ಮೇಲೆ ಫಲವಾಗದು. ಪ್ರಾಣಲಿಂಗದ ಪ್ರಸಾದವ ಮುಂದಿಟ್ಟುಕೊಂಡು ಪ್ರಾಣಾಯ ಸ್ವಾಹಾ, ಅಪಾನಾಯ ಸ್ವಾಹಾ, ವ್ಯಾನಾಯ ಸ್ವಾಹಾ, ಉದಾನಾಯ ಸ್ವಾಹಾ, ಸಮಾನಾಯ ಸ್ವಾಹಾ ಎಂಬ ಕರ್ಮಿಗಳನೇನೆಂಬೆ ಕೂಡಲಸಂಗಮದೇವಾ?

೬೬. ನಾನು ಭಕ್ತ ನಾನು ಪ್ರಸಾದಿ ಎಂದು ವಿಪ್ರ ಕರ್ಮವ ಮಾಡುವ ಕರ್ಮಿ. ಲಿಂಗದೇವನ ಮುಟ್ಟಿ ಮಜ್ಜನಕ್ಕೆರೆವ ಕಯ್ಯಲು ವಿಪ್ರನ ಕಾಲ ತೊಳೆದರೆ ಲಿಂಗೋದಕ ಹೃದಯದಲ್ಲಿ. ವಿಪ್ರನ ಕಾಲ ತೊಳೆದ ನೀರು ಮಂಡೆಯ ಮೇಲೆ. ಶ್ರೋತ್ರೋತ್ಕಟ ದುರಾಚಾರಿ ಯಜ್ಞಕೂಪ ಸಘಾತ ಕರಿಪೂದ್ರಿ ದೈಕವಿಧಿಃ ಶಾಂತಿ ವಿಪ್ರರೂಪೇಣ ರಾಕ್ಷಸಾ, ಇದು ಕಾರಣ ಕೂಡಲಸಂಗಮದೇವ ಇಂತಪ್ಪ ದುರಾಚಾರಿಗಳ ಮುಖವ ನೋಡಲಾಗದು.

೬೭. ಹೊನ್ನ ನೇಗಿಲಲುತ್ತು ಎಕ್ಕೆಯ ಬೀಜವ ಬಿತ್ತುವರೇ? ಕರ್ಪೂರದ ಮರನ ಕಡಿದು ಕಳ್ಳಿಗೆ ಬೇಲಿಯ ನಿಕ್ಕುವರೇ? ಶ್ರೀಗಂಧದ ಮರನ ಕಡಿದು ಬೇವಿಂಗೆ ಅಡೆಯನಿಕ್ಕುವರೇ? ನಮ್ಮ ಕೂಡಲಸಂಗನ ಶರಣರಿಗಲ್ಲದೆ ಬೇರೆ ಇಚ್ಛಾಭೋಜನವನಿಕ್ಕಿದರೆ ಕಿಚ್ಚಿನೊಳಗೆ ಉಚ್ಚೆಯ ಹೊಯಿದು ಹವಿಸು ಬೆಳದಂತಾಯಿತ್ತು.

೭೮. ಜಾತಿನಿಡಿದು ಸೂತಕವನರಸುವೆ. ಜ್ಯೋತಿವಿಡಿದು ಕತ್ತಲೆಯನರಸುವೆ. ಇದೇಕೋ ಮರುಳು ಮಾನವಾ? ಜಾತಿಯಲಿ ಅಧಿಕನೆಂಬೆ. ವಿಪ್ರ ಶತಕೋಟಿಗಳಿದ್ದಲ್ಲಿ ಫಲವೇನು? ಭಕ್ತಶಿಖಾಮಣಿ ಎಂಬುದು ವಚನ. ನಮ್ಮ ಕೂಡಲಸಂಗನ ಶರಣರ ಪಾವ ಪರುಷವ ನಂಬು ಕೆಡಬೇಡ ಮಾನವಾ.

೭೯. ಹೊಲೆಯ ಮಾದಿಗ ಭಕ್ತನಾದೊಡೆ ಆತನ ಮನೆಯ ಸೊಣಗಂಗೆ ಪಂಚ ಮಹಾವಾದ್ಯದಲ್ಲಿ ಸನ್ಮಾನವ ಮಾಡನೇ, ನೆಲನನುಪ್ಪಡಿಸಿ, ಖುಷೋ ಚಾಂಗು ಭಲಾ ಎಂದು? ಕುಲಕಧಿಕ ಹಾರುವಂಗೆ ಸಿದ್ಧಿಗೆಯ್ಯ. ಸಲೆ ನಿಮ್ಮ ಶರಣರ ಮಹಿಮೆ ಘನಕ್ಕೆ ಘನ. ಎಲೇ ಕೂಡಲಸಂಗಮದೇವಾ, ನಿಮ್ಮ ನಂಬದವ ಹೊಲೆಯ.

೮೦ ಕುರಿವಿಂಡು ಕಬ್ಬಿನ ಉಲಿವ ತೋಟವ ಪೊಕ್ಕು ತೆರನನರಿಯದೆ, ತನಿರಸವ ಪೊರಗಣ ಎಲೆಯನೆ ಮೆಲೆವವು. ನಿಮ್ಮ ನರಿವ ಮದಕರಿಯಲ್ಲವೆ, ಕುರಿ ಬಲ್ಲುದೇ, ಕೂಡಲಸಂಗಮದೇವ?

೮೧. ಪ್ರಣಮವನುಚ್ಚರಿಸುವ ಅಪ್ರಮಾಣಿಕರೆಲ್ಲರು ಪ್ರಣವಮಂತ್ರಾರ್ಥವನೋದಿ, ಮಂತ್ರಾರ್ಥವನರಿಯರು. ಪ್ರಣವ ಓಂ ನಮಃ ಶಿವಾಯ ಪ್ರಣವ ಓಂ ನಮಃ ಶಿವಾಯ, ಪ್ರಣವ ಓಂ ನಮಃ ಶಿವಾಯ ಪ್ರಣವ ಭರ್ಗೋ ದೇವ ಎಂದುವು ಶೃತಿಗಳೆಲ್ಲ. ಕೂಡಲಸಂಗಯ್ಯನ ನರಿಯದ ದ್ವಿಜರೆಲ್ಲ ಭ್ರಮಿತರು.

೮೨. ವೇದವನೋದಿದರೇನು? ಶಾಸ್ತ್ರವ ಕೇಳಿದರೇನಯ್ಯ? ಜಪವ ಮಾಡಿದರೇನು? ತಪವ ಮಾಡಿದರೇನಯ್ಯ? ಏನ ಮಾಡಿದರೇನು, ನಮ್ಮ ಕೂಡಲಸಂಗಯ್ಯನ ಮನಮುಟ್ಟದನ್ನಕ್ಕ?

೮೩. ನೀವು ಹಿರಿಯರೆಂಬಿರಿ, ಕರ್ಮಿಗಳು ನೀವು ಕೇಳಿರಿ. ನಿಮ್ಮ ವೇದಶಾಸ್ತ್ರಂಗಳು ಆರ ಹೊಗಳುತಿರ್ದವು? "ಓಂ ದ್ಯಾವಾ ಭೂಮಿಜನಯಂ ದೇವ ಏಕೋ ದೇವ" ಎಂದು ಶೃತಿಸ್ಮೃತಿಗಳು ಸಾರುತ್ತಿರ್ದವು "ವರ್ಣಾನಾಂ ಬ್ರಾಹ್ಮಣೋ ಗುರುಃ" ಎಂಬುದು ಹುಸಿ. ವರ್ಣಾನಾಂ ಗುರು ನಮ್ಮ ಕೂಡಲಸಂಗನ ಶರಣರು.

೮೪. ನಿಜಭಾವ ಲಕ್ಷ್ಮಿ ಸರಸ್ವತಿಯೊಲಿದರೆ ಕುಲವನರಸಲದೇಕೆ? ಆ ದೇವನೊಲಿದ ಭಕ್ತಂಗೆ ಇನ್ನಾವ ಮಂತ್ರವದೇಕೆಯೋ? ಕಾಮಧೇನು

ಮನೆಯೊಳಿರಲು, ಜೇರೆ ಹಯನವನರಸಲದೇಕೆ? ಮೋಹವುಳ್ಳ ಠಾವಿನಲ್ಲಿ ಲಜ್ಜೆಯನು ಅರಸಲೇಕೆಯೋ? ಮಹಾದಾನಿ ಕೂಡಲಸಂಗಯ್ಯನೊಲಿದು ಮಾದಾರ ಚನ್ನಯ್ಯನ ಮನೆಯಲುಂಡ. ವೇದವನೋದಿದವರು ಲಿಂಗ ವನೊಲಿಸಿ ತೋರಿರೋ.

೭೫. ಆವ್ಯಂಗಿಗಲ್ಲದೆ ವೇದ್ಯವಾಗದು. ಮಾಣಿ ಭೋ ಮಾಣಿ ಭೋ. ಶಿವಭಕ್ತನೇ ಕುಲಜ. ಕೈವರ್ತತೇ ಗರ್ಭ ಸಂಭಾವನೆ ಮಾರ್ಕಂಡೇಯ ಮಹಾಮುನಿ ತಪಸ್ಸು ಜಾಯತೇ ವಿಪ್ರ ಕುಲೆ, ತಸ್ಮಾತ್ ಜಾತಿಬೇಧಂ ನ ಕುರ್ಯಾತ್. ಜಾತನಲ್ಲ, ಅಜಾತನಲ್ಲ. ಕೂಡಲಸಂಗನ ಶರಣರು ನಿಸ್ಸೀಮರಯ್ಯ.

೭೬. ಎಮ್ಮವರಧಿಕರು, ಎಲ್ಲರಿಂದಲು ಅಧಿಕರು. ಪಾಕವ ಮಾಡು ವ ಭಾಂಡ ಸೊಣಗನ ಡೋವಿಗೆಯಯ್ಯ. ಕೆರಹಿನಲ್ಲಿ ಮುಚ್ಚುವದು ಆವಾ ಗಮವಯ್ಯ? ಕೂಡಲಸಂಗಮದೇವ, ನಿಮ್ಮ ವಚನವಿಂತೆಂದುದು, ಭವಿ ನೋಡಿದ ಓಗರ ಲಿಂಗಾರ್ಪಿತವಾಗದೆಂದು.

೭೭. ನಿಮ್ಮ ಶರಣದ ಚರಣರ ಚಮ್ಮಾವುಗೆಗೆ ಪ್ರತಿಸಮಬಾರದು. ಸರಿಯಲ್ಲ ನೋಡಾ, ಕೂಡಲಸಂಗಮದೇವಾ, ನಿಮ್ಮ ಶರಣರ ಚಮ್ಮಾ ವುಗೆಗೆ.

೭೮. ದೇವ ನಿಮ್ಮ ಪೂಜಿಸಿ, ಚನ್ನನ ಕುಲ ಚನ್ನಾಯಿತ್ತು. ದೇವ ನಿಮ್ಮ ಪೂಜಿಸಿ ದಾಸನ ಕುಲ ದೇಸೆವಡೆಯಿತ್ತು. ದೇವ ನಿಮ್ಮಡಿಗೆರಗಿ ಮಡಿವಾಳ ಮಾಚಯ್ಯ ನಿಮ್ಮಡಿಯಾದ. ನೀನೊಲಿದ ಕುಲಕ್ಕೆ ನೀನೊ ಲ್ಲದ ಹೊಲೆಗೆ ಮೇರೆಯುಂಟೇ ದೇವಾ? “ ಶ್ವಪಚೋಪಿ ಮುನಿಶ್ರೇಷ್ಠಃ। ಯಸ್ತು ಲಿಂಗಾರ್ಚನೆ ರತೇ॥ ಲಿಂಗಾರ್ಚನ ವಿಹೀನೋಪಿ। ಬ್ರಾಹ್ಮಣಃ ಶ್ವಪಚಾಧಮಃ” ಎಂದುದಾಗಿ ಜಾತಿ ವಿಜಾತಿಯಾದರೇನು, ಅಜಾತಂಗೆ ಶರಣೆಂದೆನ್ನದವನು, ಆತನೇ ಹೊಲೆಯ ಕೂಡಲಸಂಗಮದೇವಾ.

೭೯. ಚತುರ್ವೇದಿಯಾದರೇನು, ಲಿಂಗವಿಲ್ಲದವನೇ ಹೊಲೆಯ. ಶ್ವಪಚನಾದರೇನು, ಲಿಂಗವಿದ್ದವನೇ ವಾರಣಾಸಿ. ಆತನ ನುಡಿಗಡಣ ಲೇಸು. ಆತ ಜಗಕ್ಕೆ ಪಾವನ. ಆತನ ಪ್ರಸಾದವೆನಗಮೃತ ಸೇವನೆ. “ನಮೇ ಪ್ರಿಯಶ್ಚತುರ್ವೇದೀ। ಮದ್ಭಕ್ತಶ್ವಪಚೋಪಿವಾನ್ ತಸ್ಮಾದ್ದೇವಂ ತಥೋ ಗ್ರಾಹ್ಯಂ। ಸ ಚ ಪೂಜ್ಯೋಯಥಾ ಸ್ವಯಂ” ಕೂಡಲಸಂಗಮ

ದೇವನನರಿತು ಪೂಜಿಸಿದಾತ ಷಡುದರ್ಶನಕ್ಕಧಿಕ, ಜಗಕ್ಕೆ ಪಾವನ ನೋಡಾ.

೮೦. ಭಕ್ತಿಹೀನನ ದಾಸೋಹವ ಸದ್ಭಕ್ತರು ಸವಿಯರು. ಬೇವಿನ ಹಣ್ಣು ಕಾಗೆಗೆ ಇನಿದಲ್ಲದೆ, ಕೋಗಿಲೆ ಮೆಲಬಾರದು. ಲಿಂಗ ಸಂಬಂಧವಿಲ್ಲದವರ ನುಡಿ, ಕೂಡಲಸಂಗನ ಶರಣರಿಗೆ ಸಮನಿಸದು.

೮೧. ಬಂದು ಬಲ್ಲಹ ಬಿಡಲು ಹೊಲೆಗೇರಿ ಎಂಬ ಹೆಸರೊಳವೇ ಅಯ್ಯ? ಲಿಂಗವಿದ್ದವರ ಮನೆ ಕೈಲಾಸವೆಂದು ನಂಬಬೇಕು. ಇದಕ್ಕೆ ಪ್ರಮಾಣ "ಚಾಂಡಾಲ ವಾಟಿಕಾಯಾಂ ವಾ। ಶಿವಭಕ್ತಸ್ಥಿತೋಯದಿ। ತತ್ರ್ಕ್ಷೇತ್ರೇಣಿ ಶಿವಲೋಕಸ್ಯ। ತದ್ಗೃಹಂ ಶಿವಮಂದಿರಂ" ಲೋಕದ ಡಂಭಕರ ಮಾತ ಬೇಡ ಕೂಡಲಸಂಗಮನಿದ್ದುದೇ ಕೈಲಾಸ.

೮೨. ಲಿಂಗವಿಲ್ಲದೆ ನಡೆದರೆ, ಲಿಂಗವಿಲ್ಲದೆ ನುಡಿದರೆ, ಲಿಂಗ ವಿಲ್ಲದೆ ಉಗುಳ ನುಂಗಿದರೆ ಅಂದಂದಿಂಗೆ ಕಿಲ್ಬಿಷವಯ್ಯ. ಏನೆಂಬೆನೇ ನೆಂಬೆನಯ್ಯ? ಲಿಂಗವಿಲ್ಲದೆ ನಡೆವವರ ಅಂಗಲೌಕಿಕ ಮುಟ್ಟಲಾಗದು. ಲಿಂಗವಿಲ್ಲದೆ ನುಡಿವ ಶಬ್ದಸೂತಕವ ಕೇಳಲಾಗದು. ಲಿಂಗವಿಲ್ಲದೆ ಗಮಿಸಿಪಡೆ ಆ ನಡೆನುಡಿಗೊಮ್ಮೆ ವ್ರತಗೇಡಿ ಕೂಡಲಸಂಗಮದೇವ.

೮೩. ಇಪ್ಪತ್ತುನಾಲ್ಕು ತಿಥಿಯಿಂದ ವೆಗ್ಗಳ ಗ್ರಹಣ. ಸಂಕ್ರಾಂತಿ ಯಿಂದ ವೆಗ್ಗಳ ಏಕಾದಶಿ. ವ್ಯತೀಪಾತದಿಂದ ವೆಗ್ಗಳ ಸೂಕ್ತ್ರ. ಶಿವಪ ಥವನರಿದಂಗೆ ಹೋಮ ನೇಮ ಜಪ ತಪದಿಂದ ವೆಗ್ಗಳ ಕೂಡಲಸಂಗ ಮದೇವ ನಿಮ್ಮ ಮಾಣದೆ ನೆನೆವಂಗೆ.

೮೪. ಅಶ್ವಮೇಧಯಾಗವಂತಿರಲಿ, ಅಜಪೆಯುಪದೇಶವು ಸಮಾಧಿ ಯಂತಿರಲಿ. ಹೋಮ ನೇಮ ಗಾಯತ್ರಿಯ ಜಪವಂತಿರಲಿ, ಜನಮೋಹನ ಮಂತ್ರವಂತಿರಲಿ. ಕೂಡಲಸಂಗನ ಶರಣರ ನುಡಿಯ ಗಡಣೆ ಎಲ್ಲಕ್ಕಧಿಕ ನೋಡಾ.

೮೫. ವೇದಶಾಸ್ತ್ರದವರ ಹಿರಿಯರೆಂಬೆನೆ? ಮಾಯಾಭ್ರಾಂತಿ. ಕವಿತಜ್ಞರ ಹಿರಿಯರೆಂಬೆನೆ? ಇವರು ಹಿರಿಯರುಗಳೆ, ಯಾಗನಟ್ಟುವಿಗೆ ಪ್ರಾಣರು? ಇವರಿಂದಧಿಕ ಸಾಧಿಸುವರೇನು ಕಿರಿಯರೇ? ಇಂತು ವಿದ್ಯಾ ಗುಣ ಜ್ಞಾನ ಧರ್ಮ ವಿಚಾರ ಶೀಲಂಗಳ ನಮ್ಮ ಕೂಡಲಸಂಗಮದೇವ ನ ಶರಣರು ಸಾಧಿಸಿದ ಸಾಧನೆಯನೆ ಸಾಧಿಸುವುದು.

೮೬. ಹಾರುವರೆಲ್ಲರೂ ನೆರೆದು ಶೂದ್ರನ ಹಾರುವನ ಮಾಡು ವಲ್ಲಿ, ಸಂದಿಮುಖವಲ್ಲದೆ ಮಾಡಲಾಗದು. ವಿಭೂತಿ ಇಲ್ಲವೆ ಮತ್ತೇನೂ ಮಾಡಲಾಗದು. 'ಭರ್ಗೋದೇವ' ಮಂತ್ರವಲ್ಲದೆ, ಮತ್ತೇನನು ಮಾಡ ಲಾಗದು. ನಿಮ್ಮಿಂದ ಕುಲಜರಾಗಿ ಮತ್ತನ್ಯ ದೈವಕ್ಕೆರಗುವ ಜಗವ ನ್ಯಾಯಿಗಳನೇನೆಂಬೆ ಕೂಡಲಸಂಗಮದೇವಾ?

೮೭. ದೇವನೊಬ್ಬ, ನಾಮ ಹಲವು. ಪರಮ ಪತಿವ್ರತೆಗೆ ಗಂಡನೊ ಬ್ಬ. ಮತ್ತೊಂದಕ್ಕೆರಗಿದರೆ ಕಿವಿ ಮೂಗ ಕೊಯ್ವನು. ಹಲವು ದೈವದ ಎಂಜಲ ತಿಂಬವರೇನೆಂಬೆ ಕೂಡಲಸಂಗಮದೇವಾ?

೮೮. ಕರ್ತನ ಪೂಜಿಸಿ, ಕುತ್ಸಿತ ದೈವಕ್ಕೆರಗುವವರು, ಕತ್ತೆ ಕುದುರೆಗೆ ಹುಟ್ಟಿದ ಹೇಸರನಂತೆ. ಭಕ್ತರೆಂತೆಂಬೆ? ಭೃತ್ಯರೆಂತೆಂಬೆ? ಶರಣರೆಂತೆಂಬೆನವರ? ಎರಡುಳ್ಳ ಪ್ರಪಂಚಿಗಳ ಮೆಚ್ಚ ಕೂಡಲಸಂಗ ಮದೇವ.

೮೯. ಕಂಡಕಂಡವರನೆಲ್ಲ ಗಂಡರೆಂಬ ದಿಂಡೆಯನವಳ ಸಜ್ಜನೆ ಎನ್ನಬಹುದೆ? ಲಿಂಗಪ್ರಸಾದವನುಂಡು ಅನ್ಯ ದೈವಂಗಳ ಕೊಂಡಾಡು ವವರ ನಮ್ಮ ಕೂಡಲಸಂಗಮದೇವನು ಆ ಭಂಡರಿಗೆ ಮಾಡಿದ ಹುಳುಗೊಂಡವನು.

೯೦. ನಂಬಿದ ಹೆಂಡಿತಿಗೆ ಗಂಡನೊಬ್ಬ ಕಾಣಿರೋ. ನಂಬಬಲ್ಲ ಭಕ್ತಂಗೆ ದೇವನೊಬ್ಬ ಕಾಣಿರೋ. ಬೇಡ, ಬೇಡ, ಅನ್ಯದೈವದ ಸಂಗ ಹೊಲ್ಲ. ಬೇಡ, ಬೇಡ, ಅನ್ಯದೈವವೆಂಬುದು ಹಾದರ ಕಾಣಿರೋ. ಕೂಡಲ ಸಂಗಮದೇವ ಕಂಡರೆ, ಮೂಗ ಕೊಯ್ವ ಕಾಣಿರೋ.

೯೧. ಉಡುವ ಉಡಿಸುವ ಗಂಡನಿದ್ದಂತೆ ಜೋಡೆಮಿಂಡಂಗೆ ಕಣ್ಣಚಲ್ಲುವಳ ಕೇಡಿಂಗೆ ಬೆರಗಾದೆ ನಾನು. ಕೂಡಲಸಂಗಮದೇವ ಸಿಂಗಾರದ ಮೂಗ ಬಣ್ಣಿಸಿ ಹಲುದೋರಿಕೊಯ್ವ.

೯೨. ಅಷ್ಟಮೀ ನವಮೀ ಎಂಬ ಕಲ್ಪಿತವೇಕೋ ಶರಣಂಗೆ? ತಪ್ಪಿತ್ತು ಗಣಪದವಿ. ಲಿಂಗಕ್ಕೆ ದೂರ. ಒಬ್ಬರಿಗಾಳಾಗಿ ಒಬ್ಬರನೋಲೈ ಸುವ ನಿರ್ಬುದ್ಧಿ ಮನುಜರನೇನೆಂಬೆ ಕೂಡಲಸಂಗಮದೇವ?

೯೩. ಎಲವೋ, ಎಲವೋ, ಪಾಪಕರ್ಮವ ಮಾಡಿದವನೇ, ಎಲವೋ, ಎಲವೋ, ಬ್ರಹ್ಮಹತ್ಯವ ಮಾಡಿದವನೇ, ಒನ್ಮೆ ಶರಣೆನ್ನೆ

ಲವ್ರೋ, ಒಮ್ಮೆ ಶರಣೆಂದಡೆ, ಪಾಪಕರ್ಮ ಓಡುವವು. ಸರ್ವಪ್ರಾಯಶ್ಚಿತ್ತಕ್ಕೆ ಹೊನ್ನ ಪರ್ವತಂಗಳೇ ಇದ್ದವು. ಓರ್ವಂಗೆ ಶರಣೆನ್ನ ನಮ್ಮ ಕೂಡಲಸಂಗಮದೇವಂಗೆ.

೯೪. ಹಲವು ಕೊಂಬೆಗೆ ಹಾಯಲು ಬೇಡ. ಬರುಕಾಯಕೆ ನೀಡಲು ಬೇಡ. ಲೋಗರಿಗೆ ಕೊಟ್ಟು, ಭ್ರಮಿತನಾಗಿರಬೇಡ, ಆಚಾರವೆಂಬುದು ಹಾವಸೆಗಲ್ಲು. ಭಾವತಪ್ಪಿದ ಬಳಿಕ ಏಗೈದಡಾಗದು. ಅಂಜದಿರು, ಅಳುಕದಿರು. ಪರದೈವಕ್ಕೆರಗದಿರು. ಕೂಡಲಸಂಗನ ಕೈಯ್ಯಲು ಈಸುವುದೆನ್ನ ಭಾರ.

೯೫. ದ್ವಿಜರಿಗೆ ಕೊಟ್ಟು, ಹಲಬರು ಕೆಟ್ಟರು. ಉದ್ಧರಿಸುವನೊಬ್ಬ ಶಿವಶರಣ ಸಾಲದೇ? ನಾರಾಯಣ ವೃದ್ಧ ಬ್ರಾಹ್ಮಣನಾಗಿ ಬಂದು ಬಲಿಯ ಭೂಮಿಯ ದಾನವ ಬೇಡಿದ. ಕೊಟ್ಟಬಲಿ. ಬಂಧನಕ್ಕೆ ಸಿಕ್ಕಿದ. ಈಶ ಜಂಗಮವಾಗಿ ಬಂದು, ದಾಸನ ವಸ್ತ್ರವ ಬೇಡಿದ. ಕೊಟ್ಟ ದಾಸ. ತವನಿಧಿಯ ಪಡೆದ. ಕಪಟದಿಂದ ನಾರಾಯಣ ಹಾರುವನಾಗಿ ಬಂದು, ಕರ್ಣನ ಕವಚವ ಬೇಡಿದ. ಕೊಟ್ಟ ಕರ್ಣ. ಕಾಳಗದಲ್ಲಿ ಮಡಿದ. ಕಾಮಾರಿ ಜಂಗಮವಾಗಿ ಬಂದು, ಸಿರಿಯಾಳನ ಮಗನ ಬೇಡಿದ. ಕೊಟ್ಟ ಸಿರಿಯಾಳಸೆಟ್ಟಿ. ಕಂಚಿಯ ಪುರವ ಕೈಲಾಸಕೊಯ್ದ. ನಾರಾಯಣ ಹಾರುವನಾಗಿ ಬಂದು, ನಾಗಾರ್ಜುನನ ಶಿರವ ಬೇಡಿದ. ಕೊಟ್ಟ ನಾಗಾರ್ಜುನನ ಸಿರಹೋಯಿತ್ತು. ಶಿವನು ಜಂಗಮವಾಗಿ ಬಂದು, ಸಿಂಧುಬಲ್ಲಾಳನ ವಧುವ ಬೇಡಿದ. ಕೊಟ್ಟ ಸಿಂಧುಬಲ್ಲಾಳ. ಸ್ವಯಲಿಂಗವಾದ. ಇದು ಕಾರಣ ಇಲ್ಲಿಯೂ ಲೇಸು, ಅಲ್ಲಿಯೂ ಲೇಸು. ಕೊಡಿರೇ ನಮ್ಮ ಕೂಡಲಸಂಗನ ಶಣರಿಗೆ.

೯೬.. ಎಚ್ಚು ವಾಲಿಯ ಕೊಂದ. ಕಟ್ಟಿದ ಶರಧಿಯ. ಹತ್ತು ತಲೆಯ ರಾವಣನ ಒಂದೇ ಅಂಬಿನಲ್ಲಿ ಮಡುಹಿದ. ಛಲದಿ ಲಂಕಾದ್ವೀಪವ ನೆಲಪಣ್ಣವ ಮಾಡಿದ. ಕಲಿ ವಿಭೀಷಣಂಗೆ ಪಟ್ಟವ ಕಟ್ಟಿದ. ರಾಮನ ತೋರಾ. ಮಾಯದ ಸಂಸಾರವ ನಚ್ಚಿ ಕೆಟ್ಟು, ಬರುದೊರೆ ಪೋಗಬೇಡ- ಕರ್ತು ಕೂಡಲಸಂಗಂಗೆ ಶರಣೆನ್ನಿರಯ್ಯಾ.

೯೭. ವಿಪ್ರರ ಕರೆದು ನೃಪರುಗಳು ಇಪ್ಪರೇ? ತಮ್ಮ ಶಿಶುವಿನೊಡನೆಂದು ಬೆಸಗೊಂಡರೆ. ಇಪ್ಪರು, ಇಪ್ಪರು. ತಾವು ಬಿತ್ತಿದ ಫಲಂಗಳ ತಾವು ಉಣ್ಣದವರುಂಟೆ, ಎಂದು ಕಣ್ಣ ಕಾಣದೆ ಹೇಳಿದರು ಅಣ್ಣಗಳು ಕರ್ಮವ ಬಟ್ಟೆಯನು ಅಂತೆಂದ ಮಾತ ಶಿಶು ಕೇಳಿ, ಶಿಶು ಕೆಟ್ಟ್ರೋ

ಡಿ ಬಂದು, ಲಿಂಗದ ಹೊಟ್ಟೆಯ ಹೊಗಲು, ಅಟ್ಟಿಬಂದು, ಬಿಂಡಿಯುವ ಕಳೆದುಕೊಂಡು ಮಂಡೆಯನೊಡೆಯಲು, ಮಂಡೆಯೊಡೆದು, ಭೂಮಂಡಲವರಿಯೆ ನಾಲ್ಕು ಪುರವಾಗಲು, ಘಟಸರ್ಪನ ತುಡುಕಿ, ನಾಗನಾಥನಾಗಿ, ಇಪ್ಪತ್ತೇಳು ಬಸದಿಯನೊಡೆಯನೆ? ಆಗಳಂತೆ ಎನ್ನ ಮಾಡಿದ ಕರ್ಮವ ನಿಮ್ಮ ಕೈಯ್ಯಲು ಕೆಡಿಸುವರು. ಮುನ್ನೊಬ್ಬ ಕೆಡಿಸಿಹೆನೆಂದು ಬಂದು ಒಂದು ತುತ್ತನಿಟ್ಟ, ಮರಳಿ ಕೈ ಇಡಹೋದರೆ ತುತ್ತು ಹುಳುಗುಪ್ಪೆಯಾಗದೇ? ಶಿವಧರ್ಮವ ಕೆಡಿಸಿದವನು ಅಧರ್ಮಕ್ಕೀಳಿವನು. ಕೂಡಲಸಂಗಮದೇವ ಸಾಕ್ಷಿಯಾಗಿ ಮಕರ ಭೋಜನವಾಗನೇ ಪಿನಾಶಕ್ತಿರಾಯನು?

೯೮. ಅರಸು ವಿಚಾರ ಸಿರಿಯು ಶೃಂಗಾರ ಸ್ಥಿರವಲ್ಲ ಮಾನವ. ಕೆಟ್ಟಿತ್ತು, ಕಲ್ಯಾಣ ಹಾಳಾಯಿತ್ತು ನೋಡಾ! ಒಬ್ಬ ಜಂಗಮದ ಅಭಿಮಾನದಿಂದ ಚಾಳುಕ್ಯರಾಯನ ಆಳಿಕೆ ತೆಗೆಯಿತ್ತು, ಸಂದಿತ್ತು, ಕೂಡಲಸಂಗಮದೇವ, ನಿಮ್ಮ ಕವಳಿಕೆಗೆ.

೯೯. ಬೇವಿನ ಬೀಜವ ಬಿತ್ತಿ, ಬೆಲ್ಲದ ಕಟ್ಟೆಯ ಕಟ್ಟಿ, ಆಕಳ ಹಾಲನೆರದು ಜೇನತುಪ್ಪವ ಹೊಯುದರೆ, ಸಿಹಿಯಾಗಬಲ್ಲುದೆ ಕಹಿಯುಹುದಲ್ಲದೆ? ಶಿವಭಕ್ತರಲ್ಲದವರ ಕೂಡೆ ನುಡಿಯಲಾಗದು ಕೂಡಲಸಂಗಮದೇವ.

೧೦೦. ಕರ್ತನನರಿಯದವನು ವಿಪ್ರನಾದಡೇನು, ಚತುರ್ವೇದಿಯಾದಡೇನು? ಭುಕ್ತಿ ಕಾರಣ ಲೋಕದಿಚ್ಛೆಗೆ ನುಡಿದು ನಡೆವರಯ್ಯ. ಭವಿ ಮಾಡಿದ ಪಾಕವ ತಂದು ಲಿಂಗಕ್ಕರ್ಪಿಸುವ ಕಷ್ಟರ ಕಂಡು ನಾಚಿತ್ತೆನ್ನ ಮನವು. ಕೂಡಲಸಂಗನ ಶರಣರ ಒಕ್ಕುದ ಕೊಂಡು ಅನ್ಯವನಾಚರಿಸಿದಡೆ ತಪ್ಪದು ಸೂಕರ ಶುಚಿಭೂರ್ತತೆಯ ಪ್ರಾಣಿಯಂತೆ.

೧೦೧. ಉಂಬಲ್ಲಿ ಉಡುವಲ್ಲಿ ಕುಲವಳಿಯಿತೆಂಬರು. ಕೊಂಬಲ್ಲಿ ಕೊಡುವಲ್ಲಿ ಕುಲವನರಸುವರು. ಎಂತಯ್ಯ? ಅವರ ಭಕ್ತರೆಂತೆಂಬೆ? ಎಂತಯ್ಯ? ಅವರ ಯುಕ್ತರೆಂತೆಂಬೆ? ಕೂಲಸಂಗಮದೇವ ಕೇಳಯ್ಯ ಹೊಲತಿ ಶುದ್ಧ ನೀರ ಮಿಂದತ್ತಾಯಿತ್ತಯ್ಯ.

೧೦೨. ಭಕ್ತರನಲ್ಲದೆ ಒಲ್ಲೆನೆಂದೆಂಬಿರಿ. ಭಕ್ತರಿಗಲ್ಲದೆ ಕೈಯ್ಯಾನೆನೆಂಬಿರಿ. ಅದೇನ ಮಾಡುವಿರಿ? ಅದೆಲ್ಲಿಗೊಯ್ಸಿರಿ? ಪಾವನವಾದುದನು

ಲಿಂಗಕ್ಕೆ ಮಾಡುವವೇ ಆಚಾರ. ವಿಷಯಕ್ಕೆ ಇಕ್ಕಿ ಅಸುಗತಿಗಿಕ್ಕುವುದಿರಿ ಕೂಡಲಸಂಗನ ಶರಣರ ಒಡನೆಯ.

೧೦೩. ಮಾರಿ ಮಸಣಿ ಎಂಬವು ಬೇರಿಲ್ಲ ಕಾಣಿರೋ. ಮಾರಿ ಎಂಬುದೇನು? ಕಂಗಳು ತಪ್ಪಿ ನೋಡಿದರೆ, ಮಾರಿ. ನಾಲಿಗೆ ತಪ್ಪಿ ನುಡಿದರೆ ಮಾರಿ. ನಮ್ಮ ಕೂಡಲಸಂಗಯ್ಯನ ನೆನಹ ಮರೆದರೆ ಮಾರಿ.

೧೦೪. ಆಯುಧ ವಿಕ್ಕಿದವಂಗೆ ವೀರದ ಮಾತೇಕೆ? ಲಿಂಗವು ಅಂತರಿಸಿವವಂಗೆ ಒಳು ನುಡಿ ಏಕೆ? ಐದೆಳೆ ಅಣಚಿ ಇಲ್ಲದವಳಿಗೆ ಸೌಭಾಗ್ಯದ ಹೂವಿನ ಬೊಟ್ಟೇಕೆ? ಸತ್ಯನಲ್ಲದವಂಗೆ ನಿತ್ಯ ನೇಮವೇಕೆ? ಕರ್ತಾರನಿನ್ನ ಒಲವಿಲ್ಲನವಂಗೆ ಶಂಭುವಿನ ಬಂಧುಗಳೇಕೆ? ಕೂಡಲಸಂಗಮದೇವಯ್ಯ, ನೀವಿಲ್ಲದವಂಗೆ ಶಿವಾಚಾರದ ಮಾತೇಕೆ?

೧೦೫. ಇರುಳೆಂದೇನೋ ಕುರುಡಂಗೆ? ಹಗಲೆಂದೇನೋ ಕುರುಡಂಗೆ? ತಾಳಬಾರಿಸಿದರೇನಯ್ಯ? ಪಂಚಮಹಾಶಬುದವ ಬಾರಿಸಿದರೇನೋ ಕಿವುಡಂಗೆ, ಕೂಡಲಸಂಗಮದೇವಯ್ಯನ ಪಥವಿನ್ನಾವುದೆಂದರಿಯದವಂಗೆ?

೧೦೬. ಸಿಂಗದ ನಡುಮುರಿಯಲಾ ಸಿಂಗವೇನು ಬಾತೆ? ಸೊಂಡಿಲ ಮುರಿದರೆ ಗಜವೇನು ಬಾತೆ? ಸಂಗ್ರಾಮದಲ್ಲಿ ವೀರನುಳಿಯಲದೇನು ಬಾತೆ? ಶೃಂಗಾರದ ಮೂಗು ಹೋದರೆ ಶೃಂಗಾರವೇನು ಬಾತೆ? ನಿಜ ತುಂಬಿದ ಭಕ್ತಿ ತುಳುಕಾಡದವರ ಸಂಗವೇನು ಬಾತೆ ಕೂಡಲಸಂಗಮ ದೇವ?

೧೦೭. ಮುನ್ನಿನ ಆದ್ಯರ ಪಥಂಗಳು ಇನ್ನಾರಿಗೆಯೂ ಅಳವಡದು ನೋಡಾ. ಬಲ್ಲೆನಾಗಿ ಒಲ್ಲೆನವರು ಸಲ್ಲರು ಶಿವಪಥಕ್ಕೆ. ಒಳ್ಳಿಹ ಸ್ಥೈಲಾರನ ಸಿಂಗಾರದಂತೆ, ವೇಶಿಯ ಬಾಯ ಎಂಜಲನುಂಬ ದಾಸಿಯ ಸಂಸಾರದಂತೆ, ಕೂಡಲಸಂಗನ ಶರಣರನರಿಯದೆ ಉಳಿದ ಭಂಗಿತರ.

೧೦೮. ಗೀಜಗನ ಗೂಡು, ಕೋಡಗವಣಲ ಸಂಚ, ಬಾದುಮನ ಮಮತೆ, ಜಾವಲ ಬಿದ್ದಿನಂತೆ; ಜೂಜುಗಾರನ ಮಾತು, ಬೀದಿಗುಂಡನ ಸೊಬಗು, ಓಡಿನೊಳಗೆ ಅಗಿಯ ಹೊಯಿದಂತೆ ಕಾಣಿರೋ. ಶಿವನಾದಿಯಂತುವನರಿಯದವನ ಭಕ್ತಿ ಸುಖ ಶೋಧನೆಗೆ ಮದ್ದ ಕೊಂಡಂತೆ ಕೂಡಲಸಂಗಮದೇವಾ.

೧೧೯. ತೊತ್ತಿನ ಕೊರಳಲ್ಲಿ ಹಿತ್ತಾಳಿಯ ಸಿಂಗಾರವ ಮಾಡಿ ದಂತೆ ಕುಚಿತ್ತರ ಸಂಗ ಸುಸಂಗಿಗೆ ಸಂಗಡವಲ್ಲ. ಗುರುಗುಂಜಿ ಮಾಣಿ ಕಕ್ಕೆ ಸರಿಯಪ್ಪುದೆ ಕೂಡಲಸಂಗಮದೇವ?

೧೨೦. ಕೆಂಚ ಕರಿಕನ ನೆನೆದಡೆ, ಕರಿಕನಾಗಬಲ್ಲನೆ? ಕರಿಕ ಕೆಂಚನ ನೆನೆದಡೆ, ಕೆಂಚನಾಗಬಲ್ಲನೆ? ದರಿದ್ರ ಸಿರಿವಂತನ ನೆನೆದಡೆ, ಸಿರಿವಂತನಾಗಬಲ್ಲನೆ? ಸಿರಿವಂತ ದರಿದ್ರನ ನೆನೆದಡೆ, ದರಿದ್ರನಾಗಬಲ್ಲನೆ? ಮುನ್ನಿನ ಪುರಾತನರ ನೆನೆದು ಧನ್ಯನಾದಿಹೆನೆಂಬ ಮಾತಿನ ರಂಜಕರ ನೇನೆಂಬೆ ಕೂಡಲಸಂಗಮದೇವ?

೧೨೧. ಆನೆಯನೇರಿಕೊಂಡು ಹೋದಿರಿ ನೀವು. ಕುದುರೆಯನೇರಿ ಕೊಂಡು ಹೋದಿರಿ ನೀವು. ಕುಂಕುಮ ಕಸ್ತುರಿಯ ಪೂಸಿಕೊಂಡು ಹೋದಿರಿ ಅಣ್ಣಾ. ಸತ್ಯದ ನಿಲವನರಿಯದೆ ಹೋದಿರಲ್ಲಾ! ಸದ್ಗುಣ ವೆಂಬ ಫಲವ ಬಿತ್ತದೆ ಬೆಳೆಯದೆ ಹೋದಿರಲ್ಲಾ! ಅಹಂಕಾರವೆಂಬ ಮದ ಗಜವನೇರಿ, ವಿಧಿಗೆ ಗುರಿಯಾಗಿ ನೀವು ಕೆಟ್ಟು ಹೋದಿರಲ್ಲಾ! ನಮ್ಮ ಕೂಡಲಸಂಗಮದೇವರನರಿಯದೆ ನರಕಕ್ಕೆ ಭಾಜನನಾದಿರಲ್ಲಾ!

೧೨೨. ಇಂದ್ರಿಯ ನಿಗ್ರಹವ ಮಾಡಿದರೆ, ಹೊಂದುವವು ದೋಷಂ ಗಳು. ಮುಂದೆ ಬಂದು ಕಾಡುವವು ಪಂಚೇಂದ್ರಿಯಂಗಳು. ಸತಿಪತಿರತಿ ಸುಖವ ಬಿಟ್ಟರೆ, ಸಿರಿಯಾಳಚಂಗಳೆಯರು? ಸತಿಪತಿ ರತಿಸುಖಭೋ ಗೋಪಭೋಗವಿಲಾಸವ ಬಿಟ್ಟರೆ, ಸಿಂಧು ಬಲ್ಲಾಳನು? ನಿಮ್ಮ ಮುಟ್ಟಿ ಪಂಥನ ಪರಸತಿಯರಿಗೆಳಿಸಿದರೆ, ನಿಮ್ಮ ಚರಣಕ್ಕೆ ದೂರ ಕೂಡಲ ಸಂಗಮದೇವ.

೧೨೩. ಲಿಂಗ ಜಂಗಮ ಒಂದೇ ಎಂದು ನಂಬಿದ ಬಳಿಕ, ಅವರಂಗ ನೆಯರು ಲಿಂಗದ ರಾಣಿವಾಸ. ಅಲ್ಲಿಯೂ ಮೇಳ, ಇಲ್ಲಿಯೂ ಮೇಳ, ಚೌಡೇಶ್ವರಿಯಲ್ಲಿ ಮೇಳ. ಮಾತೆ ಎಂಬ ಭಾವ ತಪ್ಪಿ ಅಪ್ಪಿದವರ ತಲೆಯ ಕೊಂಬ ಕೂಡಲಸಂಗಮದೇವ.

೧೨೪. ಒಡೆಯರು ತಮ್ಮ ಮನೆಗೆ ಒಡಗೊಂಡು ಹೋದರೆ, ತುದು ಗುಣಿತನದಲ್ಲಿ ಪರವಧುವ ನೋಡುವ ಸರಸ ಬೇಡ ಕಾಣಿರಣ್ಣಾ. ಒಡೆಯ ನರಸಿಯ ಸರಸ ಬೇಡ. ಕೂಳಸೊಕ್ಕು ತಲೆಗೇರಿ, ರಾಣಿವಾಸದೊಡನೆ ಸರಸ ಬೇಡ. ಕೂಡಲಸಂಗಮದೇವ ಕರೆಯಿಸಿ ತಗನಯ್ಯಾ.

೧೧೫. ನೋಡಲಾಗದು, ನುಡಿಸಲಾಗದು, ಪರಸ್ತ್ರೀಯರ ಜೇಷ್ಠ, ಕಾಣಿರೋ. ತಗರ ಬೆನ್ನಲ್ಲಿ ಹರಿವ ಸೊಣಗನಂತೆ ಜೇಡ ಕಾಣಿರೋ. ಒಂದಾಸೆಗೆ ಸಾಸಿರ ವರುಷ ನರಕದಲ್ಲದ್ದುವ ಕೂಡಲಸಂಗಮದೇವಾ.

೧೧೬. ತೊರೆಯ ಮೀವ ಅಣ್ಣಗಳಿರಾ, ತೊರೆಯ ಮೀವ ಸ್ವಾಮಿಗಳಿರಾ, ತೊರೆಯಿಂ ಭೋ, ತೊರೆಯಿಂ ಭೋ, ಪರನಾರಿಯ ಸಂಗವ ತೊರೆಯಿಂ ಭೋ. ಪರಧನದಾಮಿಷವ, ತೊರೆಯಿಂ ಭೋ. ಇವ ತೊರೆಯದೆ ಹೋಗಿ, ತೊರೆಯ ಮಿಂದರೆ, ಬರುದೊರೆ ಹೋಹುದು ಕೂಡಲಸಂಗಮದೇವ.

೧೧೭. "ಸತ್ಯ ಶೌಚವ ನಿತ್ಯ ನೇಮವ ತಪ್ಪದೆ ಮಾಡಬಲ್ಲರೆ, ಅದು ಲೇಸು. ಮತ್ಸ್ಯಕೂರ್ಮ ಮಂಡೂಕ ಜಲದೊಳಗಿದ್ದಲ್ಲಿ ಫಲವೇನು? "ಚಿತ್ತಮಂತರ್ಗತಂ ದೃಷ್ಟಾ ತೀರ್ಥ ಸ್ನಾನೇನ ಶುದ್ಧತಿ। ಶತ ಕುಂಭಜಲೇ ಶೌಚಂ ಸುರಾಭಾಂಡಮಿವಾ ಶುಚಿಃ" ಆಗದವ ಮಾಡಿ ಮಾಗಡವ ಮಿಂದರೆ, ತಾ ಕೊಡಬಲ್ಲನೇ ಕೂಡಲಸಂಗಮದೇವಾ?

೧೧೮. ಕುಳ್ಳಿದ್ದು ಲಿಂಗವ ಪೂಜಿಸಿ, ಅಲ್ಲದಾಟವನಾಡುವರಯ್ಯ. ಬೆಳ್ಳಿತ್ತಿನ ಮರೆಯಲ್ಲಿದ್ದು, ಹುಲ್ಲೆಗಂಬ ತೊಡುವಂತೆ ಕಪ್ಪ ಹಾವರಿಗರ ಕೈಯ್ಯಲು ಪೂಜೆಯ ಕೊಳ್ಳ ನಮ್ಮ ಕೂಡಲಸಂಗಮದೇವಾ.

೧೧೯. ನುಡಿಯಲ್ಲಿ ಎಚ್ಚತ್ತು, ನಡೆಯಲ್ಲಿ ತಪ್ಪಿದರೆ, ಹಿಡಿದಿರ್ದ ಲಿಂಗವು ಘಟಸರ್ಪನಯ್ಯ. ನುಡಿಯಲು ಬಾರದು, ನಡೆಯಲು ಬಾರದು. ಲಿಂಗದೇವನೇ ದಿಬ್ಯವೋ. ಅಯ್ಯ ಬಡವನ ಕೋಪ ಅವುಡಗೆ ಮೃತ್ಯುವಾದಂತೆ, ಕಡೆಗೆ ದಾಂಟದು ಕಾಣಾ ಕೂಡಲಸಂಗಮದೇವಾ.

೧೨೦. ತನು ಶುಚಿ ಇಲ್ಲದವನ ದೇಹಾರವೇಕೆ? ದೇವರು ಕೊಡನೆಂಬ ಭ್ರಾಂತಿಯದೇಕೆ? ಮನಕ್ಕೆ ಮನವೆ ಸಾಕ್ಷಿ ಸಾಲದೆ, ಲಿಂಗ ತಂದೆ? ಹೇಗೆ ಮನ; ಹಾಗೆ ಘನ ತಪ್ಪದು ಕೂಡಲಸಂಗಮದೇವಾ.

೧೨೧. ಸಿಜ್ಜ ಸಿಜ್ಜ ಸೂಜಿ ಸುವ ಶರಣಂಗೆ ಆವಕ್ಕೆ ಇದೆ ದಿಟದೀವಿಗೆ. ಪಾದೋದಕ ಕೋಶ ಪಾವನವಲ್ಲದೆ ಏನೂ ಇಲ್ಲವಯ್ಯ. ಮಜ್ಜನಕ್ಕೆರೆವುದು ಲಿಂಗ ಕರಸ್ಥಲ ದಿಬ್ಯ ಗುರು ವಚನ ಭಾಷಾ ಪತ್ರ ಶಿವನ ಕರದಲ್ಲಿ ಸತ್ಯದಿಂದ ನಡೆವಂಗೆ ನಿತ್ಯನೇಮವ ಸಲಿಸುವನಲ್ಲದೆ ಹುಸಿ

ವಂಗೆ ಮಡಿಲ ಕಿಚ್ಚಾಗಿ ಸುಡುವಲಿಂಗವ ಪೂಜಿಸಿ ಮರಳಿ ಅನ್ಯಕ್ಕೆರಗಿದರೆ ಕೂಡಲಸಂಗಮದೇವನವರ ಹಲ್ಲ ಕಳೆವ.

೧೩೨. ಪಾಪಿಗೆ ಕೋಪಿಗೆ ಭಕ್ತಿಯಾಗೆಂದಡೆ ತಪ್ಪುದೆ? ನಾರಿವಾಳ ಪಕ್ಕುದೆ ನಾಯಿಗೆ? ಕೂಡಲಸಂಗಮದೇವ, ನಿಮ್ಮ ನಂಬಿಯೂ ನಂಬದ ದಂಭಕಂಗೆ?

೧೩೩. ಕೋಪಿ ಮಜ್ಜನಕ್ಕೆರೆವಡೆ ರಕ್ತದ ಧಾರೆ. ಪಾಪಿ ಹೂವನೇರಿಸಲು, ಮಸೆದಾಯುಧದ ಗಾಯ. ಕೂಪರಸಾರನೂ ಕಾಣೆನು, ಮಾದಾರ ಚನ್ನಯ್ಯನಲ್ಲದೆ. ಕೂಪರಸಾರನೂ ಕಾಣೆನು, ಡೋಹರ ಕಕ್ಕಯ್ಯನಲ್ಲದೆ. ವ್ಯಾಪ್ತಿಯುಳ್ಳವ ನಮ್ಮ ಮಡಿವಾಳ ಮಾಚಯ್ಯ. ನಿಸ್ಸಮತ್ತಿಗರಿವರಯ್ಯ ಕೂಡಲಸಂಗಯ್ಯಾ.

೧೩೪. ಸದಾಚಾರ ಸದ್ಭಕ್ತಿ ಇಲ್ಲದವರನೊಲ್ಲನಯ್ಯ. ಅಪರಾರಾಧನೆ ದಂಡ. ನಿಚ್ಚ ನಿಚ್ಚ ಪ್ರಾಯಶ್ಚಿತ್ತರನೊಲ್ಲ, ಕೂಡಲಸಂಗಮದೇವ ಭೂಭಾರಕರನು.

೧೩೫. ನೂರನೋದಿ, ನೂರ ಕೇಳಿದರೇನು, ಆಸೆ ಪರಿಯದು, ರೋಷ ಬಿಡದು. ಮಜ್ಜನಕ್ಕೆರೆದು ಫಲವೇನು? ಮಾತಿನಂತೆ ಮನವಿಲ್ಲದ ಜಾತಿ ಡೊಂಬರ ನೋಡಿ ನಗುವ ನಮ್ಮ ಕೂಡಲಸಂಗಮದೇವಾ.

೧೩೬. ತಂದೆ ಮಕ್ಕಳಿಗೆ ಬುದ್ಧಿ ಹೇಳುವಲ್ಲಿ ತಪ್ಪಿಂಗೆ ಮುನಿವನಲ್ಲದೆ ಪ್ರಾಣಕ್ಕೆ ಮುನಿಯ ಲಿಂಗವಂತನು ಲಿಂಗವಂತರಿಗೆ ಬುದ್ಧಿಯ ಹೇಳುವಲ್ಲಿ, ಅವರವಗುಣಕ್ಕೆ ಮುನಿವನಲ್ಲದೆ ಲಾಂಛನಕ್ಕೆ ಮುನಿಯ. ಲಿಂಗಭಕ್ತನು ಲಿಂಗಪಥವ ಹೇಳಿದಡೆ, ಮಚ್ಚರಿಸುವರ ಮೆಚ್ಚ ಕೂಡಲಸಂಗಮದೇವಾ.

೧೩೭. ಗುರು ಉಪದೇಶ ಮಂತ್ರ ವೈದ್ಯ. ಜಂಗಮ ಉಪದೇಶ ಶಸ್ತ್ರ ವೈದ್ಯ ನೋಡಾ. ಭವರೋಗವ ಕಳೆವ ಪರಿಯ ನೋಡಾ. ಕೂಡಲಸಂಗನ ಶರಣರ ಅನುಭಾವ ಮಡಿವಾಳನ ಕಾಯಕದಂತೆ.

೧೩೮. ಕೇಳಿರೇ ಕೇಳಿರೇ ಹಿರಿಯರು ಗುರುವಿನ ಉಪದೇಶವನು. ಒಂದು ಗೀಜಗನ ಉಪದೇಶದಿಂದ ಪೌಲಸ್ತ್ಯನಂದು ಹಡೆಯನೇ ದಶಮುಖನ? ಶಿರವ ಹರಿದಿಕ್ಕಿ ಪರಮನಿದ್ದೆಡೆಯ ಕಾಣದೆ ನಿಳೆಯಲಿ ಕರುಳ ತಂತಿಯ ಉಪದೇಶದಿಂದ ಅಸುರನಂದು ಹಡೆಯನೆ ಸುರ ಪದವ?

ತರುಣಿ ಹರಿಣಿಯ ಉಪದೇಶದಿಂದ ಗತಿ ಮುಕ್ತಿಯ ಪಡೆದ ಬಟ್ಟೆಯ ಹತ್ತನೆ ವಿನಾಶಕ್ತಿರಾಯನು? ರಂಭೆಯ ಉಪದೇಶದಿಂದ ಶಂಭುವಿನೋಲಗದೊಳಗೆ ಕುಳ್ಳಿರನೇ ಶ್ವೇತನು? ನಮ್ಮ ಕೂಡಲಸಂಗನ ಶರಣರ ಉಪದೇಶವ ಕೇಳಿದವರಿಗೆ ದುರಿತ ಪಾಪಂಗಳು ಬಿಟ್ಟು ಹೋಗಿ ಮನಸಿರತರಾಗಿಪ್ಪರಾ ಲಿಂಗದಲ್ಲಿ.

೧೨೯. ಶಿವಚಿಂತೆ ಶಿವಜ್ಞಾನದ ಭ್ರಮೆ ತಿಳಿದವಂಗಲ್ಲದೆ, ಆಚಾರ ಶಿವಾಚಾರ ತಮತಮಗೆ ಸೂರೆಯೇ, ಕೂಡಲಸಂಗನ ಪೂಜಿಸಿದವಂಗಲ್ಲದೇ?

೧೩೦. ಶ್ವಪಚನಾದರೇನು, ಲಿಂಗ ಭಕ್ತನೇ ಕುಲಜನು. ನಂಬಿ ನಂಬದಿದ್ದರೆ, ಸಂದೇಹಿ ನೋಡಾ. ಕಟ್ಟಿದರೇನು, ಮುಟ್ಟಿದರೇನು, ಹೂಸಿದರೇನು, ಮನಮುಟ್ಟದನ್ನಕ್ಕ? ಭಾವ ಶುದ್ಧವಿಲ್ಲದವಂಗೆ, ಭಕ್ತಿ ನೆಲೆಗೊಳ್ಳದು, ಕೂಡಲಸಂಗಮದೇವನೊಲಿದವಂಗಲ್ಲದೆ.

೧೩೧. ಅವರ ನಡೆಯೊಂದು ನುಡಿಯೊಂದಾದರೆ, ಶಿವಾಚಾರಕ್ಕವರು ಸಲ್ಲರಯ್ಯಾ. ಬಲ್ಲನು. ಸಾತ್ವಿಕರಲ್ಲದವರ ನೊಲ್ಲನು. ಶಿವಾಚಾರವ ಬಲ್ಲನು. ಅಲ್ಲಿ ನಿಲ್ಲನು. ಪ್ರಪಂಚಿಯಮನವನೊಲ್ಲನು ಕೂಡಲಸಂಗಮದೇವನು.

೧೩೨. ನಿಧಾನವನರಸಿಹೆನೆಂದು ಹೋದರೆ, ವಿಘ್ನ ಬಪ್ಪುದು ಮಾಬುದೇ? ಸದಾಶಿವನೆಂದರೆ, ಬೆದರಟ್ಟಿ ಸುಡುವುದು ಮಾಬುದೇ? ಹದುಳಿಗನಾಗಿ ಉಳಿದರೆ, ಪದವನೀವ ಕಾಣಾ, ಕೂಡಲಸಂಗಮದೇವಾ.

೧೩೩. ಅಡಿಗಡಿಗೆ ದೇವರಾಣೆ, ಅಡಿಗಡಿಗೆ ಭಕ್ತರಾಣೆ, ಅಡಿಗಡಿಗೆ ಗುರುವಿನಾಣೆ ಎಂಬ ವಚನವೆ ಹೊಲ್ಲ. ಮುಂದೆ ಪಥಕ್ಕೆ ಸಲ್ಲರು. ಆದಿಯಿಂದ ಬಂದ ವಚನವೆಂದು, ಶರಣರ ಕೂಡೆ ಸರಸವಾಡಿದರೆ, ನಗುತಲಿರಿದುಕೊಂಡರೆ, ಅಲಗು ನಡದಿಹುದೇ ಕೂಡಲಸಂಗಮದೇವ?

೧೩೪. ಅರಗಿನ ಪುತ್ತಳಿಯ ಉರಿಯ ನಾಲಿಗೆ ಹೊಯಿದು, ಮಾತಾಡುವ ಸರಸಬೇಡ. ಬೆಣ್ಣೆಯ ಬೆನಕಂಗೆ ಕೆಂಡದಮಂಡಲಿಗೆಯ ಮಾಡಿ, ಚೆಲ್ಲವಾಡಿದರೆ ಹಲ್ಲು ಹೋಹುದು. ಕೂಡಲಸಂಗನ ಶರಣರೊಡನೆ ಸರಸವಾಡಿದರೆ, ಅದು ವಿರಸ ಕಾಣಿರಯ್ಯಾ.

೧೩೫. ಹಾವಿನ ಹೆಡೆಗಳ ಕೊಂಡು ಕೆನ್ನೆಯ ತುರಿಸಿಕೊಂಬಂತೆ, ಉರಿವ ಕೊಳ್ಳಿಯ ಕೊಂಡು ಮಂಡೆಯ ಸಿಕ್ಕ ಬಿಡಿಸುವಂತೆ, ಹುಲಿಯ ಮೀಸೆಯ ಹಿಡಿದುಕೊಂಡು ಒಲೆಮಯ್ಯಲ ನಾಡುವಂತೆ, ಕೂಡಲಸಂಗ ನಶರಣರೊಡನೆ ಮರೆದು ಸರಸವಾಡಿದರೆ, ಸುಣ್ಣದ ಕಲ್ಲ ಮಡಿಲಲ್ಲಿ ಕಟ್ಟಿಕೊಂಡು ಮಡುವ ಬಿದ್ದಂತೆ.

೧೩೬. ಉರಿವ ಕೊಳ್ಳಿಯ ಮಂಡೆಯಲಿಕ್ಕಿನಡುರಿವುದ ಮಾಬು ದೆ? ಕಲ್ಲ ಗುಗ್ಗರಿಯ ಮೆಲಿದರೆ, ಹಲ್ಲು ಹೋಹುದು ಮಾಬುದೆ? ಶರಣರೊಡನೆ ಸರಸವಾಡಿದರೆ, ನರಕ ತಪ್ಪದು ಕಾಣಾ, ಕೂಡಲಸಂ ಗಮದೇವ.

೧೩೭. ಕೋಣನ ಹೇರಿಂಗೆ ಕುನ್ನಿ ಬಸುಗುತ್ತ ಬಡುವಂತೆ, ತಾವು ನಂಬರು. ನಂಬುವರನು ನಂಬಲೀಯರು. ತಾವು ಮಾಡರು. ಮಾಡುವವರನು ಮಾಡಲೀಯರು. ಮಾಡುವ ಭಕ್ತರ ಕಂಡು ಸೈರಿಸಲಾ ರದವರ ಕೂಗಿಡೆ ಕೂಗಿಡೆ ನರಕದಲಿಕ್ಕುವ ಕೂಡಲಸಂಗಮದೇವ.

೧೩೮. ಚೇಳಿಂಗೆ ಬಸುರಾಯಿತ್ತೆ ಕಡೆ. ಬಾಳೆಗೆ ಫಲವಾಯಿತ್ತೆ ಕಡೆ ನೋಡಾ. ರಣರಂಗದಲ್ಲಿ ಕಾದುವ ಓಲೆಯಕಾರಂಗೆ ಓಸರಿಸಿತ್ತೆ ಕಡೆ. ಮಾಡುವ ಭಕ್ತಂಗೆ ಮನಹೀನವಾದರೆ ಅದೇ ಕಡೆ ಕೂಡಲಸಂಗಮ ದೇವಾ.

೧೩೯. ಹುಲಿಯ ಹಾಲು ಹುಲಿಗಲ್ಲದೆ, ಹೊಲದ ಹುಲ್ಲೆಗೆ ಉಣ ಬಾರದು. ಕಲಿಯ ಕಾಲ ತೊಡರು ಛಲವಾಳಿಂಗಲ್ಲದೆ, ಇಕ್ಕಬಾರದು. ಅಳಿಮನದಾಸೆಯವರ ಮೂಗ ಹಲ್ಲು ದೋರ ಕೊಯ್ವ ಕೂಡಲಸಂಗಮ ದೇವ.

೧೪೦. ಅರ್ಥಪ್ರಾಣಾಭಿಮಾನ ನಿಮ್ಮದೆಂಬಿರಿ. ಒತ್ತಿ ನೋಡಿದರೆ, ಮುಟ್ಟಲೀಯ್ಯರಿ. ಮುಟ್ಟಿ ಬಂದಲ್ಲಿ, ಕಠಾರಿಯ ಕಾಳಗವ ನಿವಾರಿಸುವಿರಲ್ಲದೆ ಲಿಂಗಜಂಗಮವಂತನಾಗಬಾರದು. ಕೂಡಲಸಂಗಮದೇವ ವೇಷ ಡಂಭ ಕರಿಗೆ ಭಕ್ತಿ ಎಂತಪ್ಪುದಯ್ಯ?

೧೪೧. ಅಲಗಲಗು ಮೋಹಿಸಿದಲ್ಲದೆ, ಕಲಿತನವ ಕಾಣಬಾರದು. ನುಡಿದ ನುಡಿ ಜಾರಿದಡೆ ಮನಕ್ಕೆ ಮನ ನಾಚಬೇಕು. ಶಬ್ದ ಗಟ್ಟಿಯ ತನದಲ್ಲಿ ಎಂತಪ್ಪುದಯ್ಯ ಭಕ್ತಿ? ಪಾಪಿಯ ಕೂಸನೆತ್ತಿದಂತೆ. ಕೂಡಲ ಸಂಗಮದೇವರ ಭಕ್ತಿ ಅಳಿಮನದವರಿಗೆ ಅಳವಡದಯ್ಯ.

೧೪೨. ಹರಬೀಜವಪ್ಪರೆ ಹಂದೆ ತಾನಪ್ಪನೇ? ಒರೆಗಟ್ಟಿ, ಇರಿಯದವರ ಲೋಕ ಮೆಚ್ಚುವದೇ? ಉಟ್ಟ ಚಲ್ಲಣ ಕೈಯ್ಯ ಪಟ್ಟಿಸವಿಡಿದು ಗರುಡಿಯ ಕಟ್ಟಿ, ಶ್ರವನ ಮಾಡುವಂತೆ ತನ್ನ ತಪ್ಪಿಸಿಕೊಂಡರೆ, ಶಿವ ಮೆಚ್ಚುವನೆ? ಅರಿಯದವರಿಗೆ ಒಳ್ಳೆ ಹೆಡೆ ಎತ್ತಿ, ಆಡುವಂತೆ ಬೊಳ್ಳಿಗನ ಭಕ್ತಿ, ಕೂಡಲಸಂಗಮದೇವ.

೧೪೩. ಮೊನೆ ತಪ್ಪಿದ ಬಳಿಕ, ಅಲಗೇನ ಮಾಡುವದು? ವಿಷ ತಪ್ಪಿದ ಬಳಿಕ ಹಾವೇನ ಮಾಡುವುದು? ಭಾಷೆ ತಪ್ಪಿದ ಬಳಿಕ, ಬಲ್ಲಿದ ಭಕ್ತನೇನ ಮಾಡುವನಯ್ಯ? ಭಾಷೆ ತಪ್ಪಿದ ಬಳಿಕೆ, ಪ್ರಾಣದಾಸೆಯನು ಹಾರಿದಡೆ, ಮಾಸಲನು ಸೊಣಗ ಮುಟ್ಟಿದಂತೆ ಕೂಡಲಸಂಗಮದೇವಾ.

೧೪೪. ಶರಣ ಸಂಬಂಧವನರಿತ ಬಳಿಕ, ಮರಳಿ ಭವಿಯ ಬೆರಿಸಲಾಗದು. ಬ್ರಹ್ಮಹತ್ಯ ಭ್ರೂಣಹತ್ಯ, ವೈತರಣಿ, ದುರ್ಗತಿ ಪಂಚ ಮಹಾಪಾತಕದಿಂದಧಿಕ ನೋಡಾ. ಅಳುಪಿ ಭವಿಯೊಡನುಂಡರೆ, ಭಕ್ತನಲ್ಲ ಕೂಡಲಸಂಗಮದೇವಾ,

೧೪೫. ವೀರವ್ರತಿ ಭಕ್ತನೆಂದು ಹೊಗಳಿಕೊಂಬಿರಿ ಹೇಳಿರಯ್ಯ. ವೀರನಾದರೆ, ವೈರಿಗಳು ಮೆಚ್ಚಬೇಕು. ವ್ರತಿಯಾದರೆ, ಅಂಗನೆಯರು ಮೆಚ್ಚಬೇಕು. ಭಕ್ತನಾದರೆ, ಜಂಗಮ ಮೆಚ್ಚಬೇಕು. ಈ ನುಡಿಯೊಳಗೆ ತನ್ನ ಬಗೆ ಇರೆ ಬೇಡಿದ ಪದವಿಯನೀವ ಕೂಡಲಸಂಗಮದೇವ.

೧೪೬. ಕಲಿತನ ತನಗುಳ್ಳರೆ, ಸೂಜಿಬಾಳು ಮೊದಲಾಗಿ ಕಾದಲೆಬೇಕು. ಶರಣ ಪಥ ತನಗುಳ್ಳರೆ, ಶಿವಭಕ್ತರ ಮನೆಯ ಶಿವರಸವ ಪಂಚಾಮೃತವ ಮಾಡಿಕೊಳ್ಳಬೇಕು. ಭ್ರಾಂತುವಿಡಿದು ಲಿಂಗಕೋಗರವನರಸುವ ಪಾತಕರ ಮೆಚ್ಚ ಕೂಡಲಸಂಗಮದೇವ.

೧೪೭. ಕಟ್ಟಿ ಬಿಡುವನೇ ಶರಣನು? ಬಿಟ್ಟು ಹಿಡಿವನೇ ಶರಣನು? ನಡೆದು ತಪ್ಪುವನೇ ಶರಣನು? ನುಡಿದು ಹುಸಿವನೆ ಶರಣನು? ಸಜ್ಜನಿಕೆ ತಪ್ಪಿದರೆ ಕೂಡಲಸಂಗಯ್ಯ ಮೂಗ ಹಲ್ಲು ದೋರಿ ಕೊಯ್ವ.

೧೪೮. ಹುಟ್ಟುವಲ್ಲಿ ಭವಿ, ಮರಳಿ ಭಕ್ತನ ಮಾಡಿ, ಪೂರ್ವಾಶ್ರಯವ ಕಳೆದು, ಹೊಂದುವಲ್ಲಿ ಭವಿಯಾಗಿ ಹೋಹರ ಮುಟ್ಟಲಾಗದು. ಅವನ ಮುಟ್ಟಿದವ ಮುನ್ನವೇ ವ್ರತಗೇಡಿ. ಆವನ ಶ್ರಾದ್ಧಕಾಲವೇ ಶ್ವಾನಮಾಂಸ.

ಕ್ರಿಯಾಕಾರವೇ ಕ್ರಿಮಿಗಳು. ತದ್ದಿನವೇ ಮದ್ಯ ಮಾಂಸ. ಇದು ಕಾರಣ ಕೂಡಲಸಂಗಮದೇವ ಅವನ ಮನೆಯ ವಿಚಾರಿಸದೆ ಹೊಕ್ಕವಂಗೆ ನಾಯಕ ನರಕ.

೧೪೯. ಒಡನೆ ಹುಟ್ಟಿದುದಲ್ಲ, ಒಡನೆ ಬೆಳೆದುದಲ್ಲ. ಎಡೆಯ ಲಾದ ಒಂದು ಉಡಿಗೆಯನುಟ್ಟು ಸಡಲಿದರೆ, ಲಜ್ಜೆ ನಾಚಿಕೆಯಾಯಿ ತ್ತೆಂಬ ನುಡಿ ದಿಟವಾಯಿತ್ತು. ಲೌಕಿಕದಲ್ಲಿ ಪಡೆದ ಗುರುಕರುಣದ ಒಡನೆ ಹುಟ್ಟಿದ ನೇಮವನು ಬಿಡದಿರಲಿವರೋ. ಬಿಟ್ಟರೆ ಕಷ್ಟ. ಕೂಡಲಸಂಗ ಮದೇವನಡಸಿ ಕೆಡಹುವ ನಾಯಕನರಕದಲ್ಲಿ.

೧೫೦. ಛಲಬೇಕು ಶರಣಂಗೆ ಪರಧನವನೊಲ್ಲೆನೆಂಬ. ಛಲ ಬೇಕು ಶರಣಂಗೆ ಪರಸತಿಯನೊಲ್ಲೆನೆಂಬ. ಛಲಬೇಕು ಶರಣಂಗೆ ಪರ ದೈವವನೊಲ್ಲೆನೆಂಬ. ಛಲಬೇಕು ಶರಣಂಗೆ ಲಿಂಗಜಂಗಮ ಒಂದೆಂಬ. ಛಲಬೇಗು ಶರಣಂಗೆ ಪರವಾದಿನಿಗ್ರಹದಲ್ಲಿ. ಛಲಬೇಕು ಶರಣಂಗೆ ಪ್ರಸಾದ ದಿಟವೆಂಬ. ಛಲವಿಲ್ಲದವರ ಮೆಚ್ಚ ಕೂಡಲಸಂಗಮದೇವ.

೧೫೧. ಜಂಬೂದ್ವೀಪ ನವಖಂಡ ಪೃಥ್ವಿಯೊಳಗೆ ಕೇಳಿರಯ್ಯ ಎರಡಾಳಿನ ಭಾಷೆಯ. ಕೊಲುವೆನೆಂಬ ಭಾಷೆ ದೇವನದು. ಗೆಲುವೆ ನೆಂಬ ಭಾಷೆ ಭಕ್ತನದು. ಸತ್ಯವೆಂಬ ಕೂರಲಗನೆ ಕಳೆದುಕೊಂಡು ಸದ್ಭಕ್ತರು ಗೆದ್ದರು ಕಾಣಾ ಕೂಡಲಸಂಗಮದೇವ.

೧೫೨. ಮುನ್ನಿನ ಕಲಿವೀರಧೀರರು ಕಾದಿದ ರಣಗಳನು ಪರಿಪ ರಿಯಲಿ ಬಣ್ಣಿಸಿ ಹೇಳಬಹುದಲ್ಲದೆ, ಆ ದಳವಿದಿರಾದಲ್ಲಿ, ಬಿರಿದ ಪಚಾ ರಿಸಿ, ಕಾದಿ ತೋರಲು ಬಾರದು. ಮುನ್ನಿನ ಪುರಾತನರು ಪುರುಷ ಪ್ರತಿಯರು ಒಲಿಸಿದ ಆಯತವ ಪರಿಪರಿಯಲು ಬಣ್ಣಿಸಬಹುದಲ್ಲದೆ, ಪುರುಷ ನಿರ್ವಾಣಕ್ಕುರಿವಗ್ನಿಯ ಬಂದು ಹೊಕ್ಕು ತೋರಲು ಬಾರದು. ಮುನ್ನಿನ ಪುರಾತರೆಲ್ಲರು ತನುಮನಧನವನಿತ್ತು ಮಾಡಿ ನೀಡಿ ಲಿಂಗವ ಕೂಡಿದ ಪರಿಗಳನು ಅನುಭಾವದಲರ್ಥೈಸಿ ಹೇಳಲುಬಹುದಲ್ಲದೆ, ಮಾಡಿ ನೀಡಿ ತೋರಲು ಬಾರದು. ಇಂತೀ ಅರೆಬಿರಿದಿನ ಬಂಟರು ಪುರುಷಪ್ರತಿಯರು ಪುರಾತನರು ಬರಿಯ ಮಾತನಾಡಿ ಹೊರಗೆ ಮೆರೆವರಲ್ಲ. ಪರೀಕ್ಷೆಯುಂಟಾಗಿ ಇದ್ದರೆ, ಒಳಗಣವರ ಹೆಸರ ಹಿಡಿದು ಪರಿಪರಿಯಲು ಹೊಗಳುವರು. ಶರೀರಮರ್ಥ ಪ್ರಾಣ ಗುರುಲಿಂಗ ಜಂಗಮಕ್ಕೆ ಪರೀಕ್ಷೆಯುಂಟಾಗಿಯೇ ಆತ ಮಹೇಶ್ವರ, ಪುರಾತ ವಳಿ ಎಂಬೆ ಪರಮಬಂಧುಗಳಾತನ ನೆನ

ನೆನೆದು ಬದುಕುವರು. ಇಂತೀ ಅನುಭಾವದ ಓದಿನ ಅಕ್ಷರಾಭ್ಯಾಸದ ಸಾಧಿಸಿ ತರ್ಕಿಸಿ ನಿಂದಿಸಲಾಗದು. ಕೂಡಲಸಂಗನ ಶರಣರಿಗಲ್ಲದನುಭಾವವಿಲ್ಲ.

೧೫೩. ಕಬ್ಬಿನ ಹಣಿದವನಾಡುವರಲ್ಲದೆ ಕಾಯದ ಹಣಿದವನಾಡುವರೇ? ಮೇಲೊಡ್ಡವಾಯಿತ್ತೆಂದೆ. ಕೂಡಲಸಂಗಮದೇವ ನೀನಿಕ್ಕಿದ ಜೂಜಿಂಗೆ ಹೊಯಿದು ಗೆದ್ದ ಸಿರಿಯಾಳ.

೧೫೪. ಅರ್ಥಪ್ರಾಣಾಭಿಮಾನವ ಕೊಟ್ಟೆನೆಂಬವರಲ್ಲದೆ, ಕೊಟ್ಟ ಭಕ್ತರನಾರನೂ ಕಂಡುದಿಲ್ಲ. ದಾಸ ತನ್ನ ವಸ್ತ್ರವ ಕೊಟ್ಟನಲ್ಲದೆ ತನ್ನ ಕೊಟ್ಟುದಿಲ್ಲ. ಬಲ್ಲಾಳ ತನ್ನ ವಧುವ ಕೊಟ್ಟನಲ್ಲದೆ ತನ್ನ ಕೊಟ್ಟುದಿಲ್ಲ. ಸಿರಿಯಾಳ ತನ್ನ ಮಗನ ಕೊಟ್ಟನಲ್ಲದೆ, ತನ್ನ ಕೊಟ್ಟುದಿಲ್ಲ. ಇವೆಲ್ಲ ಹೊರಗಣ ಮಾತು. ಕೂಡಲಸಂಗಮದೇವರಲ್ಲಿ ತನ್ನ ಕೊಟ್ಟ ಸಿಂಧುಮರಾಳ.

೧೫೫. ಒಂದು ಮಾತೆನ್ನಬಹುದೇ ಶಬ್ದಸಾರಾಯವನು? ಒಂದು ಮಾತೆನ್ನಬಹುದೆ ಶರಣ ಸಂಬಂಧವನು? ಕೂಡಲಸಂಗಮದೇವರು ನಂಬಿಗೆ 'ಓ' ಎಂದುದನೊಂದು ಮಾತೆನ್ನಬಹುದೆ?

೧೫೬. ಭಕ್ತರೇ ಸಮರ್ಥರು, ಅಸಮರ್ಥರೆನಲುಂಟೇ? ಚನ್ನನೆತ್ತ? ಚೋಳನೆತ್ತ? ಚನ್ನನೊಡನುಂಡ ಶಿವ. ಅಹಾ ಅಯ್ಯ! ಚನ್ನಚೋಳನ ಮನೆಯ ಕಂಪಣಿಗನಯ್ಯ. ಕೂಡಲಸಂಗಮದೇವ ಭಕ್ತಿಲಂಪಟನಯ್ಯ.

೧೫೭. ನಿಸ್ಸೀಮ ಗುಗ್ಗಳವನಿಕ್ಕಿದನೊಬ್ಬ ಶರಣ. ಉಘೇ, ಚಾಂಗು ಭಲಾ, ಎಂಬ ಹೊಗೆ ಗಗನವ ತೀವಿ ವಹಿಲಯ್ಯ ಮೆರೆವ ಸೌರಾಷ್ಟ್ರ ಮಂಡಲದಲ್ಲಿ ಕೂಡಲಸಂಗಮದೇವ ಭಕ್ತವತ್ಸಲನಾಗಿ.

೧೫೮. ಲಿಂಗವಶದಿಂ ಬಂದ ನಡೆಗಳು ಲಿಂಗವಶದಿಂ ಬಂದ ನುಡಿಗಳು ಲಿಂಗವಂತರು ತಾವು ಅಂಜಲೇಕೆ, ಲಿಂಗವಿರಿಸಿದಂತೆ ಇಪ್ಪದಲ್ಲದೆ ಕೂಡಲಸಂಗಮದೇವ ಭಕ್ತರಭಿಮಾನ ತನ್ನದೆಂಬನಾಗಿ?

೧೫೯. ಶಿವಭಕ್ತನಾಗಿ ತನ್ನ ಹಿಡಿದಿಹೆನೆಂದು ಹೋದರೆ ನುಗ್ಗುಮಾಡುವ, ನುಸಿಯ ಮಾಡುವ, ಮಣ್ಣಮಾಡುವ, ಮಸಿಯ ಮಾಡುವ. ಕೂಡಲಸಂಗಮದೇವರ ನೆರೆನಂಬಿದನಾದರೆ, ಕಡೆಗೆ ತನ್ನಂತೆ ಮಾಡುವ.

೧೬೦. ಅರೆವನಯ್ಯ ಸಣ್ಣನಹನ್ನಕ್ಕ. ಬರೆವನಯ್ಯ ಬಣ್ಣಗಾಬನ್ನಕ್ಕ. ಅರೆದರೆ ಸಣ್ಣನಾಗಿ, ಒರೆದರೆ ಬಣ್ಣವಾದರೆ, ಕೂಡಲಸಂಗಮದೇವನೊಲಿದು ಸಲಹುವನು.

೧೬೧. ಅಂಜಿದರಾಗದು, ಅಳುಕಿದರಾಗದು, ವಜ್ರಪಂಜರದೊಳ ಗಿಪ್ಪರೆ ಆಗದು. ತಪ್ಪದೆಲವೋ ಲಲಾಟ ಲಿಖಿತ. ಕಕ್ಕುಲತೆ ಬಟ್ಟರೆ ಆಗದು ನೋಡಾ. ಧೃತಿಗೆಟ್ಟು ಮನ ಧಾತುಗೆಟ್ಟರೆ, ಅಪ್ಪುದು, ತಪ್ಪದು ಕೂಡಲಸಂಗಮದೇವಾ.

೧೬೨. ಹುಟ್ಟಿದ ಬಳಿಕ ಕೊಟ್ಟ ಭೋಗಂಗಳ ತಪ್ಪಿಸಿಹೆನೆಂದರೆ, ತಪ್ಪದು, ನೋಡಯ್ಯ. ಎನಗಿನ್ನೆಂತೋ, ಎನಗಿನ್ನೆಂತೋ ಎಂದೆನ್ನಬೇಡ. "ನಾ ಭುಕ್ತಂ ಕ್ರಿಯತೆ ಕರ್ಮಂ" ಎಂಬ ಶೃತಿ ತಪ್ಪದು ಕೂಡಲಸಂಗ ಮದೇವ.

೧೬೩. ಆಯುಷ್ಯ ತೀರದಲ್ಲದೆ, ಮರಣವಿಲ್ಲ. ಭಾಷೆ ತೀರದಲ್ಲದೆ, ದಾರಿದ್ರ್ಯವಿಲ್ಲ. ಅಂಜಲೇಕೋ ಲೋಕ ವಿಗರ್ಭಣೆಗೆ? ಅಂಜಲೇಕೋ, ಕೂಡಲಸಂಗಮದೇವ, ನಿಮ್ಮಾಳಾಗಿ?

೧೬೪. ಮನಕ್ಕೆ ಮನ ಒಂದಾಗಿ ಧನಕ್ಕೆ ಧನ ಒಂದಾಗಿ ನಚ್ಚಿದ ಮಚ್ಚು ಅಚ್ಚೊತ್ತಿದಂತಿರಬೇಕು. ಪ್ರಾಣಕ್ಕೆ ಪ್ರಾಣ ಒಂದಾಗಿ ಶುಭ ಸೂಚನೆ ಒಂದಾಗಿರದ ನಚ್ಚು ಮಚ್ಚು ಪಾರವೈದುದೇ? ಶಿರ ಹರಿವರೇನು? ಕರುಳು ಕುಪ್ಪಳಿಸಿದರೇನು? ಇಂತಪ್ಪ ಸಮಸ್ತ ಸುವಸ್ತುವೆಲ್ಲವೂ ಹೋದ ರೇನು? ಚಿತ್ತಮನ ಬುದ್ಧಿಯೊಂದಾದ ಮಚ್ಚು ಬಿಚ್ಚಿ ಬೇರಾಗದಿದ್ದರೆ ಮಚ್ಚುವ ನಮ್ಮ ಕೂಡಲಸಂಗಮದೇವ.

## ಮಹೇಶ್ವರನ ಮಾಹೇಶ.

೧. ಎಸಿಸೆನಿಸೆಂದರೆ ನಾ ಧೃತಿಗೆಡೆನಯ್ಯ. ಎಲುದೋರಿದರೆ, ನರ ಹರಿದರೆ, ಕರುಳು ಕುಪ್ಪಳಿಸಿದರೆ, ನಾ ಧೃತಿಗೆಡೆನಯ್ಯ. ಸಿರಹರಿದು ಅಟ್ಟಿ ನೆಲಕ್ಕೆ ಬಿದ್ದರೆ, ನಾಲಿಗೆ ಕೂಡಲಸಂಗ ಶರಣೆನುತಿದ್ದಿತಯ್ಯ.

೨. ಒಣಗಿಸಿ ಎನ್ನ ಗಣಫಣಲನೆ ಮಾಡಿದಡೆಯೂ, ಹರಣವು ಳ್ಳನ್ನಕ್ಕ ನಿಮ್ಮ ಚರಣವ ನೆನೆವುದ ಮಾಣೆ, ಮಾಣೆ, ಶರಣೆಂಬುದ ಮಾಣೆ ಮಾಣೆ, ಕೂಡಲಸಂಗಮದೇವಯ್ಯ ಎನ್ನ ಹೆಣನ ಮೇಲೆ ಕಂಚಿ ಟ್ಟುಂಡಡೆಯೂ ಮಾಣೆ ಮಾಣೆ.

೩. ಜಾಗ್ರತ್‌ಸ್ವಪ್ನ ಸುಷುಪ್ತಿಯಲ್ಲಿ ಮತ್ತೊಂದ ನೆನೆದೊಡೆ ತಲೆ ದಂಡ, ತಲೆದಂಡ. ಹುಸಿಯಾದೊಡೆ ದೇವಾ ತಲೆದಂಡ ತಲೆದಂಡ. ಕೂಡ ಲಸಂಗಮದೇವ, ನೀವಲ್ಲದೆ ಅನ್ಯವ ನೆನೆದೊಡೆ ತಲೆದಂಡ ತಲೆದಂಡ.

೪. ಸುಖ ಬಂದರೆ ಪುಣ್ಯದ ಫಲವೆನ್ನೆನು. ದುಃಖ ಬಂದರೆ ಪಾಪದ ಫಲವೆನ್ನೆನು. ನೀ ಮಾಡಿದೊಡಾಯಿತ್ತೆಂದೆನ್ನೆನು. ಕರ್ಮಕ್ಕೆ ಕರ್ತೃವೇ ಕಡೆ ಎಂದೆನ್ನೆನು. ಉದಾಸೀನವಿಡಿದು ಶರಣೆನ್ನೆನು. ಕೂಡಲಸಂಗಮದೇವ ನೀ ಮಾಡಿದುಪದೇಶವು. ಎನಗೀಸರಿಯಲಿ ಸಂಸಾರದ ಸವಿಯು ಬಳಸು ವೆನು.

೫. ಕಾಯದ ಕಳವಳಕಂಜಿ ಕಾಯಯ್ಯ ಎನ್ನೆನು. ಜೀವನೋ ಪಾಯಕ್ಕಂಜಿ ಈಯಯ್ಯ ಎನ್ನೆನು. ಯದ್ಭಾವಂ ತದ್ಭವತಿ. ಉರಿಬರಲಿ, ಸಿರಿಬರಲಿ, ಬೇಕು ಬೇಡೆನ್ನೆನು. ಆನು ನಿಮ್ಮ ಹಾರೆನು. ಮಾನವರ ಬೇ ಡೆನು. ಆಣೆ ನಿಮ್ಮಾಣೆ ಕೂಡಲಸಂಗಮದೇವ.

೬. ನಾಳೆ ಬಪ್ಪುದು ನಮಗಿಂದೇ ಬರಲಿ. ಇಂದು ಬಪ್ಪುದು ನಮ ಗೀಗಲೆ ಬರಲಿ. ಇದಕಾರಂಜುವರು ? ಇದಕಾರಳುಕುವರು ? "ಜಾತಸ್ಯ ಮರಣಂ ಧ್ರುವಂ" ಎಂದುದಾಗಿ ನಮ್ಮ ಕೂಡಲಸಂಗಮದೇವ ಬರೆದ ಬರಹ ತಪ್ಪಿಸುವರೆ, ಹರಿಬ್ರಹ್ಮಾದಿಗಳವಲ್ಲ.

೭. ಕಳ ಹೋದರೆ, ಕನ್ನದುಳಿಯ ಹಿಡಿವೆ. ಬಂದಿವಿಡಿದರೆ, ನಿಮ್ಮಿಂದ ಮುಂದೆ ನಡೆವೆ. ಮನಭೀತಿ ಮನಶಂಕೆಗೊಂಡೆನಾದರೆ ನಿ ಮ್ಮಾಣೆ, ನಿಮ್ಮ ಪುರಾತರಾಣೆ. ಆಳ್ದರ ನಡೆ ಸದಾಚಾರವೆನ್ನದಿದ್ದರೆ ಕಟ್ಟಾಳು ಶಿಷ್ಟತನಕ್ಕೆ ಹೋಹ ಕಷ್ಟವನೋಡಾ, ಕೂಡಲಸಂಗಮ ದೇವ.

೮. ಜೋಳವಾಳಿಯವ ನಾನಲ್ಲಯ್ಯ. ವೇಳೆಯಾಳಿಯವ ನಾನಲ್ಲಯ್ಯ. ಹಾಳುಗೆಟ್ಟೋಡುವ ಆಳು ನಾನಲ್ಲಯ್ಯ. ಕೇಳು ಕೂಡಲಸಂಗಮದೇವಾ ಮರಣವೇ ಮಹಾನವಮಿ.

೯. ಕರ್ಮವೆಂಬ ಅಂಕದೊಡನೆ ತೊಡರಿದೆ. ಬಿನ್ನಪವ ಅವ ಧಾರು. ನಿಮ್ಮಾಳಿನ ಭಾಷೆಯಂ. ಕಡೆಗಳಕ್ಕೆ ನೂಕುವೆ. ಕೆಡಹುವೆನಂಕವ. ಕರೆವಡೋ ಎನಿಸಿದರೆ ನಿಮ್ಮಾಳಲ್ಲ. ಶಿವಶರಣೆಂಬ ದಂಡೆಯ ಹೂಡಿ ಗಣಮೇಳಾಪವೆಂಬ ಅಲಗಿನಿಂದಿರಿವೆ ಕೂಡಲಸಂಗಮದೇವ.

೧೦. ಕಟ್ಟಿದೆನೊರೆಯ ಬಿಟ್ಟು ಜನ್ನಿಗೆಯರ. ಮುಟ್ಟಿ ಬಂದಿರಿದರೆ ಓಸರಿಸುವನಲ್ಲ. ಓಡದಿರು, ಓಡದಿರು. ನಿಮ್ಮ ಶರಣರ ಮನೆಯ ಬಿರು

ದಿನ ಅಂಕಕಾರ. ಓಡದಿರು, ಓಡದಿರು, ಎಳೆ ಎಳೆ ದೇವಾ, ಎಳೆ ಎಳೆ ಸ್ವಾಮಿ, ಎಳೆ ಎಳೆ ಹಂದೆ, ಕೂಡಲಸಂಗಮದೇವಾ.

೧೧. ಗರುಡಿಯ ಕಟ್ಟಿ, ಅರವತ್ತುನಾಲ್ಕು ಕೋಲದ ಅಭ್ಯಾಸವ ಮಾಡಿದೆನಯ್ಯ. ಇರಿವ ಗಾಯ ಖಂಡೆಯ ಭೇದವಿನ್ನು ತಿಳಿಯದು. ಪ್ರತಿ ಗರುಡಿಕಾರ ಬಿರಿದ ಪಾಡಿಂಗೆ ಒದಗಲು, ವೀರಪಟ್ಟೆಯ ಕಟ್ಟಿ, ತಿಗುರನೇರಿಸಿಕೊಂಬೆ. ಗುರುಕಳನನೇರಿ ಕಠಾರಿಯ ಕೊಂಡಲ್ಲಿ ಹೋಯಿತ್ತಾಗಳೆ ಎಂದಡೆ, ಎನ್ನ ನಿನ್ನಲ್ಲಿ ನೋಡು ಕೂಡಲಸಂಗಮದೇವ.

೧೨. ಶರಣರೊಡನೆ ಶ್ರವವಮಾಡಿ ಮೂರು ಕೋಲ ಬಿಡುವೆನಯ್ಯ. ತಾಕಲಿ, ತಪ್ಪಲಿ. ಗೆಲವೆನ್ನದೆಂಬೆನಯ್ಯ. ಕಳಗಿಂದ ಕಡೆಗಳಕ್ಕೆ ಓಡುವೆ ಕೂಡಲಸಂಗಯ್ಯ.

೧೩. ಎಲೇ ಗಂಡುಸೇ, ನೀ ಕೇಳಾ. ನಿನಗೊಬ್ಬಗೆಂಮುಟ್ಟಿ ಗಂಡುಡಿಗೆಯನು. ಮತ್ತೊನ್ಮೆ ಆನು ಗಂಡಪ್ಪೆನಯ್ಯ. ಮತ್ತೊನ್ಮೆ ಆನು ಹೆಣ್ಣಪ್ಪೆನಯ್ಯ. ಕೂಡಲಸಂಗಮದೇವ ನಿನಗೆ ವೀರನಪ್ಪೆ. ನಿಮ್ಮ ಶರಣರಿಗೆ ವಧುವಪ್ಪೆ.

## ಮಾಹೇಶ್ವರನ ಭಕ್ತಿ.

೧. ಕಟ್ಟುವೆನುಪ್ಪರಗುಡಿಯ, ಜಗವರಿಯೆ. ಮಾಡುವೆನೆನ್ನಕಾಯ ಕೆಡುವನ್ನಕ್ಕ. ಬೇಡುವುದೆನ್ನ ತನುಮನಧನವ. ಬೇಡಲಾರದ ಹಂದೆ ನೀ ಕೇಳಾ. ಈ ಬಿರಿದು ಸಂದಿತ್ತು ಕೂಡಲಸಂಗಮದೇವ.

೨. ಹುಟ್ಟುತ್ತ ಪ್ರತ್ಯವನರಿಯದವಂಗೆ ಐಶ್ವರ್ಯವಂತ ಮಗನಾದರೆ, ಲಕ್ಷ ಸಂಖ್ಯೆಯ ಹಿರಣ್ಯವ ತಂದು ಸಂತೋಷಬಡಿಸುವಂತೆ, ಕಾಳಗದ ಮುಖವಾವುದೆಂದರಿಯದ ಹಂದೆ ನೃಪಂಗೆ ಒಬ್ಬ ಕ್ಷತ್ರಿಯನಪಕುಮಾರ ಹುಟ್ಟಿ, ಕಿಗ್ಗಡಲ ರಕ್ತದ ಹೊನಲಲ್ಲಿ ಕಡಿದು ಮುಳುಗಾಡುವ ಕೊಳುಗುಳವ ಕಂಡು ಪರಿಣಾಮಿಸುವಂತೆ, ಆನು ಪರಿಣಾಮಿಸುವೆನಯ್ಯ, ಕೂಡಲಸಂಗಮದೇವಾ ನೀವು ಬಂದೆನ್ನ ಬೇಡಿದರೆ.

೩. ಅರ್ಥವನನರ್ಥವಮಾಡಿ ಕೋಳಾಹಳಂಗೈವುತ್ತಿರಲಿ, ಹುಟ್ಟಿದ ಮಕ್ಕಳ ನವಖಂಡವ ಮಾಡಿ ಕಡಿವುತ್ತಿರಲಿ, ಮುಟ್ಟಿದ ಸ್ತ್ರೀಯ ಕಣ್ಣಮುಂದೆ ಅಭಿಮಾನಂಗೊಂಡು, ನೆರೆವುತ್ತಿರಲಿ, ಇಂತೀ ತ್ರಿವಿಧವು ಹೊರಗಣವು, ಇನ್ನೆನ್ನಂಗದ ಮೇಲೆ ಬರಲಿ, ಹಿಡಿಖಂಡವ ಕೊಯ್ಯಲಿ,

ಇಕ್ಕುವ ಶೂಲ ಪ್ರಾಪ್ತಿಸಲಿ, ಹಾಕೋಪೆಸೆ ಹನ್ನೊಂದೆಸೆಯಾಗಿ ಮಾಪುತಿರಲಿ, ಮತ್ತೆಯೂ ಲಿಂಗಾರಾಧನೆಯ ಮಾಡುವೆ, ಜಂಗಮಾರಾಧನೆಯ ಮಾಡುವೆ, ಪ್ರಸಾದಕ್ಕೆ ತಪ್ಪೆ. ಇಂತಪ್ಪ ಭಾಷೆ ಕಿಂಚಿತು ಹುಸಿಯಾದರೆ ನೀನಂದೇ ಮೂಗ ಕೊಯ್ಯಿ ಕೂಡಲಸಂಗಮದೇವ.

೪. ತನುವ ಬೇಡಿದಡೀವೆ, ಮನವ ಬೇಡಿದಡೀವೆ, ಧನವ ಬೇಡಿದಡೀವೆ. ಜೀವು ಬೇಡಿಲಿ ಹಂದೇ. ಕಣ್ಣ ಬೇಡಿದಡೀವೆ, ತಲೆಯ ಬೇಡಿದಡೀವೆ. ಕೂಡಲಸಂಗಮದೇವ ನಿಮಗಿತ್ತು, ಶುದ್ಧನಾಗಿಪ್ಪೆ ನಿಮ್ಮ ಪುರಾತನರ ಮನೆಯಲ್ಲಿ.

೫. ನಾನು ಆರಂಭವ ಮಾಡುವೆನಯ್ಯ ಗುರುಪೂಜೆಗೆಂದು. ನಾನು ಬೆವಹಾರವ ಮಾಡುವೆನಯ್ಯ ಲಿಂಗಾರ್ಚನೆಗೆಂದು. ನಾನು ಪರಸೇವೆಯ ಮಾಡುವೆನಯ್ಯ, ಜಂಗಮದಾಸೋಹಕ್ಕೆಂದು. ನಾನಾವಾವ ಕರ್ಮಂಗಳ ಮಾಡಿದಡೆಯೂ, ಆ ಕರ್ಮ ಫಲಭೋಗವ ನೀ ಕೊಡುವೆ ಎಂಬುದ ನಾನು ಬಲ್ಲೆನು. ನೀ ಕೊಟ್ಟ ದ್ರವ್ಯವ ನಿಮಗಲ್ಲದೆ, ಮತ್ತೊಂದು ಕ್ರಿಯೆ ಮಾಡೆನು. ನಿಮ್ಮ ಸೊಮ್ಮು ನಿಮಗೆ ಸಲಿಸುವೆನು, ನಿಮ್ಮಾಣೆ ಕೂಡಲಸಂಗಮದೇವ.

೬. ಹೊತ್ತಾರೆ ಎದ್ದು, ಕಣ್ಣ ಹೊಸೆವುತ್ತ, ಎನ್ನ ಒಡಲಿಂಗೆ ಎನ್ನ ಒಡವೆಗೆ ಎನ್ನ ಮಡದಿ ಮಕ್ಕಳಿಗೆಂದು ಕುದಿದೆನಾದರೆ, ಎನ್ನ ಮನಕ್ಕೆ ಮನವೇ ಸಾಕ್ಷಿ. ಅಶನೇ ಶಯನೇ ಯಾನೇ ಸಂಪರ್ಕೇ ಸಹಭೋಜನೇ। ಸಂಚರಂತಿ ಮಹಾಘೋರೇ ನರಕೇ ಕಾಲಮಕ್ಷಯಂ॥ ಎಂಬ ಶೃತಿಯ ಬಸವಣ್ಣನೋದುವನು. ಭವಿಬಿಜ್ಜಳನ ಗದ್ದುಗೆಯ ಕೆಳಗೆ ಕುಳ್ಳಿರ್ದು ಓಲೈಸಿಹೆನೆಂದು ನುಡಿವರಯ್ಯ ಪ್ರಮಥರು. ಕೊಡುವೆನುತ್ತರವನವರಿಗೆ. ಕೂಡಲಮ್ಮೆ ಹೊಲೆಹೊಲೆಯರ ಮನೆಯ ಹೊಕ್ಕಾದರೆಯೂ ಸಲೆ ಕೈಕೂಲಿಯ ಮಾಡಿದರೆಯೂ, ನಿಮ್ಮ ನಿಲವಿಂಗೆ ಕುದಿವೆನಲ್ಲದೆ, ಎನ್ನ ಒಡಲವಸರಕ್ಕೆ ಕುದಿದೆನಾದರೆ, ತಲೆದಂಡ, ಕೂಡಲಸಂಗಮದೇವಾ.

೭. ದೇವದೇವ, ಬಿನ್ನಪವ ಅವಧಾರು. ವಿಪ್ರ ಮೊದಲು ಅಂತ್ಯಜಕಡೆಯಾಗಿ ಶಿವಭಕ್ತರಾದವರನೆಲ್ಲರನೊಂದೇ ಎಂಬೆ. ಹಾರುವ ಮೊದಲು ಶ್ವಪಚಕಡೆಯಾಗಿ, ಭವಿಯಾದವರನೊಂದೇ ಎಂಬೆ. ಈ ಹೀಗೆಂದು ನಂಬುವುದೆನ್ನ ಮನವು. ಈ ನುಡಿವ ನುಡಿಯೊಳಗೆಳ್ಳ ಮೊನೆಯಷ್ಟು ಸಂದೇಹವುಳ್ಳರೆ, ಹಲ್ಲುದೋರ ಮೂಗು ಕೊಯ್ಯಿ ಕೂಡಲಸಂಗಮದೇವ.

೮. ಒಲ್ಲೆನಯ್ಯಾ ಒಲ್ಲೆನಯ್ಯಾ ನಿಮ್ಮವರಲ್ಲದವರ ಒಲ್ಲೆನಯ್ಯ. ಜಗವೆಲ್ಲರಿಯಲು ಒಲ್ಲೆನಯ್ಯ ಒಲ್ಲೆನಯ್ಯ. ನೀ ಮುನಿದರೆ, ಮುನಿ. ಕೂಡಲಸಂಗಮದೇವ, ನಿಮ್ಮಾಣೆ ನಿಮ್ಮ ಪ್ರಮಥರಾಣೆ.

೯. ಆದಿಯಲಾಗಲಿ, ವೇದದಲಾಗಲಿ, ಶಾಸ್ತ್ರದಲಾಗಲಿ, ಸಮಯದಲಾಗಲಿ, ಎನ್ನವರೆನ್ನೆನು, ಎನ್ನವರೆನ್ನೆನು. ಎನ್ನವರೆಂದರೆ, ಸಂಗಾ ನಿಮ್ಮಲ್ಲಿಗೆ ದೂರ. ಎನ್ನವರಾದರೆ ಜನ್ಮಕ್ಕೆ ನಡೆವರೆ? ಎನ್ನವರಲ್ಲ, ಕೂಡಲಸಂಗಮದೇವ ನಿಮ್ಮಾಣೆ.

೧೦. ಅಣ್ಣಾತಮ್ಮ ಹೆತ್ತಪ್ಪ ಗೋತ್ರವಾದಡೇನು? ಲಿಂಗಸಾಹಿತ್ಯ ವಿಲ್ಲದವರ ಎನ್ನವರೆನ್ನೆನಯ್ಯಾ. ನಂಟು ಭಕ್ತಿ ನಾಯಕ ನರಕ ಕೂಡಲಸಂಗಮದೇವ.

೧೧. ಒಡೆಯರಿಲ್ಲದ ಮನೆಯ ತುಡುಗುಣಿ ನಾಯಿ ಹೊಗುವಂತೆ, ನೀನಿಲ್ಲದವರ ಮನೆಯನು ಹೊಗೆನು. ಸಂಗಯ್ಯ ಶ್ವಪಚೋಪಿಗಳಾಗಲಿ, ಕೂಡಲಸಂಗಯ್ಯ ನೀನಿದ್ದವನೇ ಕುಲಜನು.

೧೨. ಹೊನ್ನು ಹೆಣ್ಣು ಮಣ್ಣೆಂಬ ಕರ್ಮದ ಬಲೆಯಲ್ಲಿ ಸಿಲುಕಿ ವೃಥಾ ಬರುದೊರೆ ಹೋಹ ಕೆಡುಕ ಹಾರುವ ನಾನಲ್ಲ. ಹಾರುವೆನಯ್ಯ ಭಕ್ತರ ಬರವ ಗುಡಿಗಟ್ಟಿ. ಹಾರುವೆನಯ್ಯ, ಶರಣರ ಬರವ ಗುಡಿಗಟ್ಟಿ. ಕೂಡಲಸಂಗಮದೇವನು ವಿಪ್ರ ಕರ್ಮವ ಬಿಡಿಸಿ ಅಶುದ್ಧನ ಶುದ್ಧನ ಮಾಡಿದನಾಗಿ.

೧೩. ವೇದಕ್ಕೆ ಒರೆಯ ಕಟ್ಟುವೆ. ಶಾಸ್ತ್ರಕ್ಕೆ ನಿಗಳವನಿಕ್ಕುವೆ. ತರ್ಕದ ಬೆನ್ನಬಾರನೆತ್ತುವೆ. ಆಗಮದ ಮೂಗ ಕೊಯ್ವೆ ನೋಡಯ್ಯ. ಮಹಾದಾನಿ ಕೂಡಲಸಂಗಮದೇವ, ಮಾದರ ಚನ್ನಯ್ಯನ ಮನೆಯ ಮಗ ನಾನಯ್ಯ.

೧೪. ಆವ ಕುಲವಾದರೇನು, ಶಿವಲಿಂಗವಿದ್ದವನೇ ಕುಲಜನು. ಕುಲವನರಸುವರೆ ಶರಣರಲ್ಲಿ ಜಾತಿಸಂಕರನಾದ ಬಳಿಕ? ಶಿವೇಜಾತ ಕುಲೇ ಧರ್ಮ ಪೂರ್ವಜನ್ಮ ವಿವರ್ಜಿತಂ। ಉಮಾ ಮಾತಾಪಿತಾ ರುದ್ರ ಈಶ್ವರಃ ಕುಲಮೇವಚ ॥ ಎಂದುದಾಗಿ, ಒಕ್ಕುದ ಕೊಂಬೆನವರಲ್ಲಿ ಕೂಸ ಕೊಡುವೆ. ಕೂಡಲಸಂಗಮದೇವ ನಂಬುವೆ ನಿಮ್ಮ ಶರಣರನು.

೧೫. ಕಳ್ಳ, ಬಂದಿಕಾರ, ಹಾವಡಿಗ, ಹಾದರಿಗ, ಬಂಟನೋಲೆಯಕಾರನೆಂಡೆನಾದರೆ, ನೀ ಮುಂತಾಗಿ ಬಂದ ಭಕ್ತರ ನೀನೆಂದೆನ್ನದಿ

ರ್ದರೆ, ತರ್ದೇ ದ್ರೋಹ. ನಡೆನುಡಿ ಹುಸಿಯುಂಟಾದರೆ, ಕೂಡಲಸಂಗನ ತೋರಿದ ಚನ್ನಬಸವಣ್ಣನಾಣೆ.

೧೬. ಎಡದ ಕಯ್ಯಲಿ ಕತ್ತಿ, ಬಲದ ಕಯ್ಯಲಿ ಮಾಂಸ, ಬಾಯಲಿ ಸುರೆಯ ಗಡಿಗೆ, ಕೊರಳಲಿ ದೇವರಿರಲು ಅವರ ಲಿಂಗವೆಂಬೆ, ಸಂಗವೆಂಬೆ. ಕೂಡಲಸಂಗಮದೇವ ಅವರ ಮುಖಲಿಂಗಿಗಳೆಂಬೆನು.

೧೭. ಗುಮ್ಮಡಿಯಂತಪ್ಪ ತಾಯಿ ನೋಡೆನಗೆ. ಕಲಕೇತನಂತಪ್ಪ ತಂದೆ ನೋಡೆನಗೆ. ಮೋಟನಂತಪ್ಪ ಗಂಡ ನೋಡೆನಗೆ. ಮರಗಾಲಲಟ್ಟಿಟ್ಟ ಸದೆದು ನೋಡಯ್ಯ. ಇಂದೆನ್ನ ಒಗತನ ಹೋದರೆ, ಹೋಗಲಿ. ಮರಗಾಲ ಬಿಟ್ಟರೆ, ಕೂಡಲಸಂಗಾ ನಿಮ್ಮಾಣೆ.

೧೮ ತನುವ ಬಂದಲೆವರಯ್ಯ. ಎನ್ನ ಮನವ ಬಂದು ನೋಡುವರಯ್ಯ. ಎನ್ನ ಧನವ ಬಂದು ಸೂರೆಗೊಂಬರಯ್ಯ. ಜಂಗಮ ಅನವರತ. ಕೂಡಲಸಂಗಮದೇವ, ನಿಮ್ಮ ಬಯಕೆಯ ಭಂಡಾರಕ್ಕೆ ನಾನು ಶುದ್ಧನಯ್ಯ.

೧೯ ಒಡೆಯರೊಡವೆಯ ಕೊಂಡರೆ, ಕಳ್ಳಂಗಳಲಾಯಿತ್ತೆಂಬಗಾದೆ ಎನಗಾಯಿತ್ತಯ್ಯ. ಇಂದೆನ್ನ ವಧುವ, ನಾಳಿನ್ನ ಧನವ ನಾಡಿದೆನ್ನತನುವ ಬೇಡಿರೇಕಯ್ಯ? ಕೂಡಲಸಂಗಮದೇವ ಆನು ಮಾಡಿದುದಲ್ಲದೆ ಬಯಸಿದ ಬಯಕೆ ಸಲುವುದೇ ಅಯ್ಯ?

೨೦ ಕಲಿ ಕರುಳತಕ್ಕೈಸಿ, ಹರಿಯ ಬಲ್ಲನಲ್ಲದೆ, ಸಾಯಕಾದಿಸುವರೇ? ಎಡೆಗೋಲಸಿಕ್ಕುವರೆ? ದಾತಾರನಧೀನವಲ್ಲದೆ ಕೂಡಲಸಂಗಮದೇವ, ನೀ ಮಾಡಿದಂತಹುದಯ್ಯ. ತನುಮನಧನದಲ್ಲಿ ವಂಚನೆಯನು ಬಯಿಸಿದರೆಂತಹುದಯ್ಯ?

೨೧ ಬಾಲಭ್ಯಾಸವ ಮಾಡಹೋದರೆ, ಎನ್ನ ಸುರಿಗಿ ಎನ್ನ ನಟ್ಟಿತ್ತೆಂತಯ್ಯ. ಕಲಿಯೊಡನೆ ಶ್ರವವ ಮಾಡುವೆನು. ರಾಯರಾಜ ಗುರು ಜಗದ ಬಿನ್ನಾಣಿಯ ತೊಡಕ ಬಿಡಿಸಬಾರದು. ಸರಸದ ಮೇಲೆ ಹಿಡಿಯ ಹೋದರೆ ಚದುರಂಗದ ಮೇಲೆ ಮಸಿಯ ತೋರಿದ ಕೂಡಲಸಂಗಮದೇವಾ.

೨೨. ಸಮಚಿತ್ತವೆಂಬ ನೇಮದ ಹಲಗೆಯ ಹಿಡಿದು, ಶಿವಚಿತ್ತವೆಂಬ ಕೂರಲಗ ಕೊಂಡು ಶರಣಾರ್ಥಿ ಎಂಬ. ಶ್ರವಗಲಿತಡೆ, ಆಳುತ

ನಕ್ಕೆ ದೆಸೆಯುಪ್ಪೆ ನೋಡಾ. ಮಾರಾಂಕ ಜಂಗಮ ಮನೆಗೆ ಬಂದಲ್ಲಿ ಇದಿರೆತ್ತಿ ನಡೆವುದು ಕೂಡಲಸಂಗಮದೇವನನೊಲಿಸುವೊಡಿದು ಚಿನ್ಹ.

೨೩. ಆಟ್ಟಾಟಿಕೆಯ ಮಾತನಾಡಲದೇಕೋ? ಮುಟ್ಟಬಂದುದ ಕ್ಕಂಜಲದೇಕೋ? ಕಾದಿದಲ್ಲದೆ ಮಾಣೆನು. ಓಡಿದರೆ ಭಂಗ ಹಿಂಗದಾಗಿ ಕೂಡಲಸಂಗಮದೇವ, ಎನ್ನ ಭಂಗ ನಿಮ್ಮದಾಗಿ.

೨೪. ಲಿಂಗಕ್ಕಲ್ಲದೆ ಮಾಡೆನೀ ಮನವನು. ಜಂಗಮಕ್ಕಲ್ಲದೆ ಮಾಡೆ ನೀಧನವನು. ಪ್ರಸಾದಕ್ಕಲ್ಲದೆ ಮಾಡೆನೀ ತನುವನು. ಲಿಂಗಜಂಗಮದ ಪ್ರಸಾವಕ್ಕಲ್ಲದೆ ಬಾಯ್ದೆರೆಯದೆಂಬುದೆನ್ನ ಭಾಷೆ. ಅನರ್ಪಿತವಾದರೆ, ತಪ್ಪೆನ್ನದು ಮೂಗ ಕೊಯಿ ಕೂಡಲಸಂಗಮದೇವ.

## ಮಾಹೇಶ್ವರನ ಪ್ರಸಾದಿ.

೧. ಅಂಕ ಕಂಡ ಕೋಲಾಸೆ ಮತ್ತೇಕಯ್ಯ? ಲೆಂಕ ಕಂಡ ಪ್ರಾಣದಾಸೆ ಮತ್ತೇಕಯ್ಯ? ಭಕ್ತ ಕಂಡ ತನುಮನಧನದಾಸೆ ಮತ್ತೇ ಕಯ್ಯ? ನಿಮ್ಮಂಕೆಗೆ ಝುಂಕೆಗೆ ಶಂಕಿತನಾದರೆ, ಎನ್ನ ಲೆಂಕತನಕೆ ಹಾನಿ ಕೂಡಲಸಂಗಮದೇವ.

೨. ನೀನಿರಿಸಿದ ಮನದಲ್ಲಿ ನಾನಂಜೆನಯ್ಯ, ಮನವು ಮಹಾ ಘನಕ್ಕೆ ಶರಣು ಗತಿವೊಕ್ಕುದಾಗಿ. ನೀನಿರಿಸಿಪ ಧನದಲ್ಲಿ ನಾನಂಜೆನಯ್ಯ, ಧನವು ಸತಿಸುತ ಮಾತಾಪಿತರಿಗೆ ಹೋಗದಾಗಿ. ನೀನಿರಿಸಿದ ತನುವಿ ನಲ್ಲಿ ನಾನಂಜೆನಯ್ಯಾ, ತನುವು ಸರ್ವಾರ್ಪಿತದಲ್ಲಿ, ನಿಯತ ಪ್ರಸಾಪ ಭೋಗಿಯಾಗಿ. ಇದು ಕಾರಣ ವೀರಧೀರ ಸಮಗ್ರನಾಗಿ, ನಿಮಗಾನಂಜೆ ಕೂಡಲಸಂಗಮದೇವ.

೩. ಹಲ್ಲು ಹತ್ತಿ, ನಾಲಿಗೆ ಹೊರಳದಿದ್ದಲ್ಲಿ, ಮನವೆರಡಾದರೆ, ಆಣೆ ನಿಮ್ಮಾಣೆ. ಮಾಡುವ ನೇಮಕ್ಕೆ ಫಲವಿಲ್ಲದಿದ್ದರೆ ಆಣೆ ನಿಮ್ಮಾಣೆ. ಕೂಡಲಸಂಗಮದೇವ ಎನ್ನ ಮನವ ನೋಡಲೆಂದಟ್ಟಿದರೆ, ಪ್ರಸಾದವ ಲ್ಲದೆ ಕೊಂಡರೆ ಆಣೆ ನಿಮ್ಮಾಣೆ.

೪. ಹೊಕ್ಕಲ್ಲಿ ಹೊಕ್ಕು, ನಿಮ್ಮೊಕ್ಕುದನುಂಬವನ ಕುಲವೇನೋ ದೇವ? ನೀನೊಲಿದವನ, ಸ್ವಾಮಿ, ನೀ ಹಿಡಿದವನ ಕುಲವೇನೋ? ಕುಲಕ್ಕೆ ತಿಲಕ ನಮ್ಮ ಮಾದರ ಚನ್ನಯ್ಯ ನಿಮ್ಮಿಂದಧಿಕ ಕೂಡಲಸಂ ಗಮದೇವ.

ರ್ದರೆ, ಅದೇ ದ್ರೋಹ. ನಡೆನುಡಿ ಹುಸಿಯುಂಟಾದರೆ, ಕೂಡಲಸಂಗನ ತೋರಿದ ಚನ್ನಬಸವಣ್ಣನಾಣೆ.

೧೬. ಎಡದ ಕಯ್ಯಲಿ ಕತ್ತಿ, ಬಲದ ಕಯ್ಯಲಿ ಮಾಂಸ, ಬಾಯಲಿ ಸುರೆಯ ಗಡಿಗೆ, ಕೊರಳಲಿ ದೇವರಿರಲು ಅವರ ಲಿಂಗವೆಂಬೆ, ಸಂಗನೆಂಬೆ. ಕೂಡಲಸಂಗಮದೇವ ಅವರ ಮುಖಲಿಂಗಿಗಳೆಂಬೆನು.

೧೭. ಗುಮ್ಮಡಿಯಂತಪ್ಪ ತಾಯಿ ನೋಡೆನಗೆ. ಕಲಕೇತನಂತಪ್ಪ ತಂದೆ ನೋಡೆನಗೆ. ಮೋಟನಂತಪ್ಪ ಗಂಡ ನೋಡೆನಗೆ. ಮರಗಾಲಲಟ್ಟುಟ್ಟಿ ಪದೆದು ನೋಡಯ್ಯ. ಇಂದೆನ್ನ ಒಗತನ ಹೋದರೆ, ಹೋಗಲಿ. ಮರಗಾಲ ಬಿಟ್ಟರೆ, ಕೂಡಲಸಂಗಾ ನಿಮ್ಮಾಣೆ.

೧೮ ತನುವ ಬಂದಲೆವರಯ್ಯ. ಎನ್ನ ಮನವ ಬಂದು ನೋಡುವರಯ್ಯ. ಎನ್ನ ಧನವ ಬಂದು ಸೂರೆಗೊಂಬರಯ್ಯ. ಜಂಗಮ ಅನವರತ. ಕೂಡಲಸಂಗಮದೇವ, ನಿಮ್ಮ ಬಯಕೆಯ ಭಂಡಾರಕ್ಕೆ ನಾನು ಶುದ್ಧನಯ್ಯ.

೧೯ ಒಡೆಯರೊಡವೆಯ ಕೊಂಡರೆ, ಕಳ್ಳಂಗಳಲಾಯಿತ್ತೆಂಬಗಾದೆ ಎನಗಾಯಿತ್ತಯ್ಯ. ಇಂದೆನ್ನ ವಧುವ, ನಾಳೆನ್ನ ಧನವ ನಾಡಿದೆನ್ನತನುವ ಬೇಡಿರೇಕಯ್ಯ? ಕೂಡಲಸಂಗಮದೇವ ಆನು ಮಾಡಿದುದಲ್ಲದೆ ಬಯಸಿದ ಬಯಕೆ ಸಲುವುದೇ ಅಯ್ಯ?

೨೦ ಕಲಿ ಕರುಳತರ್ಕೈಸಿ, ಹರಿಯ ಬಲ್ಲನಲ್ಲದೆ, ಸಾಯಕಾದಿಸುವರೇ? ಎಡೆಗೋಲನಿಕ್ಕುವರೆ? ದಾತಾರನಧೀನವಲ್ಲದೆ ಕೂಡಲಸಂಗಮದೇವ, ನೀ ಮಾಡಿದಂತಹುದಯ್ಯ. ತನುಮನಧನದಲ್ಲಿ ವಂಚನೆಯನು ಬಯಿಸಿದರೆಂತಹುದಯ್ಯ?

೨೧ ಬಾಲಭ್ಯಾಸವ ಮಾಡಹೋದರೆ, ಎನ್ನ ಸುರಿಗಿ ಎನ್ನ ನಟ್ಟಿತ್ತೆಂತಯ್ಯ. ಕಲಿಯೊಡನೆ ಶ್ರವನ ಮಾಡುವೆನು. ರಾಯರಾಜ ಗುರುಜಗದ ಬಿನ್ನಾಣಿಯ ತೊಡಕ ಬಿಡಿಸಬಾರದು. ಸರಸದ ಮೇಲೆ ಹಿಡಿಯಹೋದರೆ ಚದುರಂಗದ ಮೇಲೆ ಮಸಿಯ ತೋರಿದ ಕೂಡಲಸಂಗಮದೇವಾ.

೨೨. ಸಮುಚಿತ್ತವೆಂಬ ನೇಮದ ಹಲಗೆಯ ಹಿಡಿದು, ಶಿವಚಿತ್ತವೆಂಬ ಕೂರಲಗ ಕೊಂಡು ಶರಣಾರ್ಥಿ ಎಂಬ. ಶ್ರವಗಲಿತಡೆ, ಆಳುತ

ನಕ್ಕೆ ದೆಸೆಯುಪ್ಪೆ ನೋಡಾ. ಮಾರಾಂಕ ಜಂಗಮ ಮನೆಗೆ ಬಂದಲ್ಲಿ ಇದಿರೆತ್ತಿ ನಡೆವುದು ಕೂಡಲಸಂಗಮದೇವನನೊಲಿಸುವೊಡಿದು ಚಿನ್ಹ.

೨೩. ಆಟ್ಟಾಟಿಕೆಯ ಮಾತನಾಡಲದೇಕೋ? ಮುಟ್ಟಿಬಂದುದ ಕ್ಕಂಜಲದೇಕೋ? ಕಾದಿದಲ್ಲದೆ ಮಾಣೆನು. ಓಡಿದರೆ ಭಂಗ ಹಿಂಗದಾಗಿ ಕೂಡಲಸಂಗಮದೇವ, ಎನ್ನ ಭಂಗ ನಿಮ್ಮದಾಗಿ.

೨೪. ಲಿಂಗಕ್ಕಲ್ಲದೆ ಮಾಡೆನೀ ಮನವನು. ಜಂಗಮಕ್ಕಲ್ಲದೆ ಮಾಡೆ ನೀಧನವನು. ಪ್ರಸಾದಕ್ಕಲ್ಲದೆ ಮಾಡೆನೀ ತನುವನು. ಲಿಂಗಜಂಗಮದ ಪ್ರಸಾವಕ್ಕಲ್ಲದೆ ಬಾಯ್ದೆರೆಯದೆಂಬುದೆನ್ನ ಭಾಷೆ. ಅನರ್ಪಿತವಾದರೆ, ತಪ್ಪೆನ್ನದು ಮೂಗ ಕೊಯಿ ಕೂಡಲಸಂಗಮದೇವ.

## ಮಾಹೇಶ್ವರನ ಪ್ರಸಾದಿ.

೧. ಅಂಕ ಕಂಡ ಕೋಲಾಸೆ ಮತ್ತೇಕಯ್ಯ? ಲೆಂಕ ಕಂಡ ಪ್ರಾಣದಾಸೆ ಮತ್ತೇಕಯ್ಯ? ಭಕ್ತ ಕಂಡ ತನುಮನಧನದಾಸೆ ಮತ್ತೇಕಯ್ಯ? ನಿಮ್ಮಂಕೆಗೆ ಝಂಕೆಗೆ ಶಂಕಿತನಾದರೆ, ಎನ್ನ ಲೆಂಕತನಕೆ ಹಾನಿ ಕೂಡಲಸಂಗಮದೇವ.

೨. ನೀನಿರಿಸಿದ ಮನದಲ್ಲಿ ನಾನಂಜೆನಯ್ಯ, ಮನವು ಮಹಾ ಘನಕ್ಕೆ ಶರಣು ಗತಿವೊಕ್ಕುದಾಗಿ. ನೀನಿರಿಸಿಪ ಧನದಲ್ಲಿ ನಾನಂಜೆನಯ್ಯ, ಧನವು ಸತಿಸುತ ಮಾತಾಪಿತರಿಗೆ ಹೋಗದಾಗಿ. ನೀನಿರಿಸಿದ ತನುವಿನಲ್ಲಿ ನಾನಂಜೆನಯ್ಯಾ, ತನುವು ಸರ್ವಾರ್ಪಿತದಲ್ಲಿ, ನಿಯತ ಪ್ರಸಾದ ಭೋಗಿಯಾಗಿ. ಇದು ಕಾರಣ ವೀರಧೀರ ಸಮಗ್ರನಾಗಿ, ನಿಮಗಾನಂಜೆ ಕೂಡಲಸಂಗಮದೇವ.

೩. ಹಲ್ಲು ಹತ್ತಿ, ನಾಲಿಗೆ ಹೊರಳದಿದ್ದಲ್ಲಿ, ಮನವೆರಡಾದರೆ, ಆಣೆ ನಿಮ್ಮಾಣೆ. ಮಾಡುವ ನೇಮಕ್ಕೆ ಫಲವಿಲ್ಲದಿದ್ದರೆ ಆಣೆ ನಿಮ್ಮಾಣೆ. ಕೂಡಲಸಂಗಮದೇವ ಎನ್ನ ಮನವ ನೋಡಲೆಂದಟ್ಟಿದರೆ, ಪ್ರಸಾದವಲ್ಲದೆ ಕೊಂಡರೆ ಆಣೆ ನಿಮ್ಮಾಣೆ.

೪. ಹೊಕ್ಕಲ್ಲಿ ಹೊಕ್ಕು, ನಿಮ್ಮೊಕ್ಕುದನುಂಬವನ ಕುಲವೇನೋ ದೇವ? ನೀನೊಲಿದವನ, ಸ್ವಾಮಿ, ನೀ ಹಿಡಿದವನ ಕುಲವೇನೋ? ಕುಲಕ್ಕೆ ತಿಲಕ ನಮ್ಮ ಮಾದರ ಚನ್ನಯ್ಯ ನಿಮ್ಮಿಂದಧಿಕ ಕೂಡಲಸಂಗಮದೇವ.

೫. ಹುಟ್ಟಿದ ಮಕ್ಕಳೆಲ್ಲ ಅರ್ಥಪ್ರಾಣಾಭಿಮಾನಕ್ಕೆ ಒಡೆಯರಾದ ಪರಿಯ ನೋಡಾ. ಅಟ್ಟುಡಿಗೆಯ ವಿಷವನು ನಿಮಗೆ ಕೊಟ್ಟಲ್ಲದೆ ಉಣ್ಣೆನೆಂಬ ಭಾಷೆ. ಕೂಡಲಸಂಗಮದೇವಯ್ಯ ನಿನಗೆಂದು ಅಟ್ಟ ಅಡಿಗೆಯ ನೀಡ ಕಲಿಸಿದಾತ ಕೆಂಭಾವಿಯ ಭೋಗಯ್ಯ.

೬. ಅಂಗದ ಮೇಲಣ ಲಿಂಗ ಹಿಂಗಿ, ಬಂದ ಸುಖನಾರಿಗರ್ಪಿಸುವೆ? ಹಿಂಗಲಾಗದು, ಭಕ್ತಿ ಪಥಕ್ಕೆ ಸಲ್ಲದಾಗಿ. ಹಿಂಗಲಾಗದು ಶರಣ ಪಥಕ್ಕೆ ಸಲ್ಲದಾಗಿ. ಕೂಡಲಸಂಗಮದೇವರ ಹಿಂಗಿ ನುಂಗಿದುಗುಳು ಕಿಲ್ಬಿಷ.

೭. ಬತ್ತೀಸಾಯುಧದಲ್ಲಿ ಅಭ್ಯಾಸವ ಮಾಡಿದರೇನು? ಹಗೆಯ ಕೊಲುವರೆ ಒಂದಲಗು ಸಾಲದೆ? ಲಿಂಗವ ಗೆಲುವರೆ, ಶರಣಸತಿ ಲಿಂಗ ಪತಿ ಎಂಬಲಗು ಸಾಲದೆ? ಎನಗೆ ನಿನಗೆ ಜಂಗಮಪ್ರಸಾದವೆಂಬಲಗು ಸಾಲದೆ ಕೂಡಲಸಂಗಮದೇವ?

## ಮಾಹೇಶ್ವರನ ಪ್ರಾಣಲಿಂಗ.

೧. ಕೊಲ್ಲೆನಯ್ಯ ಪ್ರಾಣಿಗಳ, ಮೆಲ್ಲೆನಯ್ಯ ಬಾಯಿಚ್ಛೆಗೆ. ಒಲ್ಲೆನಯ್ಯ ಪರಸತಿಯರ ಸಂಗವ. ಒಲ್ಲೆನಯ್ಯ ಮುಂದೆ ತೊಡಕುಂಟೆಂಬುದ. ಬಳ್ಳದ ಬಾಯಂತೆ ಒಂದೆ ಮನವ ಮಾಡಿ, ನಿಲ್ಲೆಂದು ನಿಲಿಸಯ್ಯ ಕೂಡಲಸಂಗಮದೇವ.

೨. ಆನೆ ಅಂಕುಶಕ್ಕಲ್ಲದೆ ಅಂಜುವುದೇ ಅಯ್ಯ, ಮಾಣವೆ ಸಿಂಹನ ನಖವೆಂದು ಅಂಜುವುದಲ್ಲದೆ? ಆನೀ ಬಿಜ್ಜಳಂಗಂಜುವೆನೆ ಅಯ್ಯ? ಕೂಡಲಸಂಗಮದೇವ, ನೀನು ಸರ್ವಜೀವ ದಯಾಪಾರಿಯಾದ ಕಾರಣ, ನಿಮಗಂಜುವೆನಲ್ಲದೆ?

೩. ಬಂದಿಹನೆಂದು, ಬಾರನೆ ಇದ್ದರೆ ಬಟ್ಟೆಗಳ ನೋಡುತ್ತ ಇದ್ದೆನಯ್ಯ. ಇನ್ನಾರನಟ್ಟುವೆ? ಇನ್ನಾರನಟ್ಟುವೆ? ಇನ್ನಾರ ಪಾದವ ಹಿಡಿವೆನಯ್ಯ? ಕೂಡಲಸಂಗನ ಶರಣರು ಬಾರದಿದ್ದರೆ, ಅಟ್ಟುವೆನೆನ್ನ ಪ್ರಾಣವನು.

# ಮಾಹೇಶ್ವರನ ಶರಣ.

೧. ಅರಸರು ಮಂಚಕ್ಕೆ ಬರಿಸಿ ಎನ್ನ ಬೆರಿಸಿದ ಬಳಿಕ ಆನಂಜು ವಳೇ? ಆನು ಸಿರಿಯಕ್ಕನೆ. ಪರುಷ ಮುಟ್ಟಿದ ಬಳಿಕ, ಲೋಹವೇ? ಕೂಡಲಸಂಗಮದೇವ ಎನ್ನನೊಲ್ಲದಡಾನು ಬದುಕುವೆನೆ?

೨. ಎಲ್ಲಿ ಹೊಕ್ಕಲ್ಲಿ ನಿನ್ನ ವಿಕಾರವ ಮಾಣೆ. ಇದೊಂದು ಗರುವ ತನವೇ? ದಾಸನ ವಸ್ತ್ರವ ಬೇಡುವುದೊಂದು ಗರುವತನವೆ? ಸಿರಿಯಾಳನ ಮಗನ ಬೇಡುವುದೊಂದು ಗರುವತನವೇ? ಕೋಡಗನ ಹುಲ್ಲಲ್ಲಿ ಮುಸುಕಿ ಕೂಡಲಸಂಗಮದೇವ ನಿಮ್ಮ ಪರಿ.

೩. ಸಿರಿಯಾಳನ ಮಗನ ಬಾಣಸವ ಮಾಡಿಸಿ, ಉಣಲೊಲ್ಲದೆ ಕಾಡಿದೆ. ಚೋಳನ ಮನೆಯಲುಣಲೊಲ್ಲದೆ, ಚನ್ನನ ಮನೆಯಲುಂಡೆ ಒಬ್ಬ ರಿಗೊಂದುಪರಿಯ ಮಾಡಿದೆ, ಕೂಡಲಸಂಗಮದೇವ.

೪. ಒಬ್ಬನ ಮನೆಯಲುಂಡು ಹೊತ್ತುಗಳೆದೆ. ಒಬ್ಬನ ಮನೆಯ ಲುಡಲೊಂದು ಗಳಿಸಿದೆ. ಗರ್ವಬೇಡ, ಬೇಡ ನಿನಗೆ. ಚನ್ನಯ್ಯನ ಮನೆ ಯಲಂಬಲಿಯನುಂಡು ಬದುಕಿದೆ. ಗರ್ವ ಬೇಡ, ಬೇಡ. ಕೂಡಲಸಂ ಗಯ್ಯ ಸಿರಿಯಾಳನಿಂದ ಮಾನಿಸ ಲೋಕವ ಕಂಡೆ.

೫. ಹರಿಯಜ ಮುನಿಗಳೆಲ್ಲರೂ ನಿಚ್ಚ ನಿಮ್ಮ ಬಾಗಿಲ ಕಾಯ್ದಿ ಹರು ಏನು ಕಾರಣ? ಬಾಣನ ಬಾಗಿಲ ಕಾಯ್ದಿರಿ. ಡಿಂಗರಿಗನ ಮನೆಗೆ ಅಂಗಜಾಹವಕ್ಕೆ ಹೋಗಿ ಇದ್ದವರೊಳರೆ ಕೂಡಲಸಂಗಮದೇವ?

೬. ಜಗವಗಲ ಮುಗಿಲಗಲ ಮಿಗೆಯಗಲ ನಿಮ್ಮಗಲ ಪಾತಾಳ ದಿಂದತ್ತತ್ತ ನಿಮ್ಮ ಶ್ರೀ ಚರಣ. ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀ ಮುಕುಟ. ಅಗಮ್ಯ ಅಪ್ರಮಾಣ ಅಗೋಚರ ಅಪ್ರತಿಮ ಲಿಂಗವೆ, ಕೂಡಲಸಂಗಮ ದೇವಯ್ಯ ಎನ್ನ ಕರಸ್ಥಲಕ್ಕೆ ಬಂದು ಚುಳುಕಾದಿರಯ್ಯ!

೭. ಗೋತ್ರ ನಾಮವ ಬೆಸಗೊಂಡರೆ, ಮಾತ ನೂಂಕದೆ ಸುಮ್ಮ ನಿದ್ದಿರಿದೇಕಯ್ಯ? ತಲೆಯ ಕುತ್ತಿ, ನೆಲನ ಬರೆವುತ್ತಿದ್ದಿರಿದೇನಯ್ಯ? ಗೋತ್ರ ಮಾದರ ಚನ್ನಯ್ಯ, ಡೋಹರ ಕಕ್ಕಯ್ಯನೆಂಬುದೇನು ಕೂಡಲ ಸಂಗಯ್ಯ?

೮. ನಿಷ್ಠೆಯಿಂದ ಲಿಂಗವ ಪೂಜಿಸಿ, ಮತ್ತೊಂದು ಪಥವನರಿಯದ ಶರಣರು ಸರ್ಪನ ಹೆಡೆಯ ಮಾಣಿಕದಂತಿಪ್ಪರು, ಭೂಷಣರಾಗಿ. ದರ್ಪಣದೊಳಗಣ ಪ್ರತಿಬಿಂಬದಂತೆ ಹಿಂಗದಿಪ್ಪರು, ಕೂಡಲಸಂಗಮದೇವ, ನಿಮ್ಮ ಶರಣರು.

೯. ಶಿವಲೋಕಕ್ಕೆ ಸರಿ ಜೇರೆ ಲೋಕವಿಲ್ಲ. ಶಿವಮಂತ್ರಕ್ಕೆ ಸರಿ ಬೇರೆ ಮಂತ್ರವಿಲ್ಲ. ಜಗಕ್ಕೆ ಇಕ್ಕಿದ ಮುಂಡಿಗೆಯ ನೆತ್ತಿಕೊಳ್ಳಿ, ಕೂಡಲ ಸಂಗಯ್ಯನೊಬ್ಬನೇ ದೈವವೆಂದು.

೧೦. ಈಶ್ವರ ಸದ್ಭಾವೇ ಕಿಂಪ್ರಮಾಣಮೆಂಬ ಮೀಮಾಂಸಕನ ಮೂಗಿನ ಕೊನೆಯನು ವಿಶ್ವತೋ ಚಕ್ಷುರುತ, ವಿಶ್ವತೋ ಮುಖ, ವಿಶ್ವತೋ ಬಾಹುರುತ, ವಿಶ್ವತಃಸ್ಯಾತ್ ಸ ಬಾಹುಭ್ಯಾಂ ದಮತಿ ಸಂಪದ ದ್ಯಾವಾ ಭೂಮಿಜನಯಂ ದೇವಯೇಕಏವ ಎಂಬ ಸುರಿಗಿಯಲಿ ಅರಿದು, ವೈಶೇಷಿಕವೆಂಬ ಇಟ್ಟಿಗೆಯಲೊರಿಸಿ, ಕೂಡಲಸಂಗಯ್ಯನೆಂಬ ಕನ್ನಡಿಯ ತೋರುವೆನು.

೧೧. ಪಂಚ ಬ್ರಹ್ಮವ ಕೆಡಿಸಿತ್ತು, ಪ್ರಣವ ಮಂತ್ರವ ನೀಡಾಡಿತ್ತಲ್ಲಾ. ಕರ್ಮಾಂಗಳನೆ ಕಳೆಯಿತ್ತು. ಕ್ರಿಯಗಳನೆ ಮೀರಿತ್ತಲ್ಲಾ. ಆಗಮದ ಹಲ್ಲನೆ ಕಳೆಯಿತ್ತು ಕೂಡಲಸಂಗಯ್ಯನ ಭಕ್ತಿಗಜ ಹೋ.

೧೨. ವೇದನಡ ನಡುಗಿತ್ತು. ಶಾಸ್ತ್ರವಗಲಿ ಕೆಲಕ್ಕೆ ಸಾರಿದುವಯ್ಯ. ತರ್ಕ ತರ್ಕಿಸಲರಿಯದೆ ಮೂಗುವಟ್ಟಿದ್ದಿತಯ್ಯ. ಆಗಮ ಹೊರತೊಲಗಿ ಅಗಲಿದ್ದುತಯ್ಯ. ನಮ್ಮ ಕೂಡಲಸಂಗಯ್ಯನು ಚನ್ನಯ್ಯನ ಮನೆಯಲುಂಡ ಕಾರಣ.

೧೩. ಚಿಕ್ಕದೊಂದು ಹೊತ್ತಿಗೆ, ಬೆನಕನ ಕರಡಿಗೆಯಯ್ಯ! ನೀಡುಂಡುಟ್ಟ ಗೊರವನಯ್ಯ! ಪುಣ್ಯವೇನಾದರಾಗಲಿ, ಥಕ್ಕೆಯ ಮೇಲೆ ಅಕ್ಕಿಯ ತಳೆದೆನು. ನಮ್ಮ ಕೂಡಲಸಂಗಮದೇವನಲ್ಲದೆ ಅನ್ಯ ದೈವ ಉಂಟೆನ್ನದಿರು ಕಂಡೆಯಾ.

೧೪. ನೀನಲ್ಲದನ್ಯ ದೈವ ಉಂಟೆಂಬವನ ಬಾಯ ಕೆನ್ನೆವಾರೆ ಸೀಳದಲ್ಲದೆ, ಎನ್ನ ಮುನಿಸು ಹೋಗದಯ್ಯ. ಎನ್ನ ಕೋಪವಡಗದಯ್ಯ. ಎನ್ನ ಬಿನ್ನಪವನವಧರಸು ಕೂಡಲಸಂಗಮದೇವ.

೧೫. ಆರು ಮುನಿದು ಎಮ್ಮನೇನ ಮಾಡುವರು? ಊರು ಮುನಿದು ಎಮ್ಮನೆಂತು ಮಾಡುವರು? ನಮ್ಮ ಕುನ್ನಿಗೆ ಕೂಸ ಕೊಡಬೇಡ. ನಮ್ಮ ಸೊಣಗಂಗೆ ತಳಿಗೆಯಲಿಕ್ಕ ಬೇಡ. ಆನೆಯ ಮೇಲೆ ಹೋಹವನ ಶ್ವಾನ ಕಚ್ಚ ಬಲ್ಲುದೆ, ನಮಗೆ ನಮ್ಮ ಕೂಡಲಸಂಗಯ್ಯನುಳ್ಳನ್ನಕ್ಕ?

೧೬. ನ್ಯಾಯ ನಿಷ್ಠುರಿ, ದಾಕ್ಷಿಣ್ಯಪರ ನಾನಲ್ಲ. ಲೋಕವಿರೋಧಿ ಶರಣನಾರಿಗಂಜುವನಲ್ಲ. ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ.

೧೭. ಊರ ಮುಂದೆ ಹಾಲಹಳ್ಳ ಹರಿಯುತ್ತಿರಲಿ, ಒರೆಯಾವಿನ ಬೆನ್ನ ಹರಿಯಲದೇಕಯ್ಯ? ಲಜ್ಜೆಗೆಡಲೇಕೆ? ನಾಣುಗೆಡಲೇಕೆ? ಕೂಡ ಲಸಂಗಮದೇವಯ್ಯನುಳ್ಳನ್ನಕ್ಕ ಬಿಜ್ಜಳನ ಭಂಡಾರವೆನಗೇಕಯ್ಯ?

೧೮. ಹೋಗ ಬಿಟ್ಟು, ಮರಳಿ ಹಿಂದೆ ನೋಡಿ, ಮತ್ತಾಗಬೇ ಕೆಂಬ ಸಂದೇಹವುಳ್ಳನ್ನಕ್ಕ, ಅದೇ ಪರದಾರ, ನಾಯಕ ನರಕ ತಪ್ಪದು. ಅನ್ಯ ವಧುವೆಂಬುದು ನಿಮ್ಮ ರಾಣಿವಾಸ, ಇದೇ ದಿಬ್ಯ, ಕೂಡಲಸಂಗಮ ದೇವ.

೧೯. ಕಂಡುದಕ್ಕೆಳಸೆನೆನ್ನ ಮನದಲ್ಲಿ. ನೋಡಿ ಸೋಲೆನೆನ್ನ ಕಂಗ ಳಲ್ಲಿ. ಆಡಿ ಹುಸಿಯೆನೆನ್ನ ಜಿಹ್ವೆಯಲ್ಲಿ. ಕೂಡಲಸಂಗಮದೇವ, ನಿಮ್ಮ ಶರಣನ ಪರಿ ಇಂತುಟಯ್ಯ.

೨೦. ಆಪ್ಯಾಯನಕ್ಕೆ ನೀಡುವೆ. ಲಾಂಛನಕ್ಕೆ ಶರಣೆಂಬೆ. ಲಾಂಛ ನಕ್ಕೆ ತಕ್ಕ ಆಚಾರವಿಲ್ಲದಿದ್ದರೆ, ಕೂಡಲಸಂಗಮದೇವ ನೀ ಸಾಕ್ಷಿಯಾಗಿ ಛೀ ಎಂಬೆ.

೨೧. ಮಾಡುವ ನೀಡುವ ಭಕ್ತನ ಕಂಡರೆ, ನಿಧಿನಿಧಾನವ ಕಂಡಂ ತಾಯಿತ್ತು. ಪಾದೋದಕ ಪ್ರಸಾದ ಜಿಹ್ವೆಯ ಕಂಡರೆ, ಹೋದ ಪ್ರಾಣ ಬಂದಂತಾಯಿತ್ತು. ಅನ್ಯರ ಮನೆಗೆ ಹೋಗಿ, ತನ್ನ ಉದರವ ಹೊರೆ ಯದ ಅಚ್ಚ ಶರಣರ ಕಂಡರೆ, ನಿಶ್ಚಯವಾಗಿ ಕೂಡಲಸಂಗಯ್ಯನೆಂಬೆ.

೨೨. ಗುರು ಭಕ್ತಿಯ ಮಾಡ ಬಹುದಲ್ಲದೆ, ಲಿಂಗ ಭಕ್ತಿಯ ಮಾಡ ಬಾರದು. ಲಿಂಗ ಭಕ್ತಿಯ ಮಾಡಬಹುದಲ್ಲದೆ; ಜಂಗಮಭಕ್ತಿಯ ಮಾಡ ಬಾರದು. ಜಂಗಮ ಭಕ್ತಿಯ ಮಾಡಬಹುದಲ್ಲದೆ, ಸಮಯ ಭಕ್ತಿಯ ಮಾಡಬಾರದು. ಸಮಯ ಭಕ್ತಿಯ ಮಾಡಬಹುದಲ್ಲದೆ, ಸಮಯಸಂ ತೋಷವ ಮಾಡಬಾರದು. ಇವೆಲ್ಲವ ಮಾಡಬಹುದಲ್ಲದೆ, ತನ್ನ ತಾನ

ರಿಯಬಾರದು. ತನ್ನ ತಾನರಿದೆನೆಂಬ ಅಹಂಕಾರವುಳ್ಳರೆ, ನಿಮ್ಮವರಿಗೆ ದೂರ. ಎಲೆ ದೇವಾ ಅನ್ಯಕ್ಕೆ ಆಸೆಮಾಡಿದೆನಾದರೆ, ನಿಮ್ಮಾಣೆ, ನಿಮ್ಮ ಪುರಾತರಾಣೆ ಕೂಡಲಸಂಗಮದೇವ.

೨೩. ದಾಸನಂತೆ ತವನಿಧಿಯ ಬೇಡುವನಲ್ಲ. ಚೋಳನಂತೆ ಹೊನ್ನ ಮಳೆಯ ಕರೆಸೆಂಬುವನಲ್ಲ. ಅಂಜದಿರು, ಅಂಜದಿರು. ಅವರಂದವ ನಾನಲ್ಲ. ಎನ್ನ ತಂದೆ ಕೂಡಲಸಂಗಮದೇವ ಸದ್ಭಕ್ತಿಯನೆ ಕರುಣಿಸೆನಗೆ.

೨೪. ಲಿಂಗದಲ್ಲಿ ಸಮ್ಯಕ್ಕರು, ಲಿಂಗದಲ್ಲಿ ಸಮರ್ಥರು, ಲಿಂಗದಲ್ಲಿ ಸೊಮ್ಮುಸಂಬಂಧವನರಿತ ಸ್ವಾಮಿ ಭೃತ್ಯರೆಲ್ಲರು ನಿಮ್ಮ ಬೇಡಿನಂಜದಿರಿ. ಎನಗೆ ಮರ್ತ್ಯಲೋಕದ ಮಹಾಗಣಂಗಳುಂಟು. ಇದು ಕಾರಣ ಕೂಡಲಸಂಗಮದೇವರ ಲೋಕವ ಹಂಚಿಕೊಳ್ಳಿ ನಿಮ ನಿಮಗೆ.

## ಮಹೇಶ್ವರನ ಐಕ್ಯ.

೧. ಅಂದಂದಿನ ಹೊಂದಿಗೆಯ ಬಿಂದುಮಾತ್ರದಲಾದ ಅಂದವ ಕೆಡಿಸಲರಿಯದ ಅಂಧಕರ ನೋಡಾ. ಸಮರಸವಿಲ್ಲದೆ ನೆರಹಿ ಮಾಡಿ ಭಕ್ತರಾದಿಹೆವೆಂಬವರನೇನೆಂಬೆ? ಆಚಾರ ವಂಚಕರ ಎನಗೆ ತೋರದಿರಾ, ಕೂಡಲಸಂಗಮದೇವ, ನಿಮ್ಮ ಧರ್ಮ.

೨. ಕಲಿಯ ಕಯ್ಯ ಕೈದುವಿನಂತಿರಬೇಕಯ್ಯ. ಎಲುದೋರ ಸರಸವಾಡಿದರೆ ಸೈರಿಸಬೇಕಯ್ಯ. ರಣದಲ್ಲಿ ತಲೆಹರಿದು ನೆಲಕ್ಕೆ ಬಿದ್ದು ಬೊಬ್ಬಿಡಲದಕ್ಕೆ ಒಲಿವ ಕೂಡಲಸಂಗಮದೇವಾ.

೩. ಆಸೆ ರೋಷ ಹರುಷಾದಿಗಳೆಂಬ ಕರಣೇಂದ್ರಿಯವ ಮುಟ್ಟಲೀಯ್ಯದೆ, ಆಚಾರವ ಶಿವಾಚಾರವ ಮಾಡುವೆ. ಭಯಭಕ್ತಿಯಿಂದ ತೋರುವೆ. ಮನದಲ್ಲಿ ವಂಚನೆ ಇಲ್ಲದೆ ಭಾವಶುದ್ಧ ಪೂಜೆಯ ಮಾಡುವೆ. ಎನ್ನ ಪ್ರಾಣಶಕ್ತಿಯಿಂದ ಕೂಡುವೆ ಕೂಡಲಸಂಗಮದೇವರ.

೪. ಪೂರ್ವಬೀಜ ವಾಯು ಪ್ರಾಣಿಯಲ್ಲ. ಲಿಂಗಪ್ರಾಣಿ ಶರಣನು. ಏಕೋಗ್ರಾಹಿ. ಭಾವ ಭೇದವಿಲ್ಲಾಗಿ, ಮನಪ್ರವೇಶಿಯಾದ ಶರಣನು ನಿಮ್ಮವ ಪೂಜಿಸಿ, ತನುಧರ್ಮವ ಮರೆದು, ನಿಮ್ಮ ಪ್ರತಿ ಬಿಂಬದಂತಿಪ್ಪ, ಕೂಡಲಸಂಗಮದೇವ, ನಿಮ್ಮ ಶರಣನು.



# ಪ್ರಸಾದಿಯ ಜ್ಞಾನಿ.

೧. ಹಸಿವಾಯಿತ್ತೆಂದು ಅರ್ಪಿತವ ಮಾಡುವರಯ್ಯ. ತೃಷೆಯಾಯಿತ್ತೆಂದು ಮಜ್ಜನಕ್ಕೆರೆವರಯ್ಯ. ಹಸಿವು ತೃಷೆ ವಿಷಯಕ್ಕೆ ಬಳಲುವರಯ್ಯ. ಹಸಿವಾಯಿತ್ತೆಂದು ಅರ್ಪಿತವ ಮಾಡಲಿಲ್ಲ. ತೃಷೆಯಾಯಿತ್ತೆಂದು ಮಜ್ಜನಕ್ಕೆರೆಯಲಿಲ್ಲ. ಇದು ಕಾರಣ ಕೂಡಲಸಂಗಮದೇವರ ಪೂಜಿಸಿ ಪ್ರಸಾದವ ಹಡೆವರೊಬ್ಬರೂ ಇಲ್ಲ.

೨. ಮುತ್ತು ನೀರಲಿ ಹುಟ್ಟಿ ಮತ್ತೆ ನೀರಪ್ಪುದೆ? ಗುರು ಕಾರುಣ್ಯವ ಹಡೆದ ಭಕ್ತನು ಹಿಂದಣ ಪೂರ್ವಾಶ್ರಯವ ಬೆರಸಿದರೆ, ಗುರುದ್ರೋಹ. ಲಿಂಗದ್ರೋಹ, ಜಂಗಮದ್ರೋಹ, ಆಚಾರದ್ರೋಹ, ಪ್ರಸಾದದ್ರೋಹ. ಇಂತೀ ಪಂಚಮಹಾ ಪಾತಕಂಗಳು ಭಕ್ತಂಗಲ್ಲದೆ ಭವಿಗೆಲ್ಲಿಯದೊ? ಗುರುವಿದು, ಲಿಂಗವಿದು, ಜಂಗಮವಿದು, ಆಚಾರವಿದು, ಪ್ರಸಾದವಿದು ಎಂದರಿಯದಿದ್ದರೆ ಕುಂಭೀ ಪಾತಕ ನಾಯಕ ನರಕದಲ್ಲಿಕ್ಕುವ ಕೂಡಲಸಂಗಮದೇವ.

೩. ಸೂಳೆಗೆ ಮೆಚ್ಚಿ ಸೂಳೆಯ ಬಂಟರೆಂಜಲ ತಿಂಬುದೀಲೋಕ. ಅಡಗ ಮೆಚ್ಚಿ ಸೊಣಗನೆಂಜಲ ತಿಂಬುದೀಲೋಕವೆಲ್ಲ. ಲಿಂಗವ ಮೆಚ್ಚಿ ಜಂಗಮ ಪ್ರಸಾದವ ಕೊಂಬುವರ ನೋಡಿ ನಗುವವರ ಕುಂಭೀಪಾತಕನಾಯಕ ನರಕದಲ್ಲಿಕ್ಕುವ ಕೂಡಲಸಂಗಮದೇವ.

೪. ಹೊಲೆಯುಂಟೇ ಲಿಂಗವಿದ್ದೆಡೆಯಲ್ಲಿ? ಕುಲವುಂಟೇ ಜಂಗಮವಿದ್ದೆಡೆಯಲ್ಲಿ? ಎಂಜಲುಂಟೆ ಪ್ರಸಾದವಿದ್ದೆಡೆಯಲ್ಲಿ? ಅಪವಿತ್ರದ ನುಡಿಯ ನುಡಿವ ಸೂತಕವೆ ಪಾತಕ. ನಿಷ್ಕಳಂಕ, ನಿಜೈಕ್ಯ, ತ್ರಿವಿಧ ನಿರ್ಣಯ ಕೂಡಲಸಂಗಮದೇವ ನಿಮ್ಮ ಶರಣರಿಗಲ್ಲದಿಲ್ಲ.

೫. ಬಾರದು ಬಾರದು ಭಕ್ತಂಗೆ ಪರಧನ, ಪರಸತಿ. ಬಾರದು ಬಾರದು ವಿಷಯಿಗೆ ಪಶುಪತಿ ಬ್ರತವು. ಬಾರದು ಬಾರದು. ಭವಭಾರಿಗೆ ಕೂಡಲಸಂಗಮದೇವನ ಒಕ್ಕುದಕೊಳ್ಳಬಾರದು.

೬. ಹುತ್ತದ ಮೇಲಣ ರಜ್ಜು ಮುಟ್ಟಿದರೆ, ಸಾವರು ಶಂಕಿತರಾದವರು. ಸರ್ಪದಷ್ಟವಾದರೆಯೂ, ಸಾಯರು ನಿಶ್ಶಂಕಿತರಾದವರು. ಕೂಡಲಸಂಗಮದೇವಯ್ಯ ಶಂಕಿತಂಗೆ ಪ್ರಸಾದ ಸಿಂಗಿಕಾಳಕೂಟ ವಿಷವು.

೭. ನಂಬಿದರೆ ಪ್ರಸಾದ, ನಂಬದಿದ್ದರೆ ವಿಷವು. ತುಡುಕಬಾರದು ನೋಡಾ ಲಿಂಗನ ಪ್ರಸಾದ, ಸಂಗನ ಪ್ರಸಾದ. ಕೂಡಲಸಂಗನ ಪ್ರಸಾದ ಸಿಂಗಿ ಕಾಳಕೂಟ ವಿಷವು.

೮. ಪಂಡಿತನಾಗಲಿ ಮೂರ್ಖನಾಗಲಿ ಸಂಚಿತಕರ್ಮ ಉಂಡಲ್ಲದೆ ಬಿಡದು. ಪ್ರಾರಬ್ಧಕರ್ಮ ಭೋಗಿಸಿದಲ್ಲದೆ ಹೋಗದೆಂದು ಶೃತಿಸಾರುತ್ತಿದ್ದಾವೆ ನೋಡಾ. ತಾನಾವಾವಲೋಕದೊಳಗಿದ್ದರೆಯೂ, ಬಿಡದು. ಕರ್ಮಫಲಗೂಡಿ ಕೂಡಲಸಂಗಮದೇವಂಗೆ ಆತ್ಮನೈವೇದ್ಯವ ಮಾಡಿದವನೇ ಧನ್ಯನು.

೯. ಒಲ್ಲೆನೆಂಬುದು ವೈರಾಗ್ಯ. ಒಲಿವೆನೆಂಬುದು ಕಾಯಗುಣ. ಆವ ಪದಾರ್ಥವಾದರೇನು? ತಾನಿದ್ದೆಡೆಗೆ ಬಂದುದ, ಲಿಂಗಾರ್ಪಿತವ ಮಾಡಿ ಭೋಗಿಸುವದೇ ಆಚಾರ. ಕೂಡಲಸಂಗಮದೇವನನೊಲಿಸ ಬಂದ ಪ್ರಸಾದಕಾಯವ ಕೆಡಿಸಲಾಗದು.

೧೦. ಒಪ್ಪುವ ನುಡಿವಿರಯ್ಯ, ತುಪ್ಪವ ತೊಡೆದಂತೆ. ಶರಣ ತನ್ನ ಮರೆವನೆ, ಬಿನ್ನಾಣಿಯಂತೆ? ಕೂಡಲಸಂಗನ ಪ್ರಸಾದದಿಂದ ಬದುಕುವನಲ್ಲದೆ, ತನ್ನ ಮರೆವನೆ?

೧೧. ಅರ್ಪಿತ ಅರ್ಪಿತವೆನುತಿಹಿರಿ. ಗುರುವಿಂಗೆ ಕೊಡುವುದು ಅರ್ಪಿತವೆ, ಸವಿ ಸವಿದು ಕೊಡಬೇಕಲ್ಲದೆ? ಅರ್ಪಿತ ಅರ್ಪಿತವೆನುತಿಹಿರಿ. ಲಿಂಗಕ್ಕೆ ಕೊಡುವುದು ಅರ್ಪಿತವೆ, ಸವಿ ಸವಿದು ಕೊಡಬೇಕಲ್ಲದೆ? ಅರ್ಪಿತ ಅರ್ಪಿತವೆನುತಿಹರೆಲ್ಲರು ಅರ್ಪಿತ ಮುಖವನರಿಯಿರಿ ನೋಡಾ. ಜಂಗಮಕ್ಕೆ ನೀಡಿ, ಜಂಗಮದ ಪ್ರಸಾದವ ಕೊಂಡರೆ, ನಿಮಗರ್ಪಿತ ಕಾಣಾ ಕೂಡಲಸಂಗಮದೇವ.

## ಪ್ರಸಾದಿಯ ಪ್ರಸಾದಿ.

೧. ಗುರುಲಿಂಗಜಂಗಮದಿಂದ ಪಾದೋದಕಪ್ರಸಾದವಾಯಿತ್ತು. ಆ ಭಾವವೆ ಮಹಾನುಭಾವವಾಗಿ, ಎನಗೆ ಬೇರೆ ಪ್ರಸಾದವೆಂಬುದಿಲ್ಲ ಕೂಡಲಸಂಗಮದೇವ.

೨. ದಾಸೋಹವೆಂಬ ಸೋಹಗೊಂಡು ಹೋಗಿ, ಗುರುವ ಕಂಡೆ ಲಿಂಗವ ಕಂಡೆ, ಜಂಗಮವ ಕಂಡೆ, ಪ್ರಸಾದವ ಕಂಡೆ. ಇಂತೀ ಚತುರ್ವಿಧ ಸಂಪನ್ನನಾದೆ ಕಾಣಾ ಕೂಡಲಸಂಗಮದೇವಾ.

# ಪ್ರಸಾದಿಯ ಭಕ್ತ.

೧. ಸಜ್ಜನ ಶರಣರ ಕಂಡು ಎನ್ನ ಮನ ಉಬ್ಬಿತ್ತ ನೋಡಿರಯ್ಯ. ಶ್ರೀಗುರುಪಾದವ ಹಿಡಿದು ಪಾವನವಾದೆನಯ್ಯ. ಪಾದೋದಕ ಪ್ರಸಾದ ದಿಂದ ಭವಗೆಟ್ಟೆನು ಕೂಡಲಸಂಗಮದೇವಾ.

೨. ಕಿವಿಯ ಸೂತಕ ಹೋಯಿತ್ತು, ಸದ್ಗುರುವಿನ ವಚನದಿಂದ ಕಂಗಳಸೂತಕ ಹೋಯಿತ್ತು ಸದ್ಭಕ್ತರ ಕಂಡೆನಾಗಿ. ಕಾಯದ ಸೂತಕ ಹೋಯಿತ್ತು ನಿಮ್ಮ ಚರಣವ ಮುಟ್ಟಿದೆನಾಗಿ. ಬಾಯಸೂತಕ ಹೋಯಿತ್ತು ನಿಮ್ಮ ಒಕ್ಕುದ ಕೊಂಡೆನಾಗಿ. ನಾನಾ ಸೂತಕ ಹೋಯಿತ್ತು ನಿಮ್ಮ ಶರಣರನುಭಾವಿಯಾಗಿ. ಕೂಡಲಸಂಗಮದೇವ ಕೇಳಯ್ಯ ಎನ್ನ ಮನದ ಸೂತಕ ಹೋಯಿತ್ತು ನೀವಲ್ಲಪಲ್ಲೆಂವರಿದೆನಾಗಿ.

೩. ಲಿಂಗಪ್ರಸಾದಿಗಳಲ್ಲದವರ ಸಂಗ ಭಂಗವೆಂದುದು ಗುರುವ ಚನ. ಲಿಂಗಪ್ರಸಾದಿಗಳಲ್ಲದವರ ಸಂಗ ಪಂಚ ಮಹಾಪಾತಕವೆಂದುದು ಲಿಂಗವಚನ. ಅಶನೇ ಶಯನೇ ಯಾನೇ ಸಂಪರ್ಕೇ ಸಹಭೋಜನೇ। ಸಂ ಚರಂತಿಮಹಾಘೋರೆ ನರಕೇ ಕಾಲಮಕ್ಷಯಂ" ॥ ಇಂತೆಂದುದಾಗಿ ಕೂಡಲಸಂಗಮದೇವಾ ನಿಮ್ಮ ಶರಣರಿಗೆ ಶರಣೆಂದು ಶುದ್ಧನಯ್ಯ.

೪. ಸುಯಿಧಾನವ ತಂದು ನೀಡುವೆನಲ್ಲದೆ, ಸಂಬಂಧಿ ನಾನಲ್ಲಯ್ಯ. ಕರ್ತಂಗೆ ಭೃತ್ಯಾಚಾರವ ಮಾಡಿ ಒಕ್ಕುದ ಕೊಂಡಿಪ್ಪೆನಯ್ಯ. ಭೋಗಾ ದಿಭೋಗವ ಸಮವಾಗಿ ಭೋಗಿಸಲು ಅಘೋರನರಕದಲ್ಲಿಕ್ಕುವ ಕೂಡ ಲಸಂಗಮದೇವ.

೫. ಶುದ್ಧವ ಗುರುವಿಂಗೆ ಕೊಟ್ಟು ಶುದ್ಧವಾಯಿತ್ತೆಂಬೆನಯ್ಯ. ಸಿದ್ಧವ ಲಿಂಗಕ್ಕೆ ಕೊಟ್ಟು ಸಿದ್ಧವಾಯಿತ್ತೆಂಬೆನಯ್ಯ. ಪ್ರಸಿದ್ಧವ ಜಂಗ ಮಕ್ಕೆ ಕೊಟ್ಟು ಪ್ರಸಿದ್ಧವಾಯಿತ್ತೆಂಬೆನಯ್ಯ. ಗುರುಲಿಂಗ ಜಂಗಮವನೇ ಕತ್ರಯವಾಗಿ ಕಾಣಲರಿಯದಿದ್ದರೆ. ಶುದ್ಧ ಸಿದ್ಧ ಪ್ರಸಿದ್ಧ ಒಡನೆ ನುಡಿ ವುತ್ತಿದ್ದಾವೆ. ತನುಮನಧನವ ನಿವೇದಿಸಲರಿಯರಾಗಿ, ಕೂಡಲಸಂಗಮ ದೇವ ಒಲಿ ಎಂದೊಡೆಂತೊಲಿವ ?

## ಪ್ರಸಾದಿಯ ಮಹೇಶ.

೧. ಒಡಲಕಳವಳಕ್ಕೆ ಬಾಯಸವಿಗೆ ಬಯಸಿ ಉಂಡೆನಾದರೆ, ನಿಮ್ಮ ತೊತ್ತಿನ ಮಗನಲ್ಲ. ಬಿಡೆ ಬಿಡೆ ನಿಮ್ಮ ನಂಬಿದ ಸದ್ಭಕ್ತರ. ಅವರೊಕ್ಕುದನುಂಬೆ. ಅವರೆಂದಂತೆ ನಡೆವೆ. ಎನ್ನೊಡೆಯ ಕೂಡಲಸಂಗಮದೇವನೊಲ್ಲದವರ ಹಿಡಿದೆನಾದರೆ ನಿಮ್ಮ ಪಾದದಾಣೆ.

೨. ಲಿಂಗಮುಖದಿಂದ ಬಂದ ಪ್ರಸಾದವನಲ್ಲದೆ ಕೊಂಡೆನಾದಡೆ ನಿಮ್ಮಾಣೆ, ನಿಮ್ಮ ಪ್ರಮಥರಾಣೆ. ಲಿಂಗಾರ್ಪಿತವಲ್ಲದೆ ಉದಕವ ಮುಕ್ಕುಳಿಸಿದರೆ, ಸಲ್ಲೆನು ನಿಮ್ಮ ಗಣಾಚಾರಕಯ್ಯ. ಲಿಂಗಾರ್ಪಿತವಲ್ಲದೆ ಹಲ್ಲುಕಡ್ಡಿಯ ಕೊಂಡರೆ ಬಲ್ಲೆ ಮುಂದೆ ಭವ ಘೋರನರಕವೆಂಬುದ. ನಿಮಗೆತ್ತಿದ ಕರದಲ್ಲಿ ಮತ್ತೊಂದಕ್ಕೆ ಕೈಯ್ಯಾನೆನು. ಅಳವರಿಯದೆ ನುಡಿದೆನು. ಕಡೆಮುಟ್ಟಿಸಲೀಸದಿದ್ದಡೆ, ತಲೆದಂಡ ಕೂಡಲಸಂಗಮದೇವ.

## ಪ್ರಸಾದಿಯ ಪ್ರಾಣಲಿಂಗಿ.

೧. ಮೌನವಲುಂಬುದು ಆಚಾರವಲ್ಲ. ಲಿಂಗಾರ್ಪಿತವ ಮಾಡಿದ ಬಳಿಕ, ತುತ್ತಿಗೊಮ್ಮೆ ಶಿವಶರಣೆನುತ್ತಿರಬೇಕು. ಕರಣವೃತ್ತಿಗಳಡಗುವವು, ಕೂಡಲಸಂಗನ ನೆನೆವುತ್ತ ಉಂಡರೆ.

೨. ಕಾಯುವ ಕರಣದ ಕಯ್ಯಲು ಪದಾರ್ಥವ ಹಿಡಿವಲ್ಲಿ ನಿಮಗೆ ಕೊಡುವ ಭರದ ಭೀತಿಯಿಂದ ಆನರಿಯದಿಪ್ಪೆನಾಗಿ ಎನ್ನ ನೀನರಿದು ಸಲಹುತಿಪ್ಪೆಯಯ್ಯ ಕೂಡಲಸಂಗಮದೇವ.

೩. ಆಳಿಕಾರನೆನಗೊಬ್ಬ ಮಗ ಹುಟ್ಟಿದನೆಂದು ಆಳಿಯ ಕೆಡಲೀಸದೆ ನಡಿಸುವನಮ್ಮಯ್ಯ. ಪಂಚಭೂತ ಕಾಯುವ ಭವಿ ಎಂದೆನಲೀಯದೆ ಪ್ರಸಾಗ ಕಾಯವ ಮಾಡಿ ಸಲಹುವ ನೆಮ್ಮಯ್ಯ. ಆಳಿ ಸಾವಲ್ಲಿ ಅವಧಾನಿಯಾಗಿದ್ದರೆ ಆಳ್ದನು ನಮ್ಮ ಕೂಡಲಸಂಗಮದೇವ.

೪. ಶಿವಾಚಾರವೆಂಬುದೊಂದು ಬಾಳಬಾಯಧಾರೆ. ಲಿಂಗ ಮೆಚ್ಚಬೇಕು, ಜಂಗಮ ಮೆಚ್ಚಬೇಕು, ಪ್ರಸಾದ ಮೆಚ್ಚಿ ತನ್ನಲ್ಲಿ ಸ್ವಾಯತವಾಗಿರಬೇಕು. ಬಿಚ್ಚಿ ಬೇರಾದರೆ, ಮೆಚ್ಚ ನಮ್ಮ ಕೂಡಲಸಂಗಮದೇವ.

## ಪ್ರಸಾದಿಯ ಶರಣ.

೧. ತ್ರಿವಿಧ ಪ್ರಸಾದವೆಂದೆಂಬರು. ಅದೆಂತಹುದೋ? ಶುದ್ಧಪ್ರಸಾದ ಲಿಂಗದದು. ಸಿದ್ಧ ಪ್ರಸಾದ ಜಂಗಮದದು. ಪ್ರಸಿದ್ಧ ಪ್ರಸಾದ ಗುರುವಿನದು. ಇಂತೀ ತ್ರಿವಿಧ ಒಂದಾದವರ ತೋರಾ ಕೂಡಲಸಂಗಮದೇವ.

೨. ಆವಾವ ಭಾವದಲ್ಲಿ ಶಿವನ ನಂಬಿದ ಶರಣರು ಎಂತಿದ್ದರೇನಯ್ಯ? ಆವಾವ ಭಾವದಲ್ಲಿ ಶಿವನ ನಂಬಿದ ಮಹಿಮರು ಎಂತಿದ್ದರೇನಯ್ಯ? ಸುಚರಿತ್ರರೆಂತಿದ್ದರೇನಯ್ಯ? ಅವಲೋಹದ ಕಳೆದ ಪರುಷವೆಂತಿದ್ದರೇನಯ್ಯ? ಕೂಡಲಸಂಗನ ಶರಣರು ರಸದ ವಾರುಧಿಗಳು ಎಂತಿದ್ದರೇನಯ್ಯ?

೩. ಉರಿ ತಾಗಿದ ಮೃಗವು ಒಂದಡಿಯ ನಿಡುವುದೇ ಅಯ್ಯ? ತನುವ ತಾಗಿದ ಸುಖವು ಅಗಲುವುದೆ ಅಯ್ಯ? ಕೂಡಲಸಂಗನ ಶರಣರ ಅನುಭಾವವನರಿದವರ ಮರಳಿ ಮರ್ತ್ಯರೆಂದೆನಬಹುದೆ?

೪. ನಿಮ್ಮ ಶ್ರೀ ಪಾದವ ಮುಟ್ಟಿ ಕರ್ಮ ಹರಿಯಿತ್ತು. ನಿಮ್ಮ ಪ್ರಸಾದದಿಂದ ಭವಗೆಟ್ಟೆ ನೋಡಯ್ಯ. ಮನ ಪರುಷ, ದೃಷ್ಟಿ ಪರುಷ, ಭಾವ ಪರುಷ, ಲಿಂಗ ಗಣಂಗಳು. ಕೂಡಲಸಂಗಮದೇವ ನಿಮ್ಮ ಶರಣರನುಭಾವದಿಂದ ನಾನು ಸುಖಿಯಾದೆನು.

## ಪ್ರಸಾದಿಯ ಐಕ್ಯ.

೧. ನಡೆ ಚೆನ್ನ, ನುಡಿ, ಚೆನ್ನ, ಎಲ್ಲಿ ನೋಡಿದಡೆ ಚೆನ್ನ, ಪ್ರಮಥರೊಳಗೆ ಚೆನ್ನ, ಪುರಾತರೊಳಗೆ ಚೆನ್ನ. ಸವಿದು ನೋಡಿ ಅಂಬಲಿ ರುಚಿಯಾಯಿತ್ತೆಂದು ಕೂಡಲಸಂಗಮದೇವಂಗೆ ಬೇಕೆಂದು ಕೈದೆಗೆದ ನಮ್ಮ ಚೆನ್ನ.

೨. ಲಿಂಗ ವಿಕಾರಿಗೆ ಅಂಗ ವಿಕಾರವೆಂಬುದಿಲ್ಲ. ಜಂಗಮವಿಕಾರಿಗೆ ಧನವಿಕಾರವೆಂಬುದಿಲ್ಲ. ಪ್ರಸಾದ ವಿಕಾರಿಗೆ ಮನ ವಿಕಾರವೆಂಬುದಿಲ್ಲ. ಇಂತೀ ತ್ರಿವಿಧಗುಣವ ನರಿವಾತನು ಅಚ್ಚ ಲಿಂಗೈಕ್ಯನು ಕೂಡಲಸಂಗಮದೇವಾ.

# ಪ್ರಾಣಲಿಂಗಿ ಸ್ಥಲ.

೧. ಪ್ರಾಣಲಿಂಗ ಪ್ರತಿಗ್ರಾಹಕನಾದ ಬಳಿಕ ಲಿಂಗವಿರಹಿತವಾಗಿ ನಡೆವ ಪರಿ ಇನ್ನೆಂತೋ? ಲಿಂಗವಿರಹಿತವಾಗಿ ನುಡಿವ ಪರಿ ಇನ್ನೆಂತೋ? ಪಂಚೇಂದ್ರಿಯ ಸುಖವನು ಲಿಂಗವಿರಹಿತವಾಗಿ ಭುಂಜಿಸಲಾಗದು, ಲಿಂಗವಿರಹಿತವಾಗಿ ಉಗುಳ ನುಂಗಲಾಗದು. ಇಂತೆಂದುದು ಕೂಡಲ ಸಂಗನ ವಚನ.

೨. ಹತ್ತು ಸಾವಿರ ಗೀತವ ಹಾಡಿ ಅರ್ಥವಿಟ್ಟಲ್ಲಿ ಫಲವೇನು, ಮುಟ್ಟುವ ತೆರನನರಿಯದನ್ನಕ್ಕ? ಕಟ್ಟಿದರೇನು, ಬಿಟ್ಟರೇನು, ಮನವು ಲಿಂಗದಲ್ಲಿ ಮುಟ್ಟದನ್ನಕ್ಕ? ಮಾತಿನಲ್ಲಿ ಒಲಿಸಿ ಮಹತ್ತಪ್ಪ ಲಿಂಗವ ಕಂಡೆಹೆನೆಂಬ ಪಾತಕರ ಮೆಚ್ಚ ಕೂಡಲಸಂಗಮದೇವ.

೩. ಧ್ಯಾನಜ್ಞಾನ ಗಜಜ್ಞಾನ ಕುಕ್ಕುಟಜ್ಞಾನವೆಂಬ ಜ್ಞಾನತ್ರಯ ಗಳೇನಾದವು? ಕೂಡಲಸಂಗಮದೇವಾ ನಿಮ್ಮನರಿಯದ ಜ್ಞಾನವೆಲ್ಲ ಅಜ್ಞಾನ.

೪. ಗುರು ತೋರಿದ ಲಿಂಗವು ಮನಸ್ಥಲವಾಗಿರಲು, ಪವನ ಭೇದ ದಿಂದ ಅರಿದಿಹೆನೆಂದರೆ, ಆದೇ ದ್ರೋಹ. ಈಡಾಪಿಂಗಳ ಸುಷುಮ್ನನಾಳ ವಿಡಿದು ಅರಿದಿಹೆನೆಂದರೆ, ಕೂಡಲಸಂಗಮದೇವ ಮೂಗ ಕೊಯ್ಯದೆ ಮಾಬನೇ?

೫. ಕಬ್ಬುನ ಪರುಷ ವೇದಿಯಾದರೇನು? ಕಬ್ಬುನ ಹೊನ್ನಾ ಗದೊಡೆ, ಪರುಷವದೇಕೋ? ಮನೆಯೊಳಗೆ ಕತ್ತಲೆಯ ಹರಿಯದೊಡೆ, ಆ ಜ್ಯೋತಿಯದೇಕೋ? ಕೂಡಲಸಂಗಮದೇವರ ಮನಮುಟ್ಟಿ ಪೂಜಿಸಿ ಕರ್ಮ ಹರಿಯದೊಡೆ, ಆ ಪೂಜೆಯದೇಕೋ?

೬. ಅಹಂಕಾರ ಮನವನಿಂಬುಗೊಂಡಲ್ಲಿ, ಲಿಂಗ ತಾನೆಲ್ಲಿಪ್ಪುದೋ? ಅಹಂಕಾರಕ್ಕೆ ಎಡೆಗುಡದೆ, ಲಿಂಗ ತನುವಾಗಿರಬೇಕು. ಅಹಂಕಾರ ರಹಿ ತನಾದಲ್ಲಿ, ಸನ್ನಿಹಿತ ಕಾಣಾ ಕೂಡಲಸಂಗಮದೇವಾ.

೭. ನುಡಿದರೆ ಮುತ್ತಿನ ಹಾರದಂತಿರಬೇಕು. ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು. ನುಡಿದರೆ ಸ್ಫಟಿಕದ ಶಲಾಕೆಯಂತಿರಬೇಕು. ನು

ಇದರೆ ಲಿಂಗಮೆಚ್ಚಿ ಅಹುದೆನಬೇಕು. ನುಡಿಯೊಳಗಾಗಿ ನಡೆಯದಿದ್ದರೆ ಕೂಡಲಸಂಗಮದೇವನೆಂತೊಲಿವನಯ್ಯ?

೮. ಮನಧ ಕೊನೆಯ ಮೊನೆಯ ಮೇಲೆ ಮನೆಯ ಮಾಡಿಕೊಂಡಿಪ್ಪನೊಬ್ಬ ದಾಸೋಹಿ. ಆದಿವಿಡಿದು ಬಂದಾತನೇ ಭಕ್ತನು. ಅನಾದಿವಿಡಿದು ಬಂದಾತನೇ ಜಂಗಮವು. ಆದಿಗುರು ಅನಾದಿಶಿಷ್ಯ. ಈ ಉಭಯ ಕುಳಸ್ಥಳವಬಲ್ಲರೆ, ಆತ ಲಿಂಗಸಂಬಂಧಿ ಕೂಡಲಸಂಗಮದೇವ.

೯. ಅರಿವರಿದು ಸಮಗಾಣಿಸಬಾರದು. ತ್ರಾಸಿನ ಕಟ್ಟಳೆಯಂತಿನಿತಿನಿತು ಹೆಗ್ಗಳವಾದರೆ, ಈಶ್ವರನು ಒಡೆ ಇಕ್ಕದೆ ಮಾಣುವನೇ? ಪಾತ್ರಾಪಾತ್ರವೆಂದು ಕಂಡರೆ, ಶಿವನೆಂತು ಮೆಚ್ಚುವನು? ಜೀವಜೀವಾತ್ಮವ ಸರಿ ಎಂದು ಕಂಡರೆ, ಸಮವೇದಿಸದಿಪ್ಪನೇ ಶಿವನು? ತನ್ನ ಮನದಲ್ಲಿ ಯತ್ರ ಜೀವ ಸ್ತತ್ರ ಶಿವನೆಂದು, ಸರ್ವ ಜೀವದಯಾಪಾರಿಯಾದರೆ, ಕೂಡಲಸಂಗಮದೇವನು ಕೈಲಾಸದಿಂದ ಬಂದು ಎತ್ತಿಕೊಳ್ಳದಿಪ್ಪನೇ?

೧೦. ಸ್ಥಾವರ ಜಂಗಮವೆಂಬುಭಯಪಕ್ಷ ಒಂದೇ. ಆವ ಮುಖದಲು ಬಂದರೂ ತೃಪ್ತಿಯೊಂದೇ. ಕೂಡಲಸಂಗಮದೇವರ ಆಪ್ಯಾಯನ ಒಂದೇ.

೧೧. ಮುತ್ತು ಉದುಕಲಾಗದು. ಉದುಕ ಮುತ್ತಿನಲಾಗದು. ತತ್ವ ಘಟಿಸಿದ ಸುಮುಹೂರ್ತದಲಲ್ಲದೆ, ಚಿತ್ತವೇದ್ಯವಾಗದು. ಸದ್ಗುರುವಿನ ಕರುಣಕಲ್ಲದೆ, ಕರ್ತು ಕೂಡಲಸಂಗಮದೇವರ ಒಲವಿನ ದಯದ ಚಿತ್ತ ವಿಡಿದಂಗಲ್ಲದೆ, ಶಿವತತ್ವ ಸಾಹಿತ್ಯವಾಗದು.

೧೨. ಕಾಯದ ಗಡಣ ಕೆಲಬರಿಗುಂಟು. ಜೀವದ ಗಡಣ ಕೆಲಬರಿಗುಂಟು. ಭಾವದ ಗಡಣ ಕೆಲಬರಿಗುಂಟು. ವಚನದ ಗಡಣ ಕೆಲಬರಿಗುಂಟು. ಪ್ರಾಣಲಿಂಗದ ಗಡಣ ಆರಿಗೂ ಇಲ್ಲ. ಕೂಡಲಸಂಗನ ಶರಣರೊಳಗೆ ತಂಗಟೂರ ಮಾರಯ್ಯಂಗಲ್ಲದೆ.

೧೩. ಚಂದ್ರಕಾಂತದ ಸಿಲೆಯಲ್ಲಿ ಜಲವಿಲ್ಲದನ್ನಕ್ಕ ಶೈತ್ಯವ ತೋರುವ ಪರಿ ಎಂತೋ? ಸೂರ್ಯಕಾಂತದ ಸಿಲೆಯಲ್ಲಿ ಅಗ್ನಿ ಇಲ್ಲದನ್ನಕ್ಕ ಉಷ್ಣವ ತೋರುವ ಪರಿಯಂತೋ? ಶರಣಂಗೆ ಭಕ್ತಿಕಾಯ ವಿಲ್ಲದನ್ನಕ್ಕ, ಕೂಡಲಸಂಗನ ನರಿವ ಪರಿ ಎಂತೋ?

೧೪. ಮುನ್ನೂರರವತ್ತು ನಕ್ಷತ್ರಕ್ಕೆ ಬಾಯ ಬಿಟ್ಟುಕೊಂಡಿಪ್ಪುದೇ ಸಿಂಪು? ಅದು ಸ್ವಾತಿಗಲ್ಲದೆ, ಬಾಯ್ದೆರೆಯದು. ಕೇಳಾ ಕೇಳು ತಂದೆ. ಎಲ್ಲವಕ್ಕೆ ಬಾಯ ಬಿಟ್ಟರೆ, ತಾನೆಲ್ಲಿಯ ಮುತ್ತಪ್ಪುದು? ಪರಮಂಗಲ್ಲದೆ ಹರುಷವಿಲ್ಲೆಂದು ಕರಣಾದಿ ಗುಣಂಗಳ ಮರೆದರು. ಇದು ಕಾರಣ ಕೂಡಲಸಂಗನ ಶರಣರು ಸಪ್ತ ವ್ಯಸನಿಗಳಲ್ಲಾಗಿ.

## ಪ್ರಾಣಲಿಂಗಿಯ ಪ್ರಾಣಲಿಂಗಿ.

೧. ಮೆಯಿಗೆ ಕಾಹ ಹೇಳುವರಲ್ಲದೆ, ಮನಕ್ಕೆ ಕಾಹ ಹೇಳುವರೆ? ಅಣಕವ ಗಂಡನ ಹೊಸಪರಿಯ ನೋಡಾ! ಕೂಡಲಸಂಗಮದೇವನೆನ್ನ ಮನವ ನಂಬದೆ ತನ್ನಲ್ಲಿರ್ದ ಲೇಸ ಕಾಹ ಹೇಳಿದನು!

೨. ಮನ ವಂಚನೆಯೆ ಅನ್ಯ ಲಿಂಗಾರ್ಚನೆ, ಅದು ನಿಜವಲ್ಲ, ನಿಜವಲ್ಲ, ಕೂಡಲಸಂಗಮದೇವನು ಮನದಂತರಿಯಾಮಿ ತಾನಾಗಿ.

೩. ಸರ್ಪನ ಸಂಯೋಗ, ಜ್ಯೋತಿಯ ಪತಂಗನ ಬೆಸನವಂತೆ, ಮನದ ಮದವರಿಯದೆ, ನಿಮ್ಮ ಕೃಪೆಯಿಂದ ನಿನ್ನ ನೆನೆವೆ. ಎನ್ನ ಭಾವದ ಕೊನೆಯ ಮೊನೆಯ ಮೇಲೆ ಮನೆಯ ಮಾಡಿಕೊಂಡಿಪ್ಪೆಯಯ್ಯ, ಕೂಡಲಸಂಗಮದೇವ ನೀನೆನ್ನ ಪ್ರಾಣನಾಥನಾಗಿ.

೪. ಪೃಥ್ವಿಯಪ್ಪುತೇಜವಾಯುವಾಕಾಶ ನಿರಂಜನದೇವಾ, ನಿಮ್ಮ ಮಹಿಮೆಯ ಪ್ರಣವರೂಪಂಗಲ್ಲದೆ, ಕಾಣಲಾರಿಗೆಯೂ ಬಾರದಯ್ಯ. ಜ್ಞಾನಜ್ಯೋತಿಯ ಧ್ಯಾನದಿಂದ ನಾಳಶುದ್ಧ ದ್ವಾರನಾಗಿ, ಆರಾಧಿಸಿ ಕಂಡೆ ನಮ್ಮ ಕೂಡಲಸಂಗಮದೇವನ.

೫. ಪಶ್ಚಿಮ ಪದ್ಮಾಸನದಲ್ಲಿ ಕುಳ್ಳಿತ್ತು, ನೆಟ್ಟೆಲುವ ಮುರಿದು ತುಟಿ ಮಿಡುಕದೆ ಅಟ್ಟಿಯಾಡಿತ್ತಲ್ಲಾ! ಬಿಟ್ಟ ಕಣ್ಣು, ಬಿಗಿದ ಹುಬ್ಬು, ಬ್ರಹ್ಮರಂಧ್ರದಲ್ಲಿ ಕಟ್ಟು ಗುಡಿಯು, ಕೂಡಲಸಂಗಮದೇವ ಹಿಡಿವಡೆದ.

೬. ಸುನಾದಬಿಂದು ಪ್ರಣವಮಂತ್ರ ಅಗ್ರದ ಕೊನೆಯಲ್ಲೈದುದೆ ಸೋಹಂ ಸೋಹಂಮೆಂದೆನುತಿದ್ದಿತು. ಕೋಹಂ ಬ್ರಹ್ಮರಂಧ್ರದೊಳಗೆ ಯತೋ ವಾಚೋ ನಿವರ್ತಂತೆ ಅಪ್ರಾಪ್ಯಮನಸಾಸಹ ಆನಂದ ಬ್ರಹ್ಮಣಾ ವಿದ್ವಾನ್‌ನಬಿಭೇತಿ ಕುತಶ್ಚನ ಇಂತೆಂಬುದಾಗಿ ಅಗಮ್ಯ ಕೂಡಲಸಂಗಮದೇವನಲ್ಲದೆ ಮತ್ತಾರೂ ಇಲ್ಲ.

೭. ಬೆಳಗಿನೊಳಗಣ ಮಹಾಬೆಳಗು. ಶಿವಶಿವ ಪರಮಾಶ್ರಯವೇ ತಾನಾಗಿ ಶತಪತ್ರಕಮಳ ಕರ್ಣಿಕಾಮಧ್ಯದಲ್ಲಿ ಸ್ವತಃ ಸಿದ್ಧನಾಗಿಪ್ಪ ನಮ್ಮ ಕೂಡಲಸಂಗಮದೇವಾ.

೮. ಆಚಾರ ಶಿವಾಚಾರವೆಂದರಿದ ಕಾರಣ, ಷಡುದರ್ಶನಂಗಳೆಲ್ಲ ತಮ ತಮಗೆ ಶರಣೆನುತಿರ್ದಪು. ಮಹತ್ವದ ಸಮಯಾದಿ ಶೈವಂಗಳೆಂಬವೆಲ್ಲ ಶರಣು ಶರಣು ಎನುತಿರ್ದಪು. ನಮ್ಮ ಕೂಡಲಸಂಗನ ಶರಣರು ಮಾಡಿದ ವಿನಿಯೋಗ ಬಹಿರಂಗದಲ್ಲಿ ವರ್ತಿಸುವವರಿಗೆಲ್ಲಿಯದೋ?

೯. ತಮ ತಮಗೆಲ್ಲ ನೊಸಲ ಕಣ್ಣವರು, ತಮ ತಮಗೆಲ್ಲ ನಂದಿ ವಾಹನರು, ತಮತಮಗೆಲ್ಲ ಖಟ್ವಾಂಗ ಕಪಾಲತ್ರಿಶೂಲಧರರು. ದೇವರಾರು, ಭಕ್ತರಾರು ಹೇಳಿರಯ್ಯ! ನಮ್ಮ ಕೂಡಲಸಂಗಮದೇವ, ನಿಮ್ಮ ಶರಣರು ಸ್ವತಂತ್ರರು. ಎನ್ನ ಬಚ್ಚ ಬರಿಯ ಬಸವನೆನಿಸಯ್ಯ.

೧೦. ಗುರುವಿನಲ್ಲಿ ಸದಾಚಾರ, ಲಿಂಗದಲನುದಿನವೇಳೆ, ಜಂಗಮದಲ್ಲನುಭಾವ, ಸಮಯಾಚಾರ ಲಿಂಗದಲನುದಿನವೇಳೆ. ಈ ಉಭಯಾಚಾರದಿಂದ ತಿಳಿದ ತಿಳಿವು ಲಿಂಗದಲನುದಿನವೇಳೆ. ಬೇರೆ ತೋರಲಿಲ್ಲ. ಲಿಂಗ ಜಂಗಮದಲ್ಲಿ ಲೀಯ್ಯವಾದ ಸಮಯಾಚಾರ, ಇನುಕಾರಣ ಕೂಡಲಸಂಗಮದೇವ ಲಿಂಗದಲನುದಿನವೇಳೆ.

೧೧. ಉಳ್ಳವರು ಶಿವಾಲಯವ ಮಾಡುವರು. ನಾನೇನ ಮಾಡುವೆ! ಬಡವನಯ್ಯ! ಎನ್ನ ಕಾಲೇ ಕಂಭ, ದೇಹವೇ ದೇಗುಲ, ಸಿರವೇ ಹೊನ್ನ ಕಳಶವಯ್ಯ! ಕೂಡಲಸಂಗಮದೇವ ಕೇಳಯ್ಯ! ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲ.

## ಪ್ರಾಣಲಿಂಗಿಯ ಭಕ್ತ.

೧. ಅಷ್ಟದಳ ಕಮಲಾತ್ಮದೊಳಗೆ ನೆಟ್ಟನೆ ಮನ ಪ್ರೇರಕನೆಂದು ನಂಬಿದೆ. ಮತ್ತೊಂದನರಿಯದೆ, ಮತ್ತೊಂದ ಕೇಳದೆ. ನಿತ್ಯ ಸ್ವತಂತ್ರನು ನೀನೇ. ದೃಷ್ಟ ಲಿಂಗಜಂಗಮ ಒಂದೇ ಎಂದಿಪ್ಪೆನು ಪ್ರಭುವೇ ಕೂಡಲ ಸಂಗಮದೇವ.

೨. ನಿನ್ನ ನಾನರಿಯದ ಮುನ್ನ ನೀನೆಲ್ಲಿದ್ದೆ? ಎನ್ನೊಳಗಿದ್ದ, ನಿನ್ನ ತೋರಲಿಕ್ಕೆ ನೀನೇ ರೂಪಾದೆ. ಇನ್ನು ಜಂಗಮವೇ ಲಿಂಗವೆಂದು ನಂಬಿದೆ ಕೂಡಲಸಂಗಮದೇವ.

೩. ಗುರು ಮುನಿದರೆ, ಒಂದು ದಿನ ತಾಳುವೆ. ಲಿಂಗ ಮುನಿದರೆ, ದಿನವರೆ ತಾಳುವೆ. ಜಂಗಮ ಮುನಿದರೆ, ಕ್ಷಣ ಮಾತ್ರ ತಾಳಿದೆನಾದರೆ, ಎನ್ನ ಪ್ರಾಣದ ಹೋಕು, ಕೂಡಲಸಂಗಮದೇವ.

೪. ಅರಸು ಮುನಿದರೆ, ನಾಡೊಳಗಿರಬಾರದಯ್ಯ. ಗಂಡ ಮುನಿದರೆ, ಹೆಂಡತಿಯಾಗಿರಬಾರದಯ್ಯ. ಕೂಡಲಸಂಗಮದೇವ, ಜಂಗಮ ಮುನಿದರೆ ನಾನೆಂತು ಬದುಕುವೆನು?

೫. ರಚ್ಚೆಯ ನೆರವಿಗೆ ನಾಣನುಡಿ ಇಲ್ಲದಿಹುದೇ? ಅದರಂತೆನ ಬಹುದೆ ಸಜ್ಜನ ಸ್ತ್ರೀಯ? ಅದರಂತೆನಬಹುದೆ? ಭಕ್ತಿರತಿಯ ಕರುಳ ಕಲೆ ಪ್ರಕಟಿತ ಉಂಟೇ ಕೂಡಲಸಂಗಮದೇವ?

೬. ಭೂತ ಒಲಿದಾತ್ಮನ ಸೋಂಕಿದ ಬಳಿಕ, ಭೂತದ ಗುಣವಲ್ಲದೆ, ಆತ್ಮನ ಗುಣ ಉಂಟೇ? ಗುರುಕಾರುಣ್ಯವಾಗಿ, ಹಸ್ತ ಮಸ್ತಕ ಸಂಯೋಗವಾದ ಬಳಿಕ, ಗುರುಲಿಂಗಜಂಗಮವೇ ಗತಿಯಾಗಿರ್ದ, ಕೂಡಲ ಸಂಗಮದೇವ.

೭. ಹಸಿವುತೃಷೆನಿದ್ರೆ ವಿಷಯಂಗಳ ಮರೆದೆ. ಇದುಕಾರಣ, ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಂಗಳ ಮರೆದೆ. ಇದುಕಾರಣ, ಪಂಚೇಂದ್ರಿಯ ಸಪ್ತಧಾತು ಅಷ್ಟಮದಂಗಳ ಮರೆದೆ. ಇದುಕಾರಣ, ಕೂಡಲಸಂಗಮದೇವಯ್ಯ, ನಿಮ್ಮ ಶರಣರಿಗೆ ಆಪ್ಯಾಯನವಾದರೆ, ಎನಗೆ ತೃಪ್ತಿಯಾಯಿತ್ತು.

೮. ತನು ನಿಮ್ಮದೆಂದ ಬಳಿಕ, ಎನಗೆ ಬೇರೆ ತನುವಿಲ್ಲ. ಮನ ನಿಮ್ಮದೆಂದ ಬಳಿಕ, ಎನಗೆ ಬೇರೆ ಮನವಿಲ್ಲ. ಧನ ನಿಮ್ಮದೆಂದ ಬಳಿಕ, ಎನಗೆ ಬೇರೆ ಧನವಿಲ್ಲ. ಇಂತೀ ತ್ರಿವಿಧವು ನಿಮ್ಮದೆಂದರಿದ ಬಳಿಕ, ಎನಗೆ ಬೇರೆ ವಿಚಾರ ಉಂಟೇ ಕೂಡಲಸಂಗಮದೇವ?

## ಪ್ರಾಣಲಿಂಗಿಯ ಮಾಹೇಶ್ವರ.

೧. ಆಕಳ ಕಳ್ಳರು ಕೊಂಡೊಯ್ದರೆನ್ನದಿರಿಂಭೋ! ನಿಮ್ಮ ಧರ್ಮ. ಜೊಬ್ಬಿಡದಿರಿಂಭೋ! ನಿಮ್ಮ ಧರ್ಮ. ಅರಸದಿರಿಂಭೋ! ನಿಮ್ಮ ಧರ್ಮ. ಅಲ್ಲಿ ಉಂಬರೆ ಸಂಗ. ಇಲ್ಲಿ ಉಂಬರೆ ಸಂಗ. ಕೂಡಲ ಸಂಗಮದೇವ ಏಕೋಭಾವ.

೨. ಅರ್ಥಪ್ರಾಣಾಭಿಮಾನವನೊಪ್ಪಿಸಿದಲ್ಲಿ ಭಕ್ತನಪ್ಪನೇ? ಅಲ್ಲ. ಆದಿರುದ್ರನ ಮಗಳು ಆದಿಶಕ್ತಿ. ಆದಿಶಕ್ತಿಯ ಮಗ ವಿಷ್ಣು. ಆ ವಿಷ್ಣುವಿನ ಅರ್ಧಾಂಗಿ ಲಕ್ಷ್ಮಿ. ಈ ತೊತ್ತಿನ ತೊತ್ತಿನ ಪಡಿದೊತ್ತನೊಪ್ಪಿಸಿದಲ್ಲಿ ಭಕ್ತನಪ್ಪನೆ? ಅಲ್ಲ. ಎನ್ನ ಮನದೊಡೆಯ ಮಹಾದೇವ ನಿಮ್ಮ ಮನವ ನಿಮಗೊಪ್ಪಿಸಿ, ನಾನು ಶುದ್ಧ ಕಾಣಾ ಕೂಡಲಸಂಗಮದೇವಾ.

೩. ಮಾಡುವಾತ ನಾನಲ್ಲಯ್ಯ! ನೀಡುವಾತ ನಾನಲ್ಲಯ್ಯ! ಬೇಡುವಾತ ನಾನಲ್ಲಯ್ಯ! ನಿಮ್ಮ ಕಾರುಣ್ಯವಲ್ಲದೆ, ಎಲೇ ದೇವಾ! ಮನೆಯ ತೊತ್ತಲಸಿದರೆ, ಒಡತಿ ಮಾಡಿಕೊಂಬಂತೆ, ನಿನಗೆ ನೀ ಮಾಡಿಕೋ ಕೂಡಲ ಸಂಗಮದೇವಾ.

೪. ಮುನ್ನಿನ ಜನ್ಮದಲ್ಲಿ ಗುರುಲಿಂಗಜಂಗಮವ ಪೂಜಿಸಲರಿಯದ ಕಾರಣ, ಬಹುಜನ್ಮಕ್ಕೆ ತಂದಿಕ್ಕಿದೆಯಯ್ಯ ಎನ್ನನು. ಎನಗೆ ಗುರುಪಥವ ತೋರಿದವರಾರು? ಲಿಂಗಪಥವ ತೋರಿದವರಾರು? ಜಂಗಮಪಥವ ತೋರಿದವರಾರು? ಪಾದೋದಕ ಪ್ರಸಾದವ ತೋರಿದವರಾರು? ತೋರುವ ಮನವೇ ನೀವೆಂದರಿತೆ. ಎನಗಿನ್ನಾವ ಭವವೂ ಇಲ್ಲ ಕೂಡಲಸಂಗಮದೇವಾ.

## ಪ್ರಾಣಲಿಂಗಿಯ ಪ್ರಸಾದಿ.

೧. ಜನ್ಮಜನ್ಮಕ್ಕೆ ಹೋಗಲೀಯದೆ, ಸೋಹಂವೆಂದೆನಿಸದೆ, ದಾಸೋಹಂವೆಂದೆನಿಸಯ್ಯ! ಲಿಂಗಜಂಗಮದ ಪ್ರಸಾದದ ನಿಲವ ತೋರಿ ಬದುಕಿಸಯ್ಯ ಕೂಡಲಸಂಗಮದೇವಾ.

೨. ಆಶೆಯಾಮಿಷ ತಾಮಸದಿಂದ ಭವಬಂಧನವಾದುದನರಿಯಾ! ತ್ರಿವಿಧತ್ರಿವಿಧಾವಸ್ಥೆಯ ಮರೆಯಾ! ಓಂ ನಮಶ್ಶಿವಾಯ ಶರಣೆಂಬುದ

ಬಿಡದೆ ನೆನೆ, ಮನವೇ. ಮಹಂತ ಶಿವಲಿಂಗಸ್ಯ। ಮಹಂತೋ ಜಂಗಮಸ್ತಥಾ। ಕೂಡಲಸಂಗಮದೇವನ ಪ್ರಸಾದ ಸಾನ್ನಿಧ್ಯದಿಂದ ಭವಜನ್ಮ ಕರ್ಮ ಪಂಚಭೂತ ಪೂರ್ವ ನಾಸ್ತಿ.

೩. ಬೆಟ್ಟಕ್ಕೆ ಬೆಳ್ವಾರ ಸುತ್ತಿತ್ತಯ್ಯಾ! ಪಾಪದ ಬಲೆಯ ತಂಪು ಮುಂದೆ ಒಡ್ಡದಿರಯ್ಯ! ಬೇಟೆಕಾರನು ಮೃಗವನಟ್ಟೆ, ಮೃಗವು ಗೋಂಗೊಳಗಾಗವಯ್ಯ! ಹರನೊಡ್ಡಿದ ಬಲೆಯಲ್ಲಿ ಸಿಲುಕಿದ ಮೃಗವು ಕೂಡಲಸಂಗಮದೇವಂಗೆ ಓಗರವಾಯಿತ್ತು.

೪. ಪರಿಯಾಣವೇ ಭಾಜನವೆಂಬರು. ಪರಿಯಾಣ ಭಾಜನವಲ್ಲ. ಲಿಂಗಕ್ಕೆ ತನ್ನ ಮನವೇ ಭಾಜನ. ಪ್ರಾಣವನು ಬೀಸರವೋಗದೆ ಮೊಸಲಾಗರ್ಪಿಸಬಲ್ಲರೆ, ಕೂಡಿಕೊಂಡಿಪ್ಪ ನಮ್ಮ ಕೂಡಲಸಂಗಮದೇವ.

೫. ಆತ್ಮ ಲಿಂಗ, ಪರಮಾತ್ಮ ಜಂಗಮ. ತನು ಮಧ್ಯಪ್ರಸಾದವಾಯಿತ್ತು. ನಿಶ್ಚಿಂತ ನಿವಾಸವಾಯಿತ್ತು. ಕೂಡಲಸಂಗನ ಶರಣರ ಸಂಗದಿಂದ ನಿಶ್ಚಿಂತ ನಿವಾಸವಾಯಿತ್ತು.

೬. ಲೋಹ ಪರುಷವ ಮುಟ್ಟುವದಲ್ಲದೆ, ಪರುಷ ಪರುಷವ ಮುಟ್ಟುವದೇ ಅಯ್ಯ? ಅಂಗವಿಡಿದಂಗೆ ಪ್ರಸಾದವಲ್ಲದೆ, ಲಿಂಗವಿಡಿದಂಗೆ ಪ್ರಸಾದವೆಲ್ಲಿಯದೋ? "ಅಣೋರಣೀಯಾನ್ ಮಹತೋಮಹೀಯಾನ್". ಹಿರಿದಕ್ಕೆ ಹಿರಿದು, ಕಿರಿದಕ್ಕೆ ಕಿರಿದು, ವಾಙ್ಮನಕ್ಕೆ ಅಗೋಚರ. ಕೂಡಲಸಂಗಮದೇವಾ, ಸ್ವರೂಪು ಪ್ರಸಾದ, ನಿರೂಪು ಲಿಂಗೈಕ್ಯ.

೭. ಜಂಗಮವೇ ಲಿಂಗವೆನಗೆ. ಜಂಗಮವೇ ಪ್ರಾಣವೆನಗೆ. ಕೂಡಲಸಂಗಮದೇವಯ್ಯ ಎನಗೆಯೂ ನಿನಗೆಯೂ ಜಂಗಮದ ಪ್ರಸಾದವೇ ಪ್ರಾಣ.

೮. ಅಯ್ಯಾ ನೀನೆಂದರೆ ಎಂಜೆನು. ನಿನ್ನ ಹಂಗೇನೂ ಹರಿಯೆನು. ನಿನ್ನ ಮುಖದಲ್ಲಿ ಒಂದಳು ಸವೆಯದು. ನಿನ್ನ ಪ್ರಸಾದವ ಕೊಂಡೆನ್ನ ಭವಕ್ಕೆ ಬೀಜವಾಯಿತ್ತು. ಜಂಗಮವೇ ಲಿಂಗವೆಂದೊಕ್ಕುದ ಕೊಂಡರೆ ಎನ್ನ ಭವಂ ನಾಸ್ತಿಯಾಯಿತ್ತು ಕೂಡಲಸಂಗಮದೇವಾ.

೯. ಜ್ಞಾನದ ಬಲದಿಂದ ಅಜ್ಞಾನದ ಕೇಡು ನೋಡಯ್ಯ! ಜ್ಯೋತಿಯ ಬಲದಿಂದ ತಮಂಧದ ಕೇಡು, ನೋಡಯ್ಯ! ಸತ್ಯದ ಬಲದಿಂದ ಅಸತ್ಯದ ಕೇಡು ನೋಡಯ್ಯ! ಪರುಷದ ಬಲದಿಂದ ಅವಲೋಹದ ಕೇಡು,

ನೋಡಯ್ಯ! ಕೂಡಲಸಂಗನ ಶರಣರನುಭಾವದಿಂದ ಎನ್ನಭವದ ಕೇಡು ನೋಡಯ್ಯಾ!

೧೦. ಆಪ್ಯರ ವಚನ ಆಪ್ಯರಿಗಾಯಿತ್ತು. ಪೇಪ್ಯರಿಗಲ್ಲದೆ, ಸಾಧ್ಯವಾಗದು. ಕೂಡಲಸಂಗಮದೇವ, ನಿಮ್ಮನುಭಾವದಿಂದೆನ್ನ ಭವಂ ನಾಸ್ತಿಯಾಯಿತ್ತು.

೧೧. ಅಸಂಬಂಧ ಸಂಬಧವಾಯಿತ್ತು, ಲಿಂಗಸಾರಾಯರ ಸನುಮತದಿಂದ. ಉತ್ತಮ ಮಧ್ಯಮವ ಕೆಡಿಸಿತ್ತು. ಏಕೋ ಸತಿಪತಿಗುಣದಿಂದ ಗರುವರ ಗರುವತನ, ಕೂಡಲಸಂಗಯ್ಯನನುಭಾವದಿಂದ.

## ಪ್ರಾಣಲಿಂಗಿಯ ಶರಣ.

೧. ಶರಣ ಸನ್ನಿಹಿತ ಐಕ್ಯವಹಲ್ಲಿ, ಹರಿ ಬ್ರಹ್ಮಾದಿಗಳು ಮೊದಲಾದ ತೆತ್ತೀಸಾದಿ ದೇವರ್ಕಗಳು ಉಘೆ, ಉಘೇ ಎನುತಿರಲು, ಐಕ್ಯ ಬಸವಣ್ಣಂಗೆ ಠಾವಾವುದಯ್ಯ ಎಂಬಡೆ, ಅಂಗದ ಕಳೆಯಲ್ಲಿ ಬಲದಲ್ಲಿ ಬ್ರಹ್ಮನಸ್ಥಾನ, ಎಡದಲ್ಲಿ ನಾರಾಯಣನ ಸ್ಥಾನ, ಒಲ್ಲೆನಯ್ಯಾ. ಕೊರಳು ಗರಳಸ್ಥಾನ, ಬಾಯಿ ಅಪ್ಪುವಿನ ಸ್ಥಾನ, ನಾಸಿಕ ವಾಯುವಿನ ಸ್ಥಾನ, ಕಂಗಳು ಅಗ್ನಿಯ ಸ್ಥಾನ, ಜಡೆ ಗಂಗೆಯ ಸ್ಥಾನ, ನೊಸಲು ಚಂದ್ರನ ಸ್ಥಾನ, ಹಿಂದು ಸೂರ್ಯನ ಸ್ಥಾನ, ಚರಂಣಗಳು ಅಷ್ಟ ದಿಕ್ಪಾಲಕರ ಸ್ಥಾನ, ಗುಹ್ಯ ಕಾಮನ ಸ್ಥಾನ, ಹಸ್ತಂಗಳು ಕಪಾಲ ಖಟ್ವಾಂಗ ತ್ರಿಶೂಲ ಡಮರುಗ ಸ್ಥಾನ, ದೇಹ ರುಂಡ ಮಾಳೆಯ ಸ್ಥಾನ, ಕರ್ಣ ನಾಗೇಂದ್ರನ ಸ್ಥಾನ, ಇಂತೀ ಸ್ಥಾನಂಗಳ ನಾನೊಲ್ಲೆನಯ್ಯಾ! ಹೃದಯ ಮಧ್ಯ ಅಂತರಾಳದ ಏಕ ಪೀಠದ ಸಿಂಹಾಸನದ ತೆರಪುಗೊಡು ಕೂಡಲಸಂಗಮದೇವಾ.

೨. ನೀನೊಲಿದರೆ ಒಲಿ. ಒಲಿಯದಿದ್ದರೆ ಸಮವೇಧಿಸಿಕೊಳ್ಳಯ್ಯಾ! ಲಿಂಗದ ಬೆಳಗ ನೊಳಕೊಂಡು ಸಮವೇಧಿಸಿಕೊಳ್ಳಯ್ಯಾ! ಕೂಡಲಸಂಗಮದೇವರಲ್ಲಿ ತದ್ಗತವಾದೆನಯ್ಯಾ.

೩. ಮಾಡುವರಿಲ್ಲ ನೀ ಮಾಡದೆ, ನಿಲಸಾಲೆ. ಬೇಡುವರಿಲ್ಲ, ನೀ ಬೇಡದೆ, ನಿಲಸಾಲೆ. ಕೂಡುವರಿಲ್ಲ, ನೀ ಕೂಡದೆ, ನಿಲಸಲೆ. ಕೊಡುವರಿಲ್ಲ ನೀ ಕೊಡದೆ, ನಿಲಸಾಲೆ. ಕೂಡಲಸಂಗಮದೇವ, ತಾನು ತಾನಾಗಿ ನೀ ನೋಡದೆ, ನಿಲಸಾಲೆ.

೪. ಆಲಿಕಲ್ಲ ಹರಳಿನಂತೆ, ಅರಗಿನ ಪುತ್ಥಳಿಯಂತೆ, ತನು ಕರಗಿ ನೆರೆವ ಸುಖವ ನಾನೇನೆಂಬೆ? ಕಡೆಗೋಡಿವರಿವವೆನಗಯ್ಯ, ನಯನದ ಸುಖ ಜಲಂಗಳು. ನಮ್ಮ ಕೂಡಲಸಂಗಮದೇವರ ಮುಟ್ಟಿ ನೆರೆವ ಸುಖವ ನಾರಿಗೇನೆಂಬೆ?

೫. ನಾಲಿಗೆ ತಾಗಿದ ರುಚಿಗೆ ಮನ ಮನವೇ ಸಾಕ್ಷಿ ಸಾಲದೆ ಅಯ್ಯ? ಮಾಲೆಗಾರನ ಕೇಳಿ, ನನೆಯರಳುವದೆ? ಆಗಮುವನಿದಿರಿಂಗೆ ತೋರುವುದು ಆಚಾರವೇ ಅಯ್ಯ? ಕೂಡಲಸಂಗನ ಕೂಡಿದ ಕೂಟದ ಕರುಳ ಕಲೆಯ ನಿದಿರಿಂಗೆ ತೋರುವುದು ಆಚಾರವೇ ಅಯ್ಯಾ?

## ಪ್ರಾಣಲಿಂಗಿಯ ಐಕ್ಯ.

೧. ಎಲ್ಲರ ಗಂಡರ ಪರಿಯಂತಲ್ಲ ನೋಡವ್ವ. ನಮ್ಮ ನಲ್ಲನು ಸುಳಿಯಲಿಲ್ಲ. ಸುಳಿದು ಸಿಂಗಾರವ ಮಾಡಲಿಲ್ಲ. ಕೂಡಲಸಂಗಮದೇವನು ತನ್ನೊಳಗೆ ಮೈಚಿಟ್ಟನಾಗಿ.

೨. ಜ್ಞಾನದ ಗಮನದ, ಸಹಜದ ಉದಯದಲ್ಲಿ ಏನೆಂದರಿಯೆನು. ಲಿಂಗದ ಬೆಳಗು ಒಳಕೊಂಡುದಾಗಿ ಏನೆಂದರಿಯೆನು. ಕೂಡಲ ಸಂಗಮದೇವನ ಧ್ಯಾನದಿಂದ ಏನೆಂದರಿಯೆನು.

೩. ಕಾಯವೆಂಬ ಘಟಕ್ಕೆ ಚೈತನ್ಯವೇ ಸುಯಿಧಾನ. ಸಮತೆ ಎಂಬ ಜಲಕರಣಾದಿಗಳೇ ಶ್ರವಣ. ಜ್ಞಾನವೆಂಬ ಅಗ್ನಿಯ ನಿಕ್ಕಿ, ಮತಿ ಎಂಬ ಸಟ್ಟುಗದಲ್ಲಿ ಘಟ್ಟಿಸಿ, ಪಾಕಕ್ಕೆ ತಂದು, ಭಾವದಲ್ಲಿ ಕುಳ್ಳಿರಿಸಿ, ಪರಿಣಾಮ ದೋಗರವ ನೀಡಿದರೆ, ಕೂಡಲ ಸಂಗಮದೇವಂಗಾರೋಗಣೆಯಾಯಿತ್ತು.

೪. ಕಂಗಳು ತುಂಬಿದ ಬಳಿಕ ನೋಡಲಿಲ್ಲ. ಕಿವಿ ತುಂಬಿದ ಬಳಿಕ ಕೇಳಲಿಲ್ಲ. ಕೈಗಳು ತುಂಬಿದ ಬಳಿಕ ಪೂಜಿಸಲಿಲ್ಲ, ಮನ ತುಂಬಿದ ಬಳಿಕ ನೆನೆಯಲಿಲ್ಲ ಮಹಾಂತ ಕೂಡಲಸಂಗಮದೇವನ.

೫. ಅಡಿಗಡಿಗೆ ಸ್ಥಾನನಿಧಿ, ಅಡಿಗಡಿಗೆ ದಿವ್ಯ ಕ್ಷೇತ್ರ, ಅಡಿಗಡಿಗೆ ನಿಧಿ ನಿಧಾನ ನೋಡಾ! ಆತನಿರವೇ ಅವಿಮುಕ್ತಿ ಕ್ಷೇತ್ರ. ಕೂಡಲ ಸಂಗನ ಶರಣ ಸ್ವತಂತ್ರನಾಗಿ.



# ಶರಣನ ಜ್ಞಾನಿ.

೧. ಧನದಲ್ಲಿ ಶುಚಿ, ಪ್ರಾಣದಲ್ಲಿ ನಿರ್ಭಯ, ಇದಾವಂಗಳವಡುವುದಯ್ಯಾ! ನಿಧಾನ ತಪ್ಪಿ ಬಂದರೆ, ಒಲ್ಲೆನೆಂಬುವರಿಲ್ಲ. ಪ್ರಮಾದವಶ ಬಂದರೆ, ಹುಸಿಯೆನೆಂಬುವರಿಲ್ಲ. ನಿರಾಶೆ ನಿರ್ಭಯ ಕೂಡಲಸಂಗಮದೇವ ನೀನೊಲಿದ ಶರಣಂಗಲ್ಲದಿಲ್ಲ.

೨. ಶರಣ ಸನುಮತವಪ್ಪ ನಿಜಗುಣ ಭರಿತನಹಡೆ, ಸತ್ವ, ರಜ, ತಮ, ಕ್ರೋಧ, ಬಿಡದನ್ನಕ್ಕ, ಅನುಭಾವವೆಲ್ಲಿಯದೊ? ಆತ್ಮಸ್ತುತಿ ಪರನಿಂದೆ ಬಿಡದನ್ನಕ್ಕ, ಅರಿಷಡ್ವರ್ಗ ದಶವಾಯು ಬೆರಸಿಪ್ಪ ಕಳಂಕವಪ್ಪ ತನು ಬಿಡದನ್ನಕ್ಕ, ಸಂಸಾರ ಮಾದಲ್ಲದೆ, ಶರಣ ಸಜ್ಜನಿಕೆ ಸಮಯಾಚಾರ ನಿಜವ್ರತವು ದುರಾಚಾರಿಗಳಿಗಳವಡದು ನಮ್ಮ ಕೂಡಲಸಂಗನ ಶರಣರಿಗಲ್ಲದೆ.

೩. ಹಲಬರ ನುಂಗಿದ ಹಾವಿಂಗೆ ತಲೆ ಬಾಲವಿಲ್ಲ ನೋಡಾ! ಕೊಲುವುದು ತ್ರೈಜಗವೆಲ್ಲವ. ತನಗೆ ಬೇರೆ ಪ್ರಳಯವಿಲ್ಲ. ನಾಲ್ಕಡಿಯ ನೈದುದು. ಲೋಕವ ಕಡೆಯನೇ ಕಾಂಬುದು. ಸೂಕ್ಷ್ಮಪಥದಲ್ಲಿ ನಡೆವುದು. ತನಗೆ ಬೇರೆ ಒಡಲಿಲ್ಲ. ಅಹಮೆಂಬ ಗಾರುಡಿಗನ ನುಂಗಿತ್ತು. ಕೂಡಲಸಂಗನ ಶರಣರಲ್ಲದುಳಿದವರ.

೪. ಆದಿತ್ಯ ಸೋಮರು ಆಗಿಹೋಗುತ್ತಿಪ್ಪಾರು. ಬ್ರಹ್ಮಪ್ರಳಯಕ್ಕೊಳಗಾದ. ಹರಿ ಸಿಂಹಾಸನವಡಗಿತ್ತು. ಅಂತೋ ನಾಸ್ತಿ, ಇಂತೋ ನಾಸ್ತಿ. ರೋಮಜರೆಂಬುವರು ಸಿಟ್ಟುಗುಟ್ಟಿ, ತರುಮರನಡಿಯಲ್ಲಿದ್ದರು. ಮಾರ್ಕಂಡೇಯ ಮಹಾಮುನಿ ಸ್ವೇಚ್ಛಾಮರಣಿ ಎನಿಸಿಕೊಂಡನಲ್ಲದೆ, ಲಿಂಗದ ನಿಜವನರಿಯನು. ಇದು ಕಾರಣ ಕೂಡಲಸಂಗಮದೇವಾ, ನೀವು ಮಾಡಿದ ಬಯಲು ಭಕ್ಷಿಸಿತ್ತು ಅನಂತ ಹಿರಿಯರನು.

೫. ಆದಿಯಲ್ಲಿ ಶಿವಬೀಜವಲ್ಲದವರಿಗೆ ವೇದ್ಯವಾಗದು. ಶಿವಜ್ಞಾನ, ಶಿವಭಕ್ತಿ, ಲಿಂಗಸ್ಥಲ ವಳವಡದು, ಜಂಗಮಸ್ಥಲ ವಳವಡದು, ಪಾದೋದಕ ಪ್ರಸಾದಸ್ಥಲ ವಳವಡದು, ನರಕದಲ್ಲಿ ಬೀಳುವ ಕರ್ಮಿಗಳಿಗೆ ಕೂಡಲಸಂಗನ ಶರಣರನುಭಾವ ನೆಲೆಗೊಳ್ಳದು.

೬. ಮರುಳ ಕಂಡ ಕನಸಿನ ಪರಿಯಂತೆ ಶಿವಾಚಾರ. ಕರಿಯು ಕನ್ನಡಿಯೊಳಡಗಿದಂತಯ್ಯ! ಗುಣಿಯುವಗುಣಿಯೊಡನಾಡಿದರೆ, ಆದೇ ಆತನ

ಕರ್ಮದ ಫಲ ನೋಡಾ! ಕೂಡಲಸಂಗಮದೇವನ ಶರಣರನುಭಾವ ಭವ ದುಃಖಿಗಳಿಗೆ ವೇದ್ಯವಾಗದು.

೭. ಉಂಬ ಬಟ್ಟಲು ಬೇರೆ ಕಂಚಲ್ಲ, ನೋಡುವ ದರ್ಪಣ ಬೇರೆ ಕಂಚಲ್ಲ. ಭಾಂಡ ಭಾಜನ ಒಂದೇ. ಬೆಳಗೆ ಕನ್ನಡಿ ಎನಿಸಿತ್ತಯ್ಯಾ. ಅರಿದಡೆ ಶರಣ, ಮರೆದಡೆ ಮಾನವ. ಮರೆಯದೆ ಪೂಜಿಸು ಕೂಡಲಸಂಗನ.

೮. ಕೆರೆ ಹಳ್ಳ ಬಾವಿಗಳು ಮೈದೆಗೆದಡೆ, ಗುಳ್ಳೆ, ಗೊರಜೆ, ಚಿಪ್ಪು ಕಾಣಬಹುದು. ವಾರುಧಿ ಮೈದೆಗೆದಡೆ, ರತ್ನಂಗಳ ಕಾಣಬಹುದು. ಕೂಡಲಸಂಗನ ಶರಣರು ಮನದೆರೆದು ಮಾತನಾಡಿದಡೆ, ಲಿಂಗವ ಕಾಣಬಹುದು.

೯. ಪುಣ್ಯ ಪಾಪವೆಂಬುಭಯ ಕರ್ಮವನಾರು ಬಲ್ಲರಯ್ಯಾ? ಇದನಾರುಂಬರು? ಕಾಯ ತಾನುಂಬಡೆ, ಕಾಯ ಮಣ್ಣು. ಜೀವ ತಾನುಂಬಡೆ, ಜೀವ ಬಯಲು. ಈಯುಭಯ ನಿರ್ಣಯವ ಕೂಡಲಸಂಗಮದೇವ ನಿಮ್ಮ ಶರಣ ಬಲ್ಲ.

೧೦. ನಾರುಳಿಯ ಹಣಿದವನಾರಾದಡೆಯೂ ಆದಡೆ ನಾರುಳಿದಡೆ ಮುಂದೆ ಅಂಕುರಿತ ಫಲ ತಪ್ಪದು. ಮಾಡುವನ್ನಕ್ಕ ಫಲದಾಯಕ ಮಾಟವರದು, ನಿಮ್ಮಲ್ಲಿ ಸಯವಾದಡೆ ಆತನೇ ಅಚ್ಚಶರಣನಯ್ಯಾ, ಕೂಡಲಸಂಗಮದೇವಾ.

೧೧. ಭಕ್ತನ ಮಠವೆಂದು ಜಂಗಮ ನಡೆದು ಬಂದಲ್ಲಿ, ಆ ಭಕ್ತನು ಕಾಣುತ್ತ ಆಸನ ತ್ಯಜತೆಯ ಮಾಡುತ್ತ, ಕೊಂಕುತ್ತ, ಕೈ ಮುಗಿದು ನಿಂದಿರ್ದು, ಬಾಗಿ ಬಳುಕುತ ಬಿಜಯ ಮಾಡಿ ದೇವಾ ಎಂದು ಕರೆದು, ಕುಳ್ಳಿರಿಸಿ ಪಾದಾರ್ಚನೆಯ ಮಾಡಿ, ಪಾದೋದಕವ ಕೊಂಡು, ವಿಭೂತಿ ವೀಳೆಯಮಂ ಕೊಟ್ಟು, ಕಂಗಳ ತುಂಬಿ ನಿರೀಕ್ಷಿಸಿ, ಶ್ರೋತ್ರ ತುಂಬಿ ಹಾರೈಸಿ, ಬಾಯ ತುಂಬಿ ಮಾತಾಡಿ, ಏಗೂದು ಬೆಸನೆಂದು ತನು ಕರಗಿ ಮನಕರಗಿ ನೋಡಿ ಮಾಡುವುದು ಭಕ್ತಸ್ಥಲ. ಬಡವನಾಗಲಿ, ಬಲ್ಲಿದನಾಗಲಿ, ಇನಿತು ಮುಖ್ಯವಾಗಿ ಮಾಡಿಸಿಕೊಂಬುದು ಜಂಗಮಸ್ಥಲ. ಈ ಎರಡೊಂದಾದ ಘನವನಂತಿಂತೆಂದುಪಮಿಸಬಾರದು. ಅದಂತಿರಲಿ. ಇನಿತಿಲ್ಲದೆ ಮಾಡಿದ ಮಾಟ ಭಕ್ತಸ್ಥಲಕ್ಕೆ ಸಲ್ಲದು. ಫಲದಾಯಕ ನೈಸೆ. ಇನಿತಿಲ್ಲದೆ ಮಾಡಿಸಿಕೊಂಬುದು ಜಂಗಮಸ್ಥಲಕ್ಕೆ ಸಲ್ಲದು. ಉಪ

ಜೀವಿತನೈಸೆ. ಈ ಎರಡಕ್ಕೆಯೂ ಭವ ಹಿಂಗದು ಕಾಣಾ ಕೂಡಲಸಂಗಮ ದೇವಾ.

೧೨. ಲಿಂಗ ನಿಷ್ಠೆ ಪೂಜೆಯಲ್ಲಿ ಬೀಯ್ಯವಾಯಿತ್ತು. ಭಕ್ತಿ ನಿಷ್ಠೆ ಆಚರಣೆಯಲ್ಲಿ ಬೀಯ್ಯವಾಯಿತ್ತು. ಪ್ರಸಾದ ನಿಷ್ಠೆ ಜಿರಿಕೆಯಲ್ಲಿ ಬೀಯ್ಯವಾಯಿ ತ್ತು. ಒಂದೊಂದರ ನಿಷ್ಠೆ ಅಂದಂದಿಗೆ ಬೀಯ್ಯವಾಯಿತ್ತು. ಕೂಡಲ ಸಂಗಮದೇವಾ ತ್ರಿಜಗವನಾಳಿಗೊಂಡಿತ್ತು.

೧೩. ತೆರನನರಿವುದು ಅಪೂರ್ವ, ಅರಿದು ಮರೆವುದು ಅಪೂರ್ವ, ಕೂಡಿ ಶರಣೆಂಬುದು ಅಪೂರ್ವ. ಕೂಡಲಸಂಗಮ.ದೇವನ ಭಕ್ತಿ ಅಭ ಮಾನಿಯ ಜಪ್ಪನದಂತೆ.

೧೪. ಐದು ಮಾನವ ಕುಟ್ಟಿ, ಒಂದು ಮಾನವ ಮಾಡು ಕಂಡ್ಯಾ. ಮದವಳಿಗೆ ಇದು ನಮ್ಮ ಬಾಳುವೆ. ಮದವಳಿಗೆ ಇದು ನಮ್ಮ ವಿಸ್ತಾರ. ಮದವಳಿಗೆ ಮದವಳಿದು ನಿಜವುಳಿದ ಬಳಿಕ, ಅದು ಸತ್ಯ ಕಾಣಾ ಕೂಡಲಸಂಗಮದೇವ,

೧೫. ಕುಲ ಮದವಳಿಯದನ್ನಕ್ಕ, ಶರಣನಾಗಲೇಕೆ? ವಿಧಿವಶ ಬಿಡದನ್ನಕ್ಕ, ಭಕ್ತನಾಗಲೇಕೆ? ಹಮ್ಮಿನ, ಸೊಮ್ಮಿನ ಸಂಬಂಧಬಿಟ್ಟು, ಕಿಂಕರರ ಕಿಂಕರನಾಗಬೇಕು. ಹೆಪ್ಪನೆರೆದ ಹಾಲು ಕೆಟ್ಟು, ತುಪ್ಪವಪ್ಪಂತೆ ಇಪ್ಪರು ಕೂಡಲಸಂಗಮದೇವಾ ನಿಮ್ಮ ಶರಣರು.

೧೬. ಮಣ್ಣು ಮಡಿಕೆ ಮಣ್ಣಾಗದು, ಕ್ರಿಯಳಿದು. ಬೆಣ್ಣೆ ಕರಗಿ ತುಪ್ಪವಾಗಿ, ಮರಳಿ ಬೆಣ್ಣೆಯಾಗದು ಕ್ರಿಯಳಿದು. ಹೊನ್ನು ಕಬ್ಬಿಣವಾ ಗದು ಕ್ರಿಯಳಿದು. ಮುತ್ತು ನೀರಲ್ಲಿ ಹುಟ್ಟಿ ಮುತ್ತೆ ನೀರಾಗದು ಕ್ರಿಯ ಳಿದು. ಕೂಡಲಸಂಗನ ಶರಣನಾಗಿ, ಮರಳಿ ಮಾನವನಾಗನು ಕ್ರಿಯಳಿದು.

೧೭. ಪೂರ್ವಜನ್ಮ ನಿವೃತ್ತಿಯಾಗಿ, ಗುರುಕರುಣವಿಡಿದಂಗೆ ಬಂಧ ನವೆಲ್ಲಿಯದೋ? ಭವಬಂಧನವೆಲ್ಲಿಯದೋ, ಸಂಕಲ್ಪ ವಿಕಲ್ಪವೆಂಬ ಸಂದೇಹವ ಕಳಿದುಳಿದವಂಗೆ ಕೂಡಲಸಂಗಮದೇವರ ತ್ರಿಸಂಧ್ಯಾಕಾಲದಲ್ಲಿ ಮಾಣದೇ ನೆನೆವಂಗೆ?

೧೮ ಲಗ್ನವೆಲ್ಲಿಯದೋ, ವಿಘ್ನವೆಲ್ಲಿಯದೋ ಸಂಗಯ್ಯ? ದೋಷವೆ ಲ್ಲಿಯದೋ, ದುರಿತವೆಲ್ಲಿಯದೋ ಸಂಗಯ್ಯ? ನಿಮ್ಮ ಮಾಣದೆ ನೆನೆವಂಗೆ ಭವಕರ್ಮವೆಲ್ಲಿಯದೋ ಕೂಡಲಸಂಗಮದೇವಾ?

## ಶರಣನ ಶರಣ.

೧. ಶರಣ ನಿದ್ರೆಗೈದಡೆ ಜಪ ಕಾಣಿರೋ. ಶರಣನೆದ್ದು ಕುಳಿತಡೆ ಶಿವರಾತ್ರಿ ಕಾಣಿರೋ. ಶರಣ ನಡೆದುದೇ ಪಾವನ ಕಾಣಿರೋ. ಶರಣ ನುಡಿದುದೇ ಶಿವತತ್ವ ಕಾಣಿರೋ. ಕೂಡಲಸಂಗನ ಶರಣನ ಕಾಯವೇ ಕೈಲಾಸ ಕಾಣಿರೋ.

೨. ಉಪಮಿಸಬಾರದ ಉಪಮಾತೀತರು, ಕಾಲ ಕರ್ಮರಹಿತರು ಭವ ರಹಿತರು, ಕೂಡಲಸಂಗಮದೇವ, ನಿಮ್ಮ ಶರಣರು.

೩. ಭವಕ್ಕೆ ಹುಟ್ಟಿದವನಲ್ಲ. ಸಂದೇಹಿ ಸೂತಕಿಯಲ್ಲ. ಆಕಾರ ನಿರಾಕಾರನಲ್ಲ ನೋಡಯ್ಯಾ! ಕಾಯ ವಂಚಕನಲ್ಲ, ಜೀವ ವಂಚಕನಲ್ಲ, ಶಂಕೆ ಇಲ್ಲದ ಮಹಾ ಮಹಿಮನು ನೋಡಯ್ಯಾ! ಕೂಡಲಸಂಗನ ಶರಣನುಪಮಾತೀತ ನೋಡಯ್ಯಾ.

೪. ಬ್ರಹ್ಮಂಗೆ ವಾಕ್ಪರುಷ, ವಿಷ್ಣುವಿಂಗೆ ನಯನಪರುಷ, ರುದ್ರಂಗೆ ಹಸ್ತಪರುಷ, ನಮ್ಮ ಕೂಡಲಸಂಗನ ಶರಣರಿಗೆ ಪಾದವೇ ಪರುಷ.

೫. ಸಮುದ್ರ ಘನವೆಂಬೆನೆ? ಧರೆಯ ಮೇಲಡಗಿತ್ತು. ಧರೆ ಘನವೆಂಬೆನೆ? ನಾಗೇಂದ್ರನ ಫಣಾಮಣಿಯ ಮೇಲೆ ಅಡಗಿತ್ತು. ನಾಗೇಂದ್ರ ಘನವೆಂಬೆನೆ? ಪಾರ್ವತಿಯ ಕಿರುಕುಣಿಯ ಮುದ್ರಿಕೆಯಾಯಿತ್ತು. ಅಂಥ ಪಾರ್ವತಿ ಘನವೆಂಬೆನೆ? ಪರಮೇಶ್ವರನ ಅರ್ಧಾಂಗಿಯಾದವಳು. ಅಂಥ ಪರಮೇಶ್ವರ ಘನವೆಂಬೆನೆ? ನಮ್ಮ ಕೂಡಲ ಸಂಗನ ಶರಣರ ಮನದ ಕೊನೆಯ ಮೊನೆಯ ಮೇಲಡಗಿದನು.

೬. ಆಚಾರ ಲಿಂಗವಿಡಿದು ಅನುಭಾವ ಲಿಂಗ ಸಿದ್ಧಿ. ಅನುಭಾವ ಲಿಂಗವಿಡಿದು ಮಾರ್ಗ ಕ್ರಿಲಿಂಗ ಸಿದ್ಧಿ. ಮಾರ್ಗ ಕ್ರಿಲಿಂಗವಿಡಿದು ಮೀರಿದ ಕ್ರಿಲಿಂಗ ಸಿದ್ಧಿ. ಮೀರಿದ ಕ್ರಿಲಿಂಗವಿಡಿದು ಕ್ರಿಯಾನಿಷ್ಪತ್ತಿ ಲಿಂಗಸಿದ್ಧಿ. ಇದುಕಾರಣ ಕೂಡಲ ಸಂಗಮದೇವಾ, ಲಿಂಗವಿಡಿದು ಲಿಂಗಸಿದ್ಧಿ.

೭. ನೆಲನೊಂದೇ ಹೊಲೆಗೇರಿ ಶಿವಾಲಯಕ್ಕೆ. ಜಲ ಒಂದೇ ಶೌಚಾಚಮನಕ್ಕೆ. ಕುಲ ಒಂದೇ ತನ್ನ ತಾನರಿದಂಗೆ. ಫಲ ಒಂದೆ ಷಡುದರ್ಶನ ಮುಕ್ತಿಗೆ. ನಿಲವು ಒಂದೇ ಕೂಡಲ ಸಂಗಮ ದೇವಾ ನಿಮ್ಮ ನರಿದವಂಗೆ.

## ಶರಣನ ಭಕ್ತಿ.

೧ ಮರ್ತ್ಯ ಪಿಂಡಂಗಳೆಲ್ಲವು ಶಿವನಿದ್ದೆಡೆಯನರಿಯವು. ಪೂರ್ವ ಪಿಂಡಂಗಳೆಲ್ಲವು ಶಿವನಾದ್ಯಂತವನರಿಯವು. ಕಾಲ ಪಿಂಡಂಗಳೆಲ್ಲವು ಶಿವನ ನಿಲುಕಡೆಯನರಿಯದೆ, ಕಾಲ ಚಕ್ರದೊಳಗಾದವೆಲ್ಲವು. ಸಂಶಯ ಪಿಂಡಂಗಳೆಲ್ಲವ ಮರೆದು ನಿಮ್ಮ ಶರಣ ಸೇವೆಯಲ್ಲಿರಿಸಯ್ಯ ಕೂಡಲಸಂಗಮದೇವಾ.

೨. ಪರಮ ತತ್ವದ ನಿಜ ಸಂಯುಕ್ತರ ಆನು ನೀನೆಂಬ ಶಬ್ದ ಸುಖಿಗಳ ತೋರಾ ಎನಗೆ! ಮಹಾನುಭಾವರ ತೋರಾ ಎನಗೆ! ಲಿಂಗೈಕ್ಯರ ಲಿಂಗ ಸುಖಿಗಳ ಲಿಂಗ ಗೂಡಾಗಿಪ್ಪರ ಲಿಂಗಾಭಿಮಾನಿಗಳ ತೋರಾ ಎನಗೆ! ಅಹೋರಾತ್ರಿ ನಿಮ್ಮ ಶರಣರ ಸೇವೆಯಲ್ಲಿರಿಸು ಕೂಡಲಸಂಗಮದೇವಾ.

೩. ಅಯ್ಯಾ, ಸಜ್ಜನ ಸದ್ಭಾವರ ಸಂಗದಿಂದ ಮಹಾನುಭಾವರ ಕಾಣಬಹುದಯ್ಯ! ಮಹಾನುಭಾವರ ಸಂಗದಿಂದ ಶ್ರೀಗುರುವನರಿಯಬಹುದು. ಲಿಂಗವನರಿಯಬಹುದು. ಜಂಗಮವನರಿಯಬಹುದು. ಪ್ರಸಾದವನರಿಯಬಹುದು. ತನ್ನ ತಾನರಿಯಬಹುದು. ಇದು ಕಾರಣ ಸದ್ಭಕ್ತರ ಸಂಗವನೆ ಕರುಣಿಸು. ಕೂಡಲಸಂಗಮದೇವಾ ನಿಮ್ಮ ಧರ್ಮ.

೪. ಮರ ಮರ ಮಥನದಿಂದ ಅಗ್ನಿ ಹುಟ್ಟಿ, ಆ ಮರನೆಲ್ಲವ ಸುಡದಿಪ್ಪುದೆ? ಮಹಾನುಭಾವರ ಸಂಗದಿಂದ ಜ್ಞಾನಾಗ್ನಿ ಹುಟ್ಟಿ, ಎನ್ನ ತನುಗುಣವೆಲ್ಲವ ಸುಡದಿಪ್ಪುದೆ? ಇದು ಕಾರಣ ಮಹಾನುಭಾವರ ತೋರಿಸು ಕೂಡಲಸಂಗಮದೇವಾ.

೫. ಅರಿದುದನರಿಯಲೊಲ್ಲದು. ಅದೆಂತಯ್ಯ? ಮರೆದುದ ಮರೆಯಲೊಲ್ಲದು, ಅದೆಂತಯ್ಯ? ಅರಿದು ಮರೆದ ಮನವ ಕೂಡಲಸಂಗಯ್ಯ ತಾನೆ ಬಲ್ಲ.

೬. ಮೊಸಲು ಬೀಸರವೋಗದ ಪರಿಯ ನೋಡಾ! ಕಾಲು ತಾಗಿದ ಅಗ್ಗವಣಿ, ಕೈಮುಟ್ಟಿದ ಅರ್ಪಿತ, ಮನಮುಟ್ಟಿದ ಆರೋಗಣೆಯನೆಂತು ಘನವೆಂಬೆನಯ್ಯ? ಬಂದ ಪರಿಯಲ್ಲಿ ಪರಿಣಾಮಿಸಿ, ನಿಂದ ಪರಿಯಲ್ಲಿ ನಿಜವ ಮಾಡಿ, ಆನಂದ ಪರಿಯಲ್ಲಿ ಕೈಕೊಳ್ಳೋ, ಕೂಡಲಸಂಗಮದೇವಾ.

೭. ಪಾಲೆಂಜಲು ವತ್ಸನ, ಉದಕವೆಂಜಲು ಮತ್ಸ್ಯದ, ಪುಷ್ಪ ಎಂಜಲು ತುಂಬಿಯ. ಎಂತು ಪೂಜಿಸುವೆನಯ್ಯ? ಶಿವಶಿವಾ ಎಂತು ಪೂಜಿಸುವೆ? ಈ ಎಂಜಲನತಿಗಳವಡೆ, ಎನ್ನಳವಲ್ಲ. ಬಂದುದ ಕೈಕೋ ಕೂಡಲಸಂಗಮದೇವಾ.

೮. ಶುದ್ಧವಾಯಿತ್ತೆಂಬೆನೆ? ಸುಯಿಧಾನಿ ನಾನಲ್ಲ. ಅನುವಾಯಿತ್ತೆಂಬೆನೆ? ಅವಧಾನಿ ನಾನಲ್ಲ. ಸುಯಿಧಾನ ಅವಧಾನ ಅರ್ಪಿತವ ನಾನರಿಯೆ. ಇದ್ದ ಪರಿಯಲಿ ನೀಡಿದರೆ, ಬಂದ ಪರಿಯಲಿ ಕೈಕೋ ಕೂಡಲಸಂಗಮದೇವಾ.

೯. ಪಾಪಾರ್ಜನೆಯ ಮಾಡುವೆನಯ್ಯಾ ಪಾದೋದಕವ ಹಂಗಿಂಗೆ. ಶರಣಾರ್ಥಿ ಎಂಬೆನಯ್ಯ ಒಕ್ಕುದ ಕೊಂಬ ಹಂಗಿಂಗೆ. ಎಡೆ ಯಾಟ ಕಡ ಬಡ್ಡಿಯ ಕೊಟ್ಟು ಕೆಟ್ಟಿತ್ತು ನೋಡಾ ಭಕ್ತಿ. ಕೂಡಲಸಂಗನ ಶರಣರ ನಿಲವನರಿಯದೆ ಮುಯ್ಯಿಗೆ ಮುಯ್ಯಾಗಿ ಕೆಟ್ಟಿತ್ತಯ್ಯ ಎನ್ನ ಭಕ್ತಿ.

೧೦. "ಯಸ್ಯಕ್ರೀತಸ್ಯ ಭವತಿ" ಎಂದು ಕಟ್ಟಾಚಾರವಲು ಇದ್ದು ಆನು ಅನುಸರಿಸಿಕೊಂಡು, ನಡೆಸನ್ನಕ್ಕ, ಕರ್ಮ ಕಾಂಡಿಯಲ್ಲ. ಉತ್ಪತ್ತಿ ಸ್ಥಿತಿ ಭೋಗ ಭುಕ್ತಿ ಕಾಯುವುಪ್ಪನ್ನಕ್ಕ, ಭಕ್ತಿಕಾಂಡಿಯಲ್ಲ. ಪರವು ಸಾಧ್ಯವಾಯಿತ್ತೆಂನು ಕ್ರಿಯೆಯುಳ್ಳವ ಮೀರಿ ನಡೆವೆನು, ಪರತತ್ವವನರಿದಿಹೆನೆಂಬನ್ನಕ್ಕ ಜ್ಞಾನ ಕಾಂಡಿಯಲ್ಲ. ಇನ್ನು ಕರ್ಮ ಕಾಂಡಿ, ಭಕ್ತಿ ಕಾಂಡಿ, ಜ್ಞಾನ ಕಾಂಡಿ, ಈ ತ್ರಿವಿಧವಲ್ಲಿ ವಂಚಕನಾದರೆ ಈಸು ವಿಧದೊಳಗೆ ಅಂಗವಿಲ್ಲ, ಮೇಲೆ ಸತ್ಪುರುಷರ ಸಂಗವಿಲ್ಲ, ಯುಕ್ತಿ ಇಲ್ಲ. ಎನಗೆ ಭಕ್ತಿ ಎಂತಹುದಯ್ಯ? ಬಲ್ಲವರ ಬೆಸಗೊಂಡರೆ, ಎನ್ನ ಬಿಮ್ಮು ಕೆಟ್ಟಿಹುದೆಂದು, ಮೆಲ್ಲನೆ ಪ್ರಸಂಗದಿಂದ ತಿಳಿದು ನೋಡುವೆ. ಕೂಡಲಸಂಗಮದೇವಾ ಎನ್ನ ಗುಣವ ನೋಡದೆ ಶಿವರಾತ್ರಿಯ ಸಂಕಣ್ಣಗಳಿಗೆ ಕರುಣಿಸಿದಂತೆ ಎನಗೆ ಕೃಪೆಯ ಮಾಡಯ್ಯಾ.

೧೧. ಕಳಾ ಬಿಂದು ವರ್ಣ ಷಡುಪಿ ಎಂಬ ಹೆಂಗುಸಿನ ಕೈಯ್ಯಲು, ಜಲಾಕಾರವೆಂಬ ಗಡಿಗೆ ಇದ್ದಿತ್ತು. ಆ ಗಡಿಗೆಯಲ್ಲಿ ಚನ್ನಬಸವಣ್ಣ ನೀರ ತಂದ. ಮಡಿವಾಳಯ್ಯ ಸುಯಿಧಾನವ ತಂದ. ಇದರೊಳೆಯನುರುಹಿ ಕೊಡಾ ಕೂಡಲಸಂಗಮದೇವಾ.

೧೨. ದಿಟ ಮಾಡಿ ಪೂಜಿಸಿದಡೆ, ಸಟೆ ಮಾಡಿ ಕಳೆವೆ. ಸಟೆ ಮಾಡಿ ಪೂಜಿಸಿದಡೆ, ದಿಟ ಮಾಡಿ ಕಳೆವೆ. ಏನೆಂಬೆನೆಂತೆಂಬೆ? ಸುಖಕ್ಕೆ ತುಂಬಿದ ದೀವಿಗೆ ಮನೆ ಎಲ್ಲವ ಸುಟ್ಟಂತೆ, ಆನು ಮಾಡಿದ ಭಕ್ತಿ ಎನಗಿಂತಾಯಿತ್ತು, ಕೂಡಲಸಂಗಮದೇವಾ.

೧೩. ಎಂಬತ್ತೆಂಟು ಪವಾಡವ ಮೆರೆದು, ಹಗರಣದ ಚೋಹದಂತಾಯಿತ್ತೆನ್ನ ಭಕ್ತಿ. ತನುವಿನೊಳಗೆ ಮನ ಸಿಲುಕದೆ, ಮನದೊಳಗೆ ತನು ಸಿಲುಕದೆ, ತನು ಅಲ್ಲಮನಲ್ಲಿ ಸಿಲುಕಿತ್ತು. ಮನ ಚನ್ನಬಸವಣ್ಣನಲ್ಲಿ ಸಿಲುಕಿತ್ತು. ನಾನೇತರಲ್ಲಿ ನೆನೆವೆನಯ್ಯ, ಕೂಡಲಸಂಗಮದೇವಾ?

೧೪. ಭಕ್ತನೆನಿಸುವೆನಯ್ಯ, ಮೆಲ್ಲಮೆಲ್ಲನೆ. ಯುಕ್ತನೆನಿಸುವೆನಯ್ಯ ಮೆಲ್ಲಮೆಲ್ಲನೆ. ಸಾರಿ ಶರಣ ನೆನಿಸುವೆನಯ್ಯ ಮೆಲ್ಲಮೆಲ್ಲನೆ. ಎಡಹುಗುಳಿಗಳ ದಾಂಟಿ ಬರಬರ ಲಿಂಗೈಕ್ಯನೆನಿಸುವೆನಯ್ಯ. ಕೂಡಲಸಂಗಮದೇವಾ, ನಿಮ್ಮಿಂದಧಿಕನೆನಿಸುವೆನಯ್ಯಾ.

೧೫. ಬಸವ ಬಾರಯ್ಯ! ಮರ್ತ್ಯಲೋಕದೊಳಗೆ ಭಕ್ತರುಂಟೆ ಹೇಳಯ್ಯ! ಮತ್ತಾರೂ ಇಲ್ಲಯ್ಯಾ. ಮತ್ತಾರೂ ಇಲ್ಲಯ್ಯಾ. ನಾನೊಬ್ಬನೆ ಭಕ್ತನು. ಮರ್ತ್ಯಲೋಕದೊಳಗಣ ಭಕ್ತರೆಲ್ಲರು ಜಂಗಮಲಿಂಗ, ನೀನೇ ಅಯ್ಯ, ಕೂಡಲಸಂಗಮದೇವಾ.

## ಶರಣನ ಮಾಹೇಶ್ವರ.

೧. ಪರಮಪ್ರಭುವೆ ನೀ ಮುನಿದೆನ್ನ ಮರ್ತ್ಯಲೋಕದೊಳಗಿರಿಸಿದರೆ ಆನು ಸೈರಿಸಿದೆನಯ್ಯ. ಕುಲಮದ ಛಲಮದವಿದೇನಯ್ಯ. ದರುಶನಭ್ರಾಂತಿ ಇದೇನಯ್ಯ. ಕ್ರಿಯಾ ಕರ್ಮ ಸೂತಕವಿದೇನಯ್ಯ. ॥ಶ್ಲೋಕ॥ ಯದ್ಯಪಿ ಸ್ಯಾತ್ ತ್ರಿಕಾಲಜ್ಞಶ್ಚ। ತ್ರೈಲೋಕ್ಯಾಕರ್ಷಣಕ್ಷಮಃ॥ ತಥಾಪಿಲೌಕಿಕಾಚಾರಂ। ಮನಸಾಪಿ ನ ಲಂಘಯೇತ್॥ ಇಂತೆಂಬುದ ಮೀರಿದೆನಾಗಿ, ಲಿಂಗಯ್ಯ ನಿಮ್ಮ ನಂಬಿದೆನಯ್ಯ. ಇನ್ನು ಕಲಿಯುಗವಲ್ಲಿ ಬಳಸಿದರೆ, ಕೂಡಲಸಂಗಮದೇವಾ ನಿಮ್ಮ ರಾಣಿವಾಸದಾಣೆ.

೨. ತನುಮನಧನವೆಂಬ ಕನ್ನಡಿಯ ನೋಡಯ್ಯ! ಎನ್ನದು ಅಲ್ಲ, ನಿನ್ನದು ಅಲ್ಲ. ಬರಿಯ ಭ್ರಮೆಯ ಮಾತು. ಆ ಭ್ರಮೆಗೊಳಗಾಗದೆ, ನಿಮ್ಮ ಶ್ರೀಚರಣವ ಬಿಡೆ ಕೂಡಲಸಂಗಮದೇವಾ.

೩. ಭಕ್ತ, ಮಾಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣೈಕ್ಯನು ಮೆಲ್ಲಮೆಲ್ಲನೆ ಆದೆನೆಂಬನ್ನಬರ ನಾನು ವಜ್ರದೇಹಿಯೆ? ನಾನೇನು ಅಮೃತವ ಸೇವಿಸಿದೆನೆ? ಆನು ಮರುಜೀವಣಿಯ ಕೊಂಡೆನೆ? ನುಡಿದ ನುಡಿಯೊಳಗೆ ಷಡುಸ್ಥಲಬಂದು, ಎನ್ನ ಮನವನಿಂಬುಗೊಳ್ಳದಿದ್ದರೆ, ಸುಡುವೆನೀ ತನುವನು ಕೂಡಲಸಂಗಮದೇವಾ.

೪. ಕುಲಗೆಟ್ಟಡೆ, ಕೆಡಬಹುದಲ್ಲದೆ, ಛಲಗೆಡಬಾರದಯ್ಯ. ಛಲಗೆಟ್ಟರೆ ಕೆಡಬಹುದಲ್ಲದೆ, ಭಕ್ತಿಯ ಅನು ಕೆಡಬಾರದಯ್ಯ. ಭಕ್ತಿಯ ಅನು ಕೆಟ್ಟರೆ, ಕೆಡಬಹುದಲ್ಲದೆ ಆಯತ ಕೆಡಬಾರದು. ಆಯತ ಕೆಟ್ಟರೆ ಕೆಡಬಹುದಲ್ಲದೆ, ಸ್ವಾಯತ ಕೆಡಬಾರದಯ್ಯ. ಎಲೆ ಕೂಡಲಸಂಗಮದೇವ ಮುನ್ನ ಮುಟ್ಟಿತ್ತೆ ಮುಟ್ಟಿತ್ತು. ಇನ್ನು ಮುಟ್ಟದೆನಾದರೆ ನಿಮ್ಮ ರಾಣಿವಾಸದಾಣೆ.

೫. ಅಷ್ಟ ವಿಧಾರ್ಚನೆ ಷೋಡಶೋಪಚಾರವಲ್ಲದೆ, ನಿಮ್ಮ ಮುಟ್ಟಲರಿಯದವರ ಕಂಡಡೆ, ಅಯ್ಯ ಎಂತೆಂಬೆನವರ? ಆವ ಭಾವದಲ್ಲಿ ಆವ ಜ್ಞಾನದಲ್ಲಿ ಆವ ಸುಖದಲ್ಲಿ ಅರಿವವರದಾರಯ್ಯ! ಏನೆಂಬೆ? ನಿಮ್ಮಲ್ಲಿ ಸನ್ಮುಕ್ತರಾದ ಸತ್ಯ ಶರಣರ ಕಂಡು, ಕೂಡಲಸಂಗಮದೇವನವರನಯ್ಯ ಎಂಬೆನು.

೬. ಮರನ ಹೂವ ಕೊಯ್ದು, ಮರಕ್ಕೇರಿಸಿ, ನದಿಯುದಕವ ನದಿಗರ್ಪಿತವ ಮಾಡಿ ಕರುವನಗಲಿಸಿ ತಾಯಮೊಲೆವಾಲ ಮರುಗಿಸಿ ಕರದುಣಬೇಡವೋ! ಕೂಡಲಸಂಗಮದೇವ ಮಾಡಿದ ಮಾಯೆ ಹಲಬರ ಬಾಯಟೊಣೆದು ಹೋಯಿತ್ತು.

೭. ತಾಪತ್ರಯವೆಂದರೆ, ರೂಪ ಕಾಣುತ್ತ ಕನಲಿದ. ಕೋಪದಲ್ಲಿ ಶಿವಕಳೆಯುದ ಕರಡಿಗೆಯನೆ ಮುರಿದ. ಧೂಪಗುಂಡಿಗೆಯನೊಡೆದ. ದೀಪಾರತಿಯ ನಂದಿಸಿದ. ಬಹ ಪರಿಯಾಣದೋಗರವ ತುಡುಕಿದ. ಪಾಪಕರ್ಮಿ ಕೂಡಲಸಂಗಮದೇವಾ ನಿಮ್ಮ ಶರಣ.

೮. ಈ ಲೋಕದ ಭೀತರು ಆ ಲೋಕದ ಕಲಿಗಳು. ಸಾಲೋಕ್ಯ ಸಾಮೀಪ್ಯ, ಸಾರೂಪ್ಯ, ಸಾಯುಜ್ಯರೆಲ್ಲರು ಅಜನಿತಂಗೆ ಸರಿಯೇ? ಮೂಜಗದಲ್ಲಿ ನಿರುತರು ಕೂಡಲಸಂಗನ ಶರಣರು ತ್ರಿವಿಧವನರಿಯರು.

೯. ತಾಗು ನಿರೋಧದ ಆಗು ಹೋಗನರಿಯದ ಶರಣನ ಚರಿತ್ರವ ನೋಡಿ, ನೋಡಿ ಬೆರಗಾದೆನಯ್ಯಾ. ಕೂಡಲಸಂಗಮದೇವನಲ್ಲಿ ತಾನೇ ಸುಖಿಧಾನಿಯಾಗಿ.

೧೧. ಜಗವ ಸುತ್ತಿಪ್ಪುದು ನಿನ್ನ ಮಾಯೆಯಯ್ಯಾ! ನಿನ್ನ ಸುತ್ತಿಪ್ಪುದು ಎನ್ನ ಮನ ನೋಡಯ್ಯಾ! ಜಗಕ್ಕೆ ಬಲ್ಲಿದ ನೀನು. ಆನು ನಿನಗೆ ಬಲ್ಲಿದನು. ಕಂಡಯ್ಯಾ! ಕರಿಯು ಕನ್ನಡಿಯೊಳಗಡಗಿದಂತಯ್ಯ. ಎನ್ನೊಳಗೆ ನೀನಡಗಿದೆ ಕೂಡಲಸಂಗಮದೇವಾ.

## ಶರಣನ ಪ್ರಸಾದಿ.

೧. ಎನಗೆ ಗುರುವಿನ ಪ್ರಸಾದ. ನಿನಗೆ ಜಙ್ಗಮ ಪ್ರಸಾದ. ಎನಗೆಯೂ ನಿನಗೆಯೂ ಸಮಯಾಚಾರ ಸರಿ. ಕೂಡಲಸಂಗಮದೇವಾ, ನೀನೆನಗೆ ಚಿಕ್ಕ ತಮ್ಮ.

೨. ಶುದ್ಧಾತ್ಮ ಪರಮಾತ್ಮರಿಬ್ಬರು ಒಂದು ರತ್ನಕ್ಕೆ ಹೆಣಗಾಟವ ಮಾಡಿಹರು. ಅವರ ಹೆಣಗಾಟವ ನೋಡಿ, ಆ ರತ್ನವ ಸೆಳೆದುಕೊಂಡರೆ, ಕೂಡಲಸಂಗಮದೇವಂಗಾರೋಗಣೆಯಾಯಿತ್ತು.

೩. ಆ ರತ್ನ ಪ್ರಸಾದವನಾರಾಧಿಸುತ್ತಿರಲು, ಆ ಪ್ರಸಾದದಲ್ಲಿ ಬೀಳುತ್ತ ಆಳುತ್ತಿದ್ದಿತ್ತು ನೋಡಾ! ಅದ ಹಲಬರು ನೋಡಿ ನೋಡಿ, ಹೋಗುತ್ತಿದ್ದರು. ಆ ಪ್ರಸಾದ ತಾನೇ ಬಂದು ಎನ್ನ ಸುತ್ತಿಕೊಂಡಿತ್ತು. ಇದ ಪದಾರ್ಥವ ಮಾಡಿಕೊಳ್ಳೈ, ಕೂಡಲಸಂಗಮದೇವಾ.

೪. ಎಲ್ಲರ ಗಂಡರು ಬೇಂಟೆಯು ಹೋದರು. ನೀನೇಕೆ ಹೋಗೆ, ಎಲೆ ಗಂಡನೆ? ಸತ್ತುದ ತಾರದಿರು. ಕೈಮುಟ್ಟಿ ಕೊಲ್ಲದಿರು. ಅಡಗಿಲ್ಲದೆ ಮನೆಗೆ ಬಾರದಿರು. ದೇವರ ಧರ್ಮದಲೊಂದು ಬೇಂಟೆ ದೊರೆಕೊಂಡರೆ, ಕೂಡಲ ಸಂಗಮದೇವಂಗರ್ಪಿತವ ಮಾಡುವೆ ಎಲೆ ಗಂಡನೇ.

## ಶರಣನ ಪ್ರಾಣಲಿಂಗಿ.

೧. ಕಣ್ಣೊಳಗೆ ಕಣ್ಣಿರ್ದು ಕಾಣಲೇಕರಿಯಿರಯ್ಯ! ಕಿವಿಯೊಳಗೆ ಕಿವಿಯಿರ್ದು, ಕೇಳಲೇಕರಿಯಿರಯ್ಯ! ಘ್ರಾಣದೊಳಗೆ ಘ್ರಾಣವಿರ್ದು ವಾಸಿಸಲೇಕರಿಯಿರಯ್ಯ! ಜಿಹ್ವೆಯೊಳಗೆ ಜಿಹ್ವೆ ಇರ್ದು, ರುಚಿಸಲೇಕರಿಯಿರಯ್ಯ! ಸ್ಪರ್ಶನದೊಳಗೆ ಸ್ಪರ್ಶನವಿರ್ದು, ಮುಟ್ಟಲೇಕರಿಯಿರಯ್ಯ! ಪ್ರಾಣದೊಳಗೆ ಪ್ರಾಣವಿರ್ದುದನೇಕರಿಯಿರಯ್ಯ! ಕಾಯ

ನೊಳಗೆ ಕಾಯವಿರ್ದು, ಬಿಡದು ಜೀರಾಗವು. ಕೂಡಲಸಂಗಮದೇವ ಸೀಸಿಕ್ಕಿದ ಅಣಕದ ಭೇದವ ಭೇದಿಸಬಾರದಯ್ಯಾ.

೨. ಗ್ರಹ ಬಂದು ಆವರಿಸಲೊಡನೆ, ತನ್ನ ಮರಿಸುವದು. ಮತ್ತೊಂದಕ್ಕಿಂಬುಗೊಡಲೀಯದಯ್ಯಾ! ಕೂಡಲ ಸಂಗಮದೇವನ ಅರಿವು ಅನುಪಮವಾಗಲೊಡನೆ, ಬಿವಹಾರದೊಳಗಿರಲೀಯದಯ್ಯಾ.

೩. ಭೂತಿಗನ ಸೀರೆಯು ಸಾತ್ವಿಕ ನೆರೆಯುಟ್ಟರೆ, ಭೂತಿಗ ಸಾತ್ವಿಕನಾದ. ಸಾತ್ವಿಕ ಭೂತಿಗನಾದ. ಈ ಮಾತು ಬಿದ್ದುದು ನೋಡಾ. ರಾಜಬೀದಿಯಲಿ ಅಯ್ಯ ಭೂತ ಕೆಣಕಿದರಿಲ್ಲ. ಮಾತು ಮುಟ್ಟಿದರಿಲ್ಲ. ಓತು ಕೂಡುವ ಅನುವ ಕೂಡಲಸಂಗಮದೇವ ತಾನೇ ಬಲ್ಲಾ.

## ಶರಣನ ಐಕ್ಯ.

೧. ಮನೆಯು ಗಂಡನ ಮನೆವಾರ್ತೆಯನೇನ ಹೇಳುವೆನವ್ವ! ಅಂಗವಿದ್ಯೆಯನೊಲ್ಲ. ಕಂಗಳೊಳಗಣ ಕಸವ ಕಳೆದಲ್ಲದೆ, ನೋಡಲೀಯ್ಯ. ಕೈಯ್ಯ ತೊಳೆದಲ್ಲದೆ ಮುಟ್ಟಲೀಯ್ಯ. ಕಾಲ ತೊಳೆದಲ್ಲದೆ, ಹೊಂದಲೀಯ್ಯ. ಇಂತೀ ಸರ್ವಾಂಗ ತಲೆದೊಳೆವ ಕಾರಣ, ಕೂಡಲಸಂಗಮದೇವನೆನ್ನ ಕೂಡಿಕೊಂಡನವ್ವಾ.

೨. ಅಳಿಯನ ಕಂಡರೆ ನಾಚೆಂಬೆ ಮಗಳೇ. ಅಳಿಯನ ಕಂಡರೆ, ತೊಲಗೆಂಬೆ ಮಗಳೇ. ನಾಚುವರೆ ಮರೆ ಇಲ್ಲ. ತೊಲಗುವರೆ ನೆಲನಿಲ್ಲ. ಇಬ್ಬರಿಗೊಬ್ಬ ಗಂಡನಾದ ಬಳಿಕ, ಇನ್ನೆಲ್ಲಿಯ ಮರೆ ಮಗಳೆ? ಕೂಡಲಸಂಗಮದೇವಯ್ಯನೆಂಬ ಗಂಡನಾದ ಬಳಿಕ, ಇನ್ನೆಲ್ಲಿಯ ಮರೆ ಮಗಳೇ?

೩. ಸತ್ಯವಿದೆ, ಸಮಾಧಾನವಿದೆ. ಮನಕ್ಕೆ ಬಾರದಿದೇನಯ್ಯ! ಸರ್ವ ಸನುಮತವೆಂಬ ಸುಖವಿದೆ. ಮನಕ್ಕೆ ಸೋಂಕದಿದೇನಯ್ಯಾ! ಆ ನೀನೆಂಬುದೊಂದು ಘನವಿದೆ. ಕೂಡಲಸಂಗಮದೇವಾ, ಭ್ರಮೆಯೊ.

೪. ಸಿನೆ ಬಂಜೆಯರಿಬ್ಬರಿಗೊಬ್ಬ ಮಗ ಹುಟ್ಟಿ, ಅವನೆನ್ನ ಋಣಕ್ಕೊಡೆಯನಾದ, ಅವನೆನ್ನ ಧನಕ್ಕೊಡೆಯನಾದ, ಆನು ಗಳಿಸಿದ ಒಮ್ಮನಕ್ಕೆ ಅಗಲದೆ ಮೋಹಿತನಾದ. ಕೂಡಲಸಂಗಮದೇವನಂತಪ್ಪ ಮಗ

ಹುಟ್ಟಿದರೆ, ಇದೇನಯ್ಯ? ಕಾಯ ಮಾತೆಯಾಗಿ ಜೀವ ಪಿತನಾಗಿ, ನಾನಿರಿಸಿದಂತೆ.

೫. ಪೂಜೆಯುಳ್ಳನ್ನಬರ, ಲಿಂಗವ ಹಾಡಿದೆ. ಮಾಟವುಳ್ಳನ್ನಬರ ಜಂಗಮವ ಹಾಡಿದೆ. ಜಿಹ್ವೆಯುಳ್ಳನ್ನಬರ, ಪ್ರಸಾದವ ಹಾಡಿದೆ. ಈ ತ್ರಿವಿಧ ನಾಸ್ತಿಯಾದ ಬಳಿಕ ಎನ್ನ ನಾ ಹಾಡಿಕೊಂಡೆ, ಕಾಣಾ ಕೂಡಲಸಂಗಮದೇವಾ.

೬. ಅನಾಯಾಸದಿಂದ ಮನೆಯ ಮಾಡಿ, ನಿರಾಯಾಸದಿಂದ ಪರಮ ಸುಖಿ. ರೂಪಿಸುವಲ್ಲಿ ರೂಪಾಧಿಕ. ನೋಡುವಲ್ಲಿ ನೋಟ ಘನ. ಇಂತಹ ಸಹಜ ಸಂಗಿಯ ನಿಲವಿನ ಪರಿ. ಉದಕದೊಳಗಣ ಬಿಂದು ಉದಯ ರತ್ನದಂತೆ, ಕೂಡಲಸಂಗನ ಶರಣನ ನಿಲವು.

೭ ಮರುಳು ತಲೆ, ಹುರುಳು ತಲೆ, ನೀನೇದೇವಾ! ಹೆಂಗೂಸು, ಗಂಡುಗೂಸು ನೀನೇದೇವಾ! ಎಮ್ಮಕ್ಕನ ಗಂಡ ನೀನೇ ದೇವಾ! ಕೂಡಲಸಂಗಮದೇವಾ, ಭ್ರಾಂತಳಿದು ಭಾವನಿಂದುದಾಗಿ.

೮. ತೆರಹಿಲ್ಲದ ನಡೆ, ತೆರಹಿಲ್ಲದ ನುಡಿ, ತೆರಹಿಲ್ಲದ ಸಂಭಾಷಣೆಯ ಸುಖವು, ತೆರಹಿಲ್ಲದೆ ನಂಬುಗೆ, ಸ್ವಾನುಭಾವಸುಖ, ತೆರಹಿಲ್ಲದ ಮಹಿಮೆ, ತೆರಹಿಲ್ಲದ ವಿಚಾರ ಕೂಡಲಸಂಗಮದೇವಾ, ನಿಮ್ಮ ಶರಣಂಗೆ.

---

## ಐಕ್ಯನ ಜ್ಞಾನಿ.

೧. ಮೂರರಾಪ್ಯಾಯನ ಐದು ಬೆಟ್ಟವನಿಂಬುಗೊಂಡು ಅಕ್ಕಟಕ್ಕಟಾ! ಮಾಡಿ ಕೆಟ್ಟರು, ಮಾಡದೇ ಕೆಟ್ಟರು. ನೀಡಿ ಕೆಟ್ಟರು, ನೀಡದೆ ಕೆಟ್ಟರು. ಕೂಡಲಸಂಗಮದೇವನ ಬಸಿರಮಧ್ಯದ ಬಯಲ ಸಮಾಧಿಯಲಿಕ್ಕದೆ ಕೆಟ್ಟರು.

೨. ಉಮಾದಿನಾಥರು ಕೋಟಿ, ಪಂಚವಕ್ತ್ರರು ಕೋಟಿ, ನಂದಿವಾಹನರೊಂದು ಕೋಟಿ ನೋಡಯ್ಯಾ. ಸದಾಶಿವರೊಂದು ಕೋಟಿ, ಗಂಗೆವಾಳುಕಸಮರುದ್ರರು ಇವರೆಲ್ಲರು ಕೂಡಲಸಂಗನ ಸಾನ್ನಿಧ್ಯರಲ್ಲದೆ, ಸಮರಸವೇದ್ಯರೊಬ್ಬರೂ ಇಲ್ಲ.

೩. ರಕ್ಕಸಿಯ ಮನೆಯಲು ಭೋಜನವನುಂಡು, ತೃಪ್ತಿಯಾಯಿತ್ತೆಂದು, ಬೆಸಗೊಂಡರೆ ಹೇಳಿಹೆನು. ನೀರ ಕೈಯ್ಯಲು, ಕಿಚ್ಚಿ ಬಯಕೆಯ ಕೊಟ್ಟಂತೆ. ಸಾಯುಜ್ಯಪದವಿಯನವರೆತ್ತಬಲ್ಲರು? ಮಹಾದಾನಿ ಕೂಡಲ ಸಂಗನ ಸಮರಸ ಸುಖವನವರೆತ್ತಬಲ್ಲರು?

೪. ಬಯಲರೂಪ ಮಾಡಬಲ್ಲಾತನೇ ಶರಣನು. ಆ ರೂಪ ಬಯಲಮಾಡ ಬಲ್ಲಾತನೇ ಲಿಂಗಾನುಭಾವಿ. ಈ ಉಭಯ ಒಂದಾದರೆ ನಿಮ್ಮಲ್ಲಿ ತೆರಹುಂಟೆ ಕೂಡಲಸಂಗಮದೇವಾ?

೫. ದೇವಲೋಕ, ಮರ್ತ್ಯಲೋಕವೆಂಬ ಸೀಮೆಯುಳ್ಳನ್ನಕ್ಕ ಕೇವಲ ಶರಣನಾಗಲರಿಯೆ. ಸತ್ತು ಬೆರಿಸಿಹೆನೆಂದರೆ, ಕಬ್ಬಿನ ತುದಿಯ ಮೆಲಿದಂತೆ ಕೂಡಲಸಂಗಮದೇವ.

೬. ಮಾತಿಲ್ಲ, ನುಡಿ ಇಲ್ಲ. ಏತಕ್ಕೆ ಮುನಿವಿರಿ? ಮಾತನಾಡಿದರೇಕಯ್ಯ? ಬೆಳಸೆಂಬುವನರಿಯಿರಿ ಅಯ್ಯಾ. ಮಾತು ಕೆಟ್ಟಲ್ಲದೆ, ತಾನಾಗಬಾರದು. ಕೂಡಲಸಂಗಮದೇವಾ ಮಾತಿಂದ ಬಕ್ಕು, ಭವಭಾರ ಘೋರ.

೭. ಏನನಾದರೆಯೂ ಸಾಧಿಸಬಹುದು. ಮತ್ತೇನನಾದರೆಯೂ ಸಾಧಿಸಬಹುದಯ್ಯಾ. ತಾನಾರೆಂಬುದ ಸಾಧಿಸಬಾರದಯ್ಯಾ. ಕೂಡಲಸಂಗಮದೇವರ ಕರುಣವುಳ್ಳವಂಗಲ್ಲದೆ.

೮. ಜೀವಾತ್ಮ ಅಂತರಾತ್ಮನ ಸುದ್ದಿಯ ಬೆಸಗೊಂಬರೆ, ಹೇಳಿಹೆ ಕೇಳಿಭೋ. ಹಸಿಯ ಸಂಕೋಲೆಯಾಗಿರ್ದಲ್ಲಿ, ಕಾದುಕೊಂಡಿರ್ದನೊಬ್ಬ. ಕಥೆ ಕನಸ ಮಾಡಿ ಹೇಳುತ್ತಿರ್ದನೊಬ್ಬ. ಪರಾಪರಕ್ಕೆ ಹೋಗಿ, ಪರಮನ ಸುದ್ದಿಯ ಕೊಂಡು ಬರುತಿಪ್ಪನೊಬ್ಬ. ಅವರಿಬ್ಬರನು ಕೆಡೆ ಮೆಟ್ಟಿ ಹೋಹಾಗ, ಲೋಕ ನಿರ್ಬುದ್ಧಿಗೊಂಡಿತ್ತು ಕೂಡಲಸಂಗಮದೇವಾ.

೯. ಸಮರತಿ, ಸಮಕಳೆ, ಸಮಸುಖ, ಸ್ವಾನುಭಾವದ ಹಿರಿದು ಕಿರಿದಾದುದನಾರು ಅರಿಯರು? ಪಾಷಾಣ ಪರೀಕ್ಷಾವಂತನಂತೆ, ಗುರುವಿಲ್ಲದವರಂತಿರಲಿ. ಕೂಡಲಸಂಗಮದೇವಯ್ಯಾ, ಗುರುವುಳ್ಳವರ ನಿಜವಿಂತುಟು.

೧೦. ಗುರುಶಿಷ್ಯ ಸಂಬಂಧವಾದುವಕ್ಕೆ ಇದು ಚಿಹ್ನ. ಹಿಂದ ಬಿಟ್ಟು ಮುಂದೆ ಹಿಡಿಯಲೇಬೇಕು. ಕೂಡಲಸಂಗಮದೇವ, ಕೇಳಯ್ಯ ಕಿಚ್ಚಿನೊಳಗೆ ಕೋಲ ಬೈಚಿಟ್ಟಂತಿರಬೇಕು.

೧೧. ಲಿಂಗ ಪೂಜಿಸಿ ಫಲವೇನಯ್ಯ? ಸಮರತಿ ಸಮಕಳೆ ಸಮ ಸುಖವನರಿಯದನ್ನಕ್ಕ, ಲಿಂಗವ ಪೂಜಿಸಿ ಫಲವೇನಯ್ಯ? ಕೂಡಲಸಂಗಮದೇವರ ಪೂಜಿಸಿ ನದಿಯೊಳಗೆ ನದಿ ಬೆರಸಿದಂತಾಗದನ್ನಕ್ಕ?

## ಐಕ್ಯನೈಕ್ಯ.

೧. ಒಳೆಯುಡಿಯುಸುರುಹಿಪಡೆ, ಹೊಗೆ ಗೋಳಕನಾಥನ ಕೊರಳ ಸುತ್ತಿತ್ತು. ಮಹೀತಳನ ಜಡೆ ಸೀಯಿತ್ತು. ಮರೀಚಿಕನ ಸಿರ ಬೆಂದಿತ್ತು. ರುದ್ರನ ಹಾವುಗೆ ಉರಿಯಿತ್ತು. ದೇವಗಣಂಗಳು ನಿವಾಟವಾದರು. ಮಡದಿಯುಳ್ಳವರು ಮುಡಿಯ ಹಿಡಿದುಕೊಂಡು ಹೋದರು. ಕೂಡಲ ಸಂಗಮದೇವ ಭಸ್ಮಧಾರಿಯಾದ.

೨. ಆ ಭಸ್ಮತಾಗಿ, ಬ್ರಹ್ಮ ತನ್ನ ಕಪಾಲವಿಡಿದನು. ಗಣನಾಥನ ಐವತ್ತೆರಡು ಸರ ಹರಿದು ಬಿದ್ದವು. ಆ ಭಸ್ಮತಾಗಿ, ಅಂಡಜ ಮುಗ್ಧೆಯ ಮೂರು ಮೊಲೆ ಹರಿದು ಬಿದ್ದವು. ನಾದಪ್ರಿಯ ನಂದಿಯ ನೇರಿಕೊಂಡು, ಅತೀತನ ಮೇಲೆ, ಆನಂದ ಸಿಂಹಾಸನವನಿಕ್ಕಿ, ಕುಳಿತು ಕೂಡಲಸಂಗಮದೇವರ ದೇವತ್ವ ಕೆಟ್ಟಿತ್ತು.

೩. ನಾನೊಮ್ಮೆ ಬೇಂಟೆಯ ಹೋದರೆ ಭಸಿತಕ್ಕಾಹುತಿಯನಿಕ್ಕಿ ಹೆನೆಂದು, ಸಾಸಿರದೇಳುನೂರು ವರುಷ ಒಬ್ಬ ರಾಜನ ಕೊಂಡೆನು. ಅವನ ಹೆಂಡಿತಿ ಅಯಿವತ್ತೆರಡು ಕಣ್ಣವಳು. ಅವಳು ತನ್ನ ಹೂಮುಡಿಯ ಬಿಟ್ಟು ಅತ್ತಳು. ಅವಳ ಬಾಯಲ್ಲಿ ಅಜ ಬಿದ್ದ. ಕಂಗಳಲಿ ಧೂಮಕೇತು ಬಿದ್ದ. ಕೂಡಲಸಂಗಮದೇವರ ದೇವತ್ವ ಕೆಟ್ಟಿತ್ತು.

೪. ಲಿಂಗಾರ್ಚನೆಯ ಮಾಡುವ ಮಹಿಮರೆಲ್ಲರು ಸಲುಗೆವಂತರಾಗಿ, ಒಳಗೈದಾರೆ. ಆನು ದೇವ ಹೊರಗಣವನು. ಸಂಭೋಳಿ, ಸಂಭೋಳಿ ಎನುತ್ತ, ಇಂಬಿನಲ್ಲಿ ಇದ್ದೇನೆ. ಕೂಡಲಸಂಗಮದೇವ, ನಿಮ್ಮ ನಾಮ ಪಿಡಿದ ಅನಾಮಿಕ ನಾನು.

೫. ಶಿವ, ಶಿವಾ, ಮೂರ್ತಿಗೆ ಸತ್ಯ ಶುದ್ಧ ಉಂಟೆಂಬಿರಿ. ಸತ್ಯ ಶುದ್ಧವುಳ್ಳವಂಗೆ ಗುರುವಿಲ್ಲ. ಸತ್ಯ ಶುದ್ಧವುಳ್ಳವಂಗೆ ಲಿಂಗವಿಲ್ಲ. ಸತ್ಯ ಶುದ್ಧವುಳ್ಳವಂಗೆ ಜಂಗಮವಿಲ್ಲ. ಸತ್ಯ ಶುದ್ಧವುಳ್ಳವಂಗೆ ಪ್ರಸಾದವಿಲ್ಲ.

ಸತ್ಯ ಶುದ್ಧವುಳ್ಳವಂಗೆ ಗಣತ್ವವಿಲ್ಲ. ಕೇಳಿರೇ, ಸತ್ಯ ಶುದ್ಧ ದೇವರಿಗೆ ಉಪಚಾರ ಉಂಟು. ಸತ್ಯ ಶುದ್ಧ ದೇವರಿಗೆ ಧ್ಯಾನ ಮೌನ ಅನುಷ್ಠಾನ ಉಂಟು. ಸತ್ಯ ಶುದ್ಧ ಉಪದೇಶಕ್ಕೆ ಜಪ ತಪ ಸಂಧ್ಯಾ ಸಮಾಧಿ ಹೋಮ ನೇಮ ನಿತ್ಯ ಅಷ್ಟ ವಿಧಾರ್ಚನೆ ಷೋಡಶೋಪಚಾರ ಉಂಟು. ಸತ್ಯ ಶುದ್ಧ ದೇವರಿಗೆ ಉಪಚಾರ ಉಂಟಾವ ಕಾರಣ ಇಂತಪ್ಪ ಸತ್ಯಶುದ್ಧ ಗುರುವಿಂಗೆ ಶರಣೆನ್ನೆ. ಇಂತಪ್ಪ ಸತ್ಯಶುದ್ಧ ಲಿಂಗಕ್ಕೆ ಶರಣೆನ್ನೆ. ಜಂಗಮಕ್ಕೆ ಶರಣನ್ನೆ. ಇಂತಪ್ಪ ಸತ್ಯಶುದ್ಧ ಪ್ರಸಾದಕ್ಕೆ ಕೈಯ್ಯಾನೆ. ಇವರೆಲ್ಲರು ಬ್ರಹ್ಮನ ಮಕ್ಕಳು. ಎನಗೆ ಸತ್ಯವೂ ಇಲ್ಲ, ಅಸತ್ಯವೂ ಇಲ್ಲ. ಆವ ಸಹಜವಿಲ್ಲದ ಲಿಂಗೈಕ್ಯ ಕಾಣಾ ಕೂಡಲಸಂಗಮದೇವಾ.

## ಐಕ್ಯನ ಭಕ್ತಿ.

೧. ಭಕ್ತನಾಯಿತ್ತೆ ಭಕ್ತಿದಾಸೋಹ. ಯುಕ್ತನಾಯಿತ್ತೇ ಯುಕ್ತಿದಾಸೋಹ. ಐಕ್ಯನಾಯಿತ್ತೆ ಮಮಕಾರದ ದಾಸೋಹ. ಸರ್ವದಲೂ ದಾಸೋಹ ಬೇಕು. ದಾಸೋಹದ ಅನುವ ಕೂಡಲಸಂಗಯ್ಯ ತಾನೇ ಬಲ್ಲ.

೨. ಜಲವ ನುಂಗಿತ್ತಯ್ಯ ಎನ್ನ ಕರವು. ಪತ್ರೆಯ ನುಂಗಿತ್ತಯ್ಯ ಎನ್ನ ಶಿಖಿ. ಏನಯ್ಯ? ಮಂತ್ರ ಭಿನ್ನವಾಯಿತ್ತು. ಇಂತೀ ದ್ವಿವಿಧ ಒಂದಾಗವ ಮುನ್ನ ಕೂಡಲಸಂಗಮದೇವರು ಪೂಜೆಗೊಂಡರು.

೩. ಎಲ್ಲವ ಬೇಡಿವರೆಮ್ಮವರು. ಒಂದ ಬೇಡ ಮರೆದರಯ್ಯ! ಮರ್ತ್ಯಲೋಕದ ಗಣಂಗಳು ಒಂದ ಬೇಡಮರೆದರು. ಕೂಡಲಸಂಗಮದೇವ, ಎನ್ನ ಬೇಡ ಮರೆದರು.

೪. ಭಿತ್ತಿ ಇಲ್ಲದ ಚಿತ್ತಾರದಂತೆ, ಭಕ್ತಿ ಇಲ್ಲದ ಪ್ರಮಥನಾಗಿ ಎಂದಿಪ್ಪೆನಯ್ಯಾ! ಸತ್ಯವಿಲ್ಲದ ಶರಣನಾಗಿ, ಎಂದಿಪ್ಪೆನಯ್ಯಾ! ಗೆರೆ ಇಲ್ಲದ ಕೋಲಲ್ಲಿ ಉದ್ದರಿಯ ನಿಕ್ಕಿದ ಭಂಡದ ಹರದನಂತಾದೆನಯ್ಯಾ ಕೂಡಲಸಂಗಮದೇವಾ.

೫. ಆಯತ ಒಂದೆಡೆಯಲಿ ತೆರನನರಿಯರಾಗಿ, ನೋಡಬಾರದು, ಮುಡಿಸಬಾರದು. ಅದು ತಿದ್ದಬಾರದ ಡೊಂಕು, ಕೂಡಲಸಂಗನಭಕ್ತಿ.

## ಐಕ್ಯನ ಮಾಹೇಶ್ವರ

೧. ಸತ್ತು ಹುಟ್ಟುವನಲ್ಲ, ಸಂದೇಹಿ ಸೂತಕಿಯಲ್ಲ, ಆಕಾರ ನಿರಾಕಾರನಲ್ಲ, ನೋಡಯ್ಯ! ಕಾಯವಂಚಕನಲ್ಲ, ಜೀವವಂಚಕನಲ್ಲ, ನಿರಂತರ ಸಹಜ ನೋಡಯ್ಯ! ಶಂಕೆ ಇಲ್ಲದ ಮಹಾ ಮಹಿಮ ನೋಡಯ್ಯ. ಕೂಡಲಸಂಗನ ಶರಣನು ಉಪಮಾತೀತ ನೋಡಯ್ಯ.

೨. ದಶದಿಕ್ಕು ಧರೆಗಗನವೆಂಬುದ ನಾನರಿಯೆನಯ್ಯಾ! "ಲಿಂಗ ಮಧ್ಯೆ ಜಗತ್ಸರ್ವಂ" ಎಂಬುದನರಿಯೆನಯ್ಯಾ! ಲಿಂಗ ಸೋಂಕಿನ ಸುಖದೊಳಗೆ, ಕೂಡಲಸಂಗಮದೇವಯ್ಯ, ಅಂಬುಧಿಯೊಳಗೆ ಬಿದ್ದ ವಾರಿ ಕಲ್ಲಿನಂತೆ ಭಿನ್ನ ಭಾವವನರಿಯದೆ "ಶಿವ, ಶಿವಾ" ಎನುತಿದ್ದೆ ನಾನು.

## ಐಕ್ಯನ ಪ್ರಸಾದಿ.

೧ ಹುಸಿಯಿಂದ ಜನಿಸಿದೆನಯ್ಯ, ಮತ್ಯ್ರಲೋಕದೊಳಯಿಂಕೆ. ಹುಸಿಯಿಂದ ಲಿಂಗವ ಹೆಸರುಗೊಂಡು ಕರೆದೆನಯ್ಯ! ಅದು ಎನಗೆ ಭಾವವೂ ಅಲ್ಲ. ನಿರ್ಭಾವವೂ ಅಲ್ಲದೆ, ನಿಂದಿತಯ್ಯ! ಅದರ ಅವಯವಂಗಳೆಲ್ಲವು ಜಂಗಮವಯ್ಯ! ಅದಕ್ಕೆ ಎನ್ನಲ್ಲಿ ಉಳ್ಳ ಸುಯಿಧಾನವ ಮಾಡಿ ನೀಡಿದೆನಯ್ಯಾ! ಆ ಪ್ರಸಾದಕ್ಕೆ ಶರಣೆಂದೆನಯ್ಯ! ಅದು ನಾದವೂ ಅಲ್ಲ, ನಿಸ್ಸಾರವೂ ಅಲ್ಲ. ಆ ಪ್ರಸಾದನಲ್ಲಿ ನಾನೇ ತಣ್ಗತನಾದೆ ಕಾಣಾ ಕೂಡಲಸಂಗಮದೇವಾ.

೨. ಬೆಳಗಿನೊಳಗಿನ ಬೆಳಗು, ಮಹಾ ಬೆಳಗೆಂಬ ಪ್ರಸಾದದಲ್ಲಿ ಒದಗಿದ ಪ್ರಸಾದಿಯ ಪರಿಣಾಮದ ಪರಮಾನಂದವನೇನೆಂದುಪಮಿಸುವೆನಯ್ಯಾ! ಪರಮಾಶ್ರವೇ ತಾನಾಗಿ ಕೂಡಲಸಂಗಮದೇವಯ್ಯ ಚನ್ನಬಸವಣ್ಣನೆಂಬ ಮಹಾ ಪ್ರಸಾದಿ ಎನ್ನ ವಾಙ್ಮನಕ್ಕೆ ಗೋಚರನಾಗಿ ನಾನೇ ನೆಂಬೆನಯ್ಯ ?

೩. ಮಿಥ್ಯವನಳಿದುಳಿದ ಸತ್ಯ ಪ್ರಸಾದಿ. ಅಂಜನವಿಲ್ಲದ ನಿರಂಜನ ಪ್ರಸಾದಿ. ದುಃಖವನಳಿದ ಘನಾನಂದ ಪ್ರಸಾದಿ. ಅನಿತ್ಯವಿಲ್ಲದ ನಿತ್ಯ ಪ್ರಸಾದಿ. ಖಂಡಿತವಿಲ್ಲದ ಅಖಂಡಿತ ಪ್ರಸಾದಿ. ಕೂಡಲಸಂಗಮದೇವರಲ್ಲಿ ತಾನೇ ಪ್ರಸಾದಿ.

## ಐಕ್ಯನ ಪ್ರಾಣಲಿಂಗಿ.

೧. ಆಯತವೆಂಬುದು ಭಂಗ, ಸ್ವಾಯತವೆಂಬುದು ಭವ. ಆಯತ ವನರಿಯೆ. ಸ್ವಾಯತವನರಿಯೆ. ಭಾವದಲ್ಲಿ ವ್ರತಗೆಟ್ಟುದಾಗಿ, ಆ ಭಾವ ದಲ್ಲಿ ಜೀವ ಸಂಹಾರಿ. ಕೂಡಲಸಂಗಮದೇವ ಸರ್ವಸಿವಾಸನಾಗಿ.

೨. ಸ್ವಯಲಿಂಗದನುಭಾವ ತನಗೆ ದೊರೆಕೊಂಡಬಳಿಕ, ದೇವ ಲೋಕವೆಂಬುದೇನೋ, ಮರ್ತ್ಯಲೋಕವೆಂಬುದೇನೋ? ಆವುದರಲ್ಲಿಯೂ ಭೇದವೇನಯ್ಯ! ಕೂಡಲಸಂಗಮದೇವಾ, ಬಳಿಕ ಆಲಸ್ಯ ಉಂಟೇ?

೩. ಏನೆಂಬೆನೇನೆಂಬೆ ಒಂದೆರಡಾದುದು? ಏನೆಂಬೆನೇನೆಂಬೆ ಎರ ಡೊಂದಾದುದ? ಏನೆಂಬೆನೇನೆಂಬೆನವಿರಳ ಘನವ? ಮಹಾದಾನಿ ಕೂಡಲ ಸಂಗಮದೇವಯ್ಯ ತಾನೇ ಬಲ್ಲ.

೪. ಕುರುಹಿಲ್ಲ, ಕುರುಹಿಲ್ಲ, ಲಿಂಗವೆಂದೆಂಬರೆ. ತೆರಹಿಲ್ಲ, ತೆರ ಹಿಲ್ಲ, ಜಂಗಮವೆಂದೆಂಬರೆ. ಇದೇ ನೋಡಾ, ಶಿವಾಚಾರ. ಇದೇ ನೋಡಾ, ಶಿವದೊಡಕು. "ಆತ್ಮಾನಾಂ ಪ್ರಕೃತಿ ಸ್ವಭಾವ" ಎಂದುದಾಗಿ, ಮುಟ್ಟಬಾರದ ಠಾವ ಮರೆಗೊಂಡಿಪ್ಪ, ಮಮಕರ್ತೃ ಕೂಡಲಸಂಗಮ ದೇವಾ.

## ಐಕ್ಯನ ಶರಣ.

೧. ಭೂ ತೋಯ ಪಾವಕ ಸಮೀರಣ ಅಂಬರಾದಿಗಳೆಲ್ಲ, ಆದಿ ಯಾಧಾರಪರಮಾತ್ಮಲಿಂಗದಲ್ಲಿ. ಆದಿಮಧ್ಯಾವಸಾನವನರಿಯದ ಆಗ ಮ್ಯವೇದಾದಿ ಸಕಲಶಾಸ್ತ್ರಪ್ರಮಾಣರು ಅದನಿಂತಿಂತೆಂದುಪಮಿಸಲಿಲ್ಲ. ಮಹಾಂತ ಕೂಡಲಸಂಗಮದೇವ.

೨. ಮಹಾಲಿಂಗದ ಸ್ಥಾನಂಗಳು ಮಹಾಲಿಂಗವ ಹೆಸರಲ್ಲದೆ ಲಿಂಗ ಬೇರೆ ರೂಪ ನಿರೂಪವಲ್ಲ. ಲಿಂಗ ಬೇರೆ, ಕಾಯ ಸಂಬಂಧಿಯಲ್ಲ. ಲಿಂಗ ಬೇರೆ, ಮಹಾಘನದಿಂದತ್ತತ್ತ ಕೂಡಲಸಂಗಮದೇವರ ನಿಲವು ಆರಿಗೆಯೂ ಅಳವಡದು.

೩. ಹುತ್ತಕ್ಕೆ ಏಸು ಬಾಯಾದಡೇನು? ಸರ್ಪನಿಪ್ಪುದು ಒಂದೇ ಸ್ಥಾನ. ಭಾವ ಭಾವಿಸಿ ಭ್ರಮೆಯಳಿದು ನೋಡಾ! ಆ ಭಾವ ಭಾವಿಸಲು ನಿರ್ಭಾವ ಕೂಡಲಸಂಗಮದೇವಾ.

೪. ವೇದ ವೇದಿಸಲರಿಯದೆ, ಅಭೇದ್ಯ ಲಿಂಗವೆಂದು ನಡನಡುಗಿತ್ತು ಶಾಸ್ತ್ರ ಸಾಧಿಸಲರಿಯದೆ ಅಸಾಧ್ಯಲಿಂಗವೆಂದು ಸಾರುತ್ತಿದ್ದಾವೆ. ತರ್ಕ ತರ್ಕಿಸಲರಿಯದೆ, ಅತರ್ಕ್ಯಲಿಂಗವೆಂದು ಮನಗೊಳ್ಳಲು, ಆಗಮ ಆಗಮ್ಯಲಿಂಗವೆಂದು ಗಮಿಸಲರಿಯದೆ ಹೋದವು. ನರರು ಸುರರು ಅಂತುಮ ಕಾಣರು. ನಮ್ಮ ಕೂಡಲಸಂಗಮದೇವನ ಪ್ರಮಾಣವ ಶರಣ ಬಲ್ಲ.

೫. ವೇದಾತೀತ, ಷಡುವರ್ಣರಹಿತ, ಅಷ್ಟತ್ರಿಂಶತ್ಕಳಾತೀತ, ವ್ಯೋಮಾತೀತ ಕೂಡಲಸಂಗಮದೇವಾ.

೬. ವಿಶ್ವಜಿತನು, ದನುಜಜಿತನು, ಸರ್ವಜಿತನು, ಸ್ವರ್ಜಿತನು, ಸೂತ್ರಾರ್ಜಿತನು, ಸೃಜಿತನು, ಊರ್ವರಾಜಿತನು, ಅಶ್ವಜಿತನು, ಗೋಜಿತನು, ಅರ್ಜಿತನು, ಸುಸಂವೇದ್ಯನು, ವೇದನಾದಾತೀತನು, ತುರೀಯ ಪರಮಾನಂದನಿರವಯ, ಸೂರ್ಯಕೋಟಿ ಪ್ರಭೆಯ ಬೆಳಗಿನ ಸಹಸ್ರ ಕಿರಣದ ಅಗ್ರಪಟಲದ ಬೆಳಗು ಕೂಡಲಸಂಗಯ್ಯ.

೭. ಸಹಸ್ರ ಶೀರ್ಷನಾದಿ ಪುರುಷನು. ವೇದಪುರುಷನೊಬ್ಬ ಪುರುಷನು. ಜ್ಯೋತಿ ಪುರುಷನೊಬ್ಬ ಪುರುಷನು, ತ್ರಿಪಾದೂರ್ಧ್ವನೊಬ್ಬ ಪುರುಷನು. ಉದನ್ಮುಖನೊಬ್ಬ ಪುರುಷನು. ಉದಯಪುರುಷನೊಬ್ಬ ಪುರುಷನು. ವಿರಾಟ ಪುರುಷನೊಬ್ಬ ಪುರುಷನು. ಆದಿಪುರುಷನೊಬ್ಬ ಪುರುಷನು. ವಿಯತ್ಪುರುಷನೊಬ್ಬ ಪುರುಷನು. ತದ್ವಿಯತ್ಪುರುಷ ಪುರುಷ ಪುರುಷ ಪುರುಷರಿಲ್ಲದ ಪ್ರಭೆಯನೋಡಿರೇ. ವೇದನಾದಾತೀತ ತುರೀಯ ಪರಮಾನಂದ ನಿರವಯ ಷಟ್‌ತ್ರಿಂಶತ್ ಪ್ರಭಾ ಪಟಲದ ಪ್ರಭೆಯ ಬೆಳಗಿದೆ ನೋಡಿರೇ. ಬೆಳಗಿನೊಳಗಣ ಮಹಾ ಬೆಳಗಿನ ಬೆಳಗು ನಮ್ಮ ಕೂಡಲಸಂಗಯ್ಯ.

೮. ಘನಗಂಭೀರ ಮಹಾಘನದೊಳಗೆ ಘನಕ್ಕೆ ಘನವಾಗಿಪ್ಪೆನಯ್ಯ! ಕೂಡಲಸಂಗಯ್ಯನೆಂಬ ಮಹಾಬೆಳಗಿನ ಬೆಳಗಿನೊಳಗಿರ್ದೆನೆಂಬ ಶಬ್ದ ಮುಗ್ಧವಾದುದನೇನೆಂಬೆನಯ್ಯ?

೯. ಸಮಸ್ತ ಕತ್ತಲೆಯ ಮಸಕವ ಕಳೆದಿಪ್ಪ ಇರವ ನೋಡಾ! ಬೆಳಗಿನ ಬೆಳಗಿಗು ಸಿಂಹಾಸನವಾಗಿ, ಬೆಳಗುವ ಬೆಳಗ ಕೂಡಿದ ಕೂಟವ ಕೂಡಲಸಂಗಯ್ಯ ತಾನೇ ಬಲ್ಲ.

೧೦. ಅಂತರಂಗ, ಬಹಿರಂಗ, ಆತ್ಮಸಂಗ ಒಂದೇ ಅಯ್ಯಾ! ನಾದ, ಬಿಂದು, ಕಳಾತೀತ, ಆದಿಯಾಧಾರ ನೀನೇ ಅಯ್ಯ! ಆರೂಢದ ಕೂಟದ ಸುಖವ ಕೂಡಲಸಂಗಯ್ಯ ತಾನೇ ಬಲ್ಲ.



# ಹೆಚ್ಚಿನ ವಚನಗಳು.

[ಈ ವಚನಗಳು ಗ್ರಂಥ ೩ ಇದರಲ್ಲಿ ಹೆಚ್ಚಿಗೆ ಇವೆ. ಆದರೆ ಅವುಗಳು ಗ್ರಂಥ ೧-೨ ಇವುಗಳಲ್ಲಿ ಇರುವದಿಲ್ಲ.]

## ರುದ್ರಾಕ್ಷಿ ಸ್ಥಲ.

(ಪುಟ ೧೨—ವಿಭೂತಿ ಸ್ಥಲವ ತರುವಾಯ ಕೊಡಲ್ಪಟ್ಟಿದೆ.)

೧. ಅಯ್ಯ ಎನಗೆ ರುದ್ರಾಕ್ಷಿಯೇ ಸರ್ವ ಪಾವನ. ಅಯ್ಯ ಎನಗೆ ರುದ್ರಾಕ್ಷಿಯೇ ಸರ್ವಸಿದ್ಧಿ. ಅಯ್ಯ ನಿಮ್ಮ ಪಂಚ ವಕ್ತ್ರಗಳೇ ಪಂಚಮುಖದ ರುದ್ರಾಕ್ಷಿಗಳಾದವಾಗಿ, ಅಯ್ಯ ಕೂಡಲಸಂಗಮ ದೇವಾ ಎನ್ನ ಮುಕ್ತಿ ಪಥಕ್ಕೆ ಈ ರುದ್ರಾಕ್ಷಿ ಸಾಧನವಯ್ಯಾ.

೨. ಶ್ರೀರುದ್ರಾಕ್ಷಿಯ ಧರಿಸಿದಾತನ ಲಿಂಗವೆಂಬೆ. ಶ್ರೀ ರುದ್ರಾಕ್ಷಿಯ ಧರಿಸದ ಅಧಮರನೆ ಭವಿ ಎಂಬೆ. ಕೂಡಲಸಂಗಮ ದೇವಯ್ಯ ಶ್ರೀ ರುದ್ರಾಕ್ಷಿಯ ಧರಿಸುವ ಭಕ್ತರ ನೀನೆಂಬೆ.

೩. ಹಸ್ತ ಕಡಗ ಕೈಗಧಿಕ ನೊಡಾ. ಕೊಡಲಹುದು ಕೊಳಲಹುದು. ಬಾಹು ಬಳೆ ತೋಳಿಗಿಂವಧಿಕ ನೋಡಾ. ಪರವಧುವನಪ್ಪಲಾಗದು. ಕರ್ಣಕ್ಕೆ ರುದ್ರಾಕ್ಷಿಯೇ ಅಧಿಕ ನೋಡಾ. ಶಿವನಿಂದೆಯ ಕೇಳಲಾಗದು. ಕಂಠಮಾಲೆ ಕೊರಳಿಗಿಂವಧಿಕ ನೋಡಾ. ಅನ್ಯ ದೈವಕ್ಕೆ ತಲೆ ಬಾಗಲಾಗದು. ಆವಾಗಳೂ ನಿಮ್ಮವನೆ ನೆನೆದು ನಿಮ್ಮುವ ಪೂಜಿಸಿ ಕೂಡಲಸಂಗಯ್ಯನ ಪದ ಸನ್ನಿಹಿತನಾಗಿಪ್ಪಡೆ ಅಂಗ ಶಿಖಾಮಣಿಯಯ್ಯ.

ಪುಟ (೪೪-೩೭ ನೇ ವಚನದ ತರುವಾಯ ಇರತಕ್ಕದ್ದು. ತಪ್ಪಿ ಉಳಿದಿದೆ.)

೪. ಲಿಂಗ ಶಿವಾಲಯದ ಮುಂದೆ ಸಿಂಹ ಶೂದ್ರಿಕನಲ್ಲದಿಲ್ಲ. ನಂದಿಕೇಶ್ವರ ಭೃಂಗಿ ನಾಂಟ್ಯ ನಮ್ಮ ಲಿಂಗನ ಮುಂದೆ. ಇದಕ್ಕೆ ದಿಟ ದೀವುಗೆ ನಮ್ಮ ಲಿಂಗನ ಮುಂದೆ. ಅನ್ಯ ದೈವವೆಂಬುದು ತೋರಿಯೂ ಕಾಣಬಾರದು. ನೊಸಲಗಣ್ಣ ಅಭವನೊಬ್ಬನೆ ನಮ್ಮಕೂಡಲಸಂಗಮ ದೇವಾ.

(ಪುಟ ೧೪೭-೭ನೇ ವಚನದ ತರುವಾಯ. ಇದು ಗ್ರಂಥ ೩ನೇದ್ದ ರಲ್ಲಿ ಇದ್ದು ೧, ೨ ಗ್ರಂಥಗಳಲ್ಲಿ ಇಲ್ಲ.)

೫. ಅಷ್ಟ ತನು ಮೂರ್ತಿಲಿಂಗವೆಂಬರು. ಇವರಾರೆಂದು ನಾನ ರಿಯೆನಯ್ಯ. ಆದಿಯ ಮಗನತೀತನು. ಅತೀತನ ಮಗನಾಕಾಶ. ಆಕಾಶವ ಮಗ ವಾಯು. ವಾಯುವಿನ ಮಗ ಅಗ್ನಿ. ಅಗ್ನಿಯ ಮಗ ನಪ್ಪು. ಅಪ್ಪುವಿನ ಮಗ ಪೃಥ್ವಿ, ಪೃಥ್ವಿಯ ಮಗ ಚಂದ್ರ, ಚಂದ್ರನ ಮಗ ಸೂರ್ಯ, ಸೂರ್ಯನ ಮಗ ದೇಹ, ದೇಹನ ಮಗನಾತ್ಮ. ಇಂತೀ ಅಷ್ಟ ತನುವೆಲ್ಲಕ್ಕೆಯೂ ಉತ್ಪತ್ತಿ ಯುಂಟು. ಅಜಾತ ಜನಿತ ನಮ್ಮ ಕೂಡಲಸಂಗಮದೇವಂಗೆ ಮಾತಾ ಪಿತರುಗಳಿಲ್ಲ.

# ಟಿಪ್ಪಣಿಗಳು.

---

೧-೧ ಸಮುದ್ರ ಮಧ್ಯವಲ್ಲಿ ಹ್ಯಾಗೆ ವಡಬಾಗ್ನಿಯು ಅಡಗಿದ್ದು, ಅದರಲ್ಲಿ ಸಮುದ್ರವನ್ನು ದಹಿಸಬೇಕೆಂಬ ಇಚ್ಛೆಯೂ ಇದ್ದರೂ ಅದು ತಲೆದೋರದೆ ಸಮುದ್ರದಲ್ಲಿಯೇ ತದಾಕಾರವಾಗಿ, ಅಡಗಿಕೊಂಡಿರುತ್ತದೋ, ಹ್ಯಾಗೆ ಚಂದ್ರಮನ ಷೋಡಶಕಲೆಗಳಲ್ಲಿ ಅಮೃತ ಕಿರಣವಿದ್ದು ಅದು ಆ ಕಲೆಗಳಿಗೆ ಚೈತನ್ಯಾತ್ಮಕವಾಗಿದ್ದರೂ ಅದು ಅದರಲ್ಲಿ ಬೆರೆಯದೆ ಅಲ್ಲಿಯೇ ಹುದುಗಿಕೊಂಡಿರುತ್ತದೋ, ಹ್ಯಾಗೆ ಅರಳದೆ ಇರುವ ಮೊಗ್ಗೆಗಳಲ್ಲಿ ಸುಗಂಧವು ಹೊರಸೂಸದೆ ಅಡಗಿಕೊಂಡಿರುತ್ತದೋ, ಹ್ಯಾಗೆ ವಿಷಯ ಸಂಗ ರತಿದೋರದಿರುವ ಕನ್ನೆಯಲ್ಲಿ ರತಿಯು ಗುಪ್ತ ಸ್ಥಿತಿಯಲ್ಲಿ ಇರುತ್ತದೋ, ಹಾಗೆ ಪರಬ್ರಹ್ಮವು ಜಗತ್ತಿನಲ್ಲಿ ಕುರುಹುಗೊಳ್ಳದೆ ಅವರಲ್ಲಿಯೇ ಅಡಗಿಕೊಂಡಿರುತ್ತದೆ. ಜಗತ್ತು ವ್ಯಕ್ತದೋರದ ಪೂರ್ವದಲ್ಲಿ ಪರಮಾತ್ಮನ ಸ್ಥಿತಿಯು ಈ ವಚನದಲ್ಲಿ ವಿವರಿಸಲ್ಪಟ್ಟಿದೆ.

೧-೧ ಅಂದಿಂಗೆಳೆಯ ನೀನು ಹಳೆಯ ನಾನು ಎಂದರೆ ಆಯಾ ಕಾಲಕ್ಕೆ ಎಳೆಯ ನೀನು ಅಷ್ಟೇ ನೂತನನಾಗಿದ್ದುಕೊಂಡಿರುತ್ತೀ ಮತ್ತು ಅಷ್ಟೇ ನಾನು ಪುರಾತನನಾಗಿದ್ದೇನೆ. ಇದರ ಭಾವನೆಂದರೆ, ಪರಮಾತ್ಮನು ಮಹಾಲಿಂಗ ಮೂರ್ತಿಯಾಗಿದ್ದು ನಾನು ಚಿತ್ ಶಕ್ತಿಯಿಂದ ಅದಕ್ಕೆ ಅಂಗವಾಗಿದ್ದೇನೆ.

೪-೧೦ ಕೊಡೆಯನ್ನು ಹಿಡಿಸಿಕೊಂಡು, ಕುದುರೆಯನ್ನು ಏರಿಕೊಂಡು ಹೋಗುವಂಥವರು ಕೋಟಿ ಜನರಿರಬಹುದು. ಆದರೆ ಅವರಲ್ಲಿ ದ್ವಾದಶಮಂದಿಯೇ ಮಾತ್ರ ಶೂರರಿರುತ್ತಾರೆ. ಚಂದ್ರಕಾಂತದ ಗಿರಿಗೆ ಕಾಡಾನೆಯು ಬಂದು ನೋಡಲು ಅದರಲ್ಲಿ ತನ್ನ ಪ್ರತಿಚ್ಛಾಯೆಯು ಬಿಂಬಿಸಲು ತನ್ನ ಎದುರಿಗೆ ಮತ್ತೊಂದಾನೆಯು ಬರುತ್ತಿದೆಂದು ಸಿಟ್ಟಿನಿಂದ ಮುಂದಕ್ಕೆ ತಲೆಗೊಟ್ಟು ಅದಕ್ಕೆ ಹಾಯ್ದರೆ, ಅದೂ ತಲೆಗೊಟ್ಟು ಹಾದಂತಾಗುವದು. ಅಷ್ಟರೊಳಗೆ ಸೂರ್ಯನಿಗೆ ಮೋಡ ಬಂದು ಮುಸುಕಲು ತನ್ನ ಪ್ರತಿಚ್ಛಾಯೆಯೂ ಅಡಗುವದು. ಆಗ ಎನ್ನ ವೈರಿ ಹೊಯಿತ್ತಲಾ ಎಂದು ಹಿಂದಕ್ಕೆ

ಅದು ತಿರುಗಿ ಹೋಗುವದು. ಹಾಗೆ ಕೊಡೆ ವಿಡಿಯೆ ಎಂದರೆ ಪಂಚ ಭೂತಯುಕ್ತವಾದ ದೇಹವನ್ನು ಹಿಡಿಯಲು, ಕುದುರೆಯ ದೃಢವುಳ್ಳ ರಾವುತನೇರಿ ಎಂದರೆ ದೇಹವೆಂಬ ವಾಜಿಯನ್ನು ಸ್ಥಿರಬುದ್ಧಿ ಎಂಬ ಜೀವನೆಂಬ ರಾಹುತನು ಏರಿ, ಕೊಡೆ ಕೋಟಿ ಶೂರರು ಹನ್ನಿಬ್ಬರಯ್ಯ, ಅಸುರ ಕರ್ಮಸಂಬಂಧವಾದ ಕಾರಣಗಳು ಅನೇಕ ಕೋಟಿ ಇವೆ. ಆದರೆ ಅವುಗಳಲ್ಲಿ ದ್ವಾದಶೇಂದ್ರಿಯಗಳೇ ಮುಖ್ಯವಾಗಿರುತ್ತವೆ. ಚಂದ್ರ ಕಾಂತದ ಗಿರಿ ಎಂದರೆ ನಿರ್ಮಲವಾದಾತ್ಮನಿಗೆ ಗಜ ಬಂದು ಮೂವಲಿಸಿ ಅಷ್ಟ ಮದ ಮೊದಲಾದ ತತ್ವಗಳು ಬಂದು ಆವಗ್ರಹಿಸಲು ಅರಿದು ಎಂದರೆ ಆತ್ಮನು ಸಕಲ ತತ್ವಂಗಳ ವರ್ತನೆಗಳೊಡನೆ ಕೂಡಿ ಚರಿಸು ವಂಥಾದ್ದನ್ನು ತಿಳಿದು ಕೊಲ್ಲ ಬೇಕಾದರೆ, ರಿಪುಗಳ ಅಂದರೆ ಅರಿ ಷಡ್ವರ್ಗಂಗಳ ಕಲಿತನವನ್ನು ನೋಡಿರಿ. ಇದು ಆವಿಗೆಯಲ್ಲಿ ಉತ್ಪತ್ತಿ ಯಾಗುವ ನಾನಾತರದ ಭಾಂಡಗಳ ಹಾಗೆ ಆಯಿತ್ತು. ಎಂದರೆ ಹ್ಯಾಗ ಕುಂಬಾರನು ಮಾಡುವ ಗಡಿಗೆಗಳನ್ನು ಆಯಾ ಜನರು ಚಲೋ ಕೆಡಕು ಪದಾರ್ಥಗಳಿಗೋಸ್ಕರ ಉಪಯೋಗಿಸುತ್ತಾರೋ, ಹಾಗೆ ಪರಶಿವ ಲಿಂಗ ವೆಂಬ ಕುಂಬಾರನು ಸಕಲಾತ್ಮರುಗಳೆಂಬ ಭಾಂಡಗಳನ್ನು ನಿರ್ಮಿಸಲು ಅವರೊಳಗೆ ಕೆಲವರು ಭಕ್ತರುಗಳಾಗುವರು. ಕೆಲವರು ಭವಿಗಳಾಗು ವರು. ನಿಮ್ಮ ಹೆಸರಿಲ್ಲದ ಹೆಸರು. ನಿಮ್ಮ ಹೆಸರಿನವರೇ ಜ್ಞಾನಕಲಾತ್ಮ ಶಿವಾಂಶಿಕರು, ನಿಮ್ಮ ಹೆಸರಿಲ್ಲದವರೇ ಮಾಯಾಂಶಿಕರು, ಎಂದು ಪರಶಿವ ಲಿಂಗಕ್ಕೆ ಉಪಾವಸ್ಥೆಯನ್ನು ಮಾಡುತ್ತಾನೆ.

೪-೧೨ ದಿಟಪುಟ ಭಕುತಿ ಸಂಪುಟ ನೆಲೆಗೊಳ್ಳಲಾಗಿ ಎಂದರೆ ದಿಟ ನಿಶ್ಚಯವಾದ ಲಿಂಗವು ಪುಟ ವ್ಯಕ್ತವಾದ ಅಂಗವು, ಭಕುತಿ ಶಿವಾ ದ್ವೈತ ಭಕ್ತಿಯು, ಸಂಪುಟ ಅಂಗ ಲಿಂಗ ಭಕ್ತಿಗಳ ಏಕಕದ ಕೂಟವು, ನೆಲೆಗೊಳ್ಳದಾಗಿ ತನ್ನಲ್ಲಿ ಇಂಬುಗೊಳ್ಳದಾಗಿ.

೫-೨೨ ನಿಮ್ಮ ಉತ್ತಮಿಕೆಯ ಪೂರೈಸುವುದು=ನಿಮ್ಮಲ್ಲಿರುವ ಸರ್ವೋ ತ್ಕೃಷ್ಟ ಗುಣಗಳನ್ನು ವಿಕಾಸಗೊಳಿಸತಕ್ಕದ್ದು.

೮-೩೪ "ಪುಡುವರ್ಕೈವರು"=ಪಂಚಾಗ್ನಿಗಳು

೮-೪೦ ಪಂಚೈವರು=ಐದು ಇಂದ್ರಿಯಗಳು

೧೦-೫ಳ ಬಳ್ಳಿಗೆ ಕಾಯಿದಿನ್ನಿಮ್ಮತ್ತೆ=ಸ್ವಲ್ಪವಾದ ಬಳ್ಳಿಯು ತನ್ನ ರಸವನ್ನು ಬಹು ಭಾರವಾದ ಕಾಯಿಗೆ ಕೊಟ್ಟು ವರ್ಧನ ಮಾಡುವಂತೆ ಪರಮಾತ್ಮನು ತನ್ನನ್ನು ವರ್ಧನ ಮಾಡುವನೆಂಬ ಭಾವವು.

೧೧-೬೨ ಭವಭವದಲ್ಲಿ ನೀನಲ್ಲದೆ= ಅನೇಕ ಜನ್ಮಗಳಲ್ಲಿ ಹುಟ್ಟಿ ಬಂದರೂ ನನ್ನ ಮನಸ್ಸು ಸಂಗನಬಸವೇಶ್ವರನ ಚಿತ್ತವಾಗಿಯೇ ಇರಬೇಕಲ್ಲದೆ.

೧೧-೨ ನೋಡಿ ನೋಡಿ ಮಾಡುವ ನೇಮ ಸಲ್ಲವು=ಕಟ್ಟಿನ ಕ್ರಿಯೆಗಳ ಮರ್ಮವನ್ನು ತಿಳಿದು ಮಾಡಬೇಕೇ ಹೊರ್ತು ಇತರರ ಮೇಲು ಪಂಕ್ತಿಯನ್ನು ನಿರೀಕ್ಷಿಸಿ ಅವರ ಹಾಗೆ ಆಚರಿಸುವದು ಸಲ್ಲದು.

೧೧-೩ ತಲೆಯಿಲ್ಲದ=ಜ್ಞಾನೋದಯವಿಲ್ಲದ. ಅಟ್ಟೆಗೆ=ಮಲಮಾಯಾ ಕರ್ಮಯುಕ್ತವಾದ ಪ್ರಕೃತಾತ್ಮಗೆ, ಪಟ್ಟದ ಕಟ್ಟುವ=ಲಿಂಗ ಸಂಬಂಧವನ್ನು ಕರುಣಿಸಿ ಕೊಡುವ, ಉಭಯ ಭ್ರಷ್ಟರ ಮೆಚ್ಚುವನೇ=ಇಹಪರಕ್ಕೂ ಭ್ರಷ್ಟರಾದವರ ಮೆಚ್ಚುವನೆ?

೧೩-೮ ಚಿಕ್ಕಚಿಕ್ಕ ಮಕ್ಕಳೆಲ್ಲರು, ಶರಣನ ಕ್ರಿಯಾದಿಶಕ್ತಿ ಮೊದಲು ಮಾಡಿಕೊಂಡು ಚಿತ್‌ಶಕ್ತಿ ಕಡೆಯಾದ ಷಡ್ವಿಧ ಶಕ್ತಿಯರಷ್ಟು ನೆರೆದು, ಬಿಳಿಯ ಕರಿಕೆಯ, ಅಂತರಂಗದ ಶುದ್ಧ ಸಾತ್ವಿಕ ಜ್ಞಾನವನ್ನು, ಕಣಿಗಿಲೆಯ, ಬಹಿರಂಗದ ಕ್ರಿಯಾಚಾರವನ್ನು, ತೊರೆಯ ತಡೆಯ, ಹೃದಯೇಂದ್ರಿಯದಲ್ಲಿ ನೆಲಸಿರುವ, ಮಳಲ, ನಿರ್ಮಲವಾದ ಪ್ರಾಣಲಿಂಗವನ್ನು, ತಂದು ಅರುಹಿನ ಬಗೆಗೆ ಆಗುಮಾಡಿಕೊಂಡು ಬಂದು ಅನುಪಮ, ಉಪಮಿಸಬಾರದ, ಮಹಾದಾನಿ ಕೂಡಲಸಂಗಮದೇವನು ಪ್ರಾಣಲಿಂಗದೇವನು, ಗಂಡನಾಗಬೇಕೆಂದು ಬಹಿರಂಗದಲ್ಲಿ ಕ್ರಿಯಾಶಕ್ತಿವಲ್ಲಭನಾದ ಇಷ್ಟಲಿಂಗದೇವನಾಗಿ ನೆಲೆಗೊಳಿಸಬೇಕೆನುತ್ತ, ಗೌರಿಯ ನೋಂಪುವ ಬನ್ನಿರೆ, ಗುರುದೇವತೆಯ ಬೆಸಗೊಂಬ ಬನ್ನಿರೆ. ಕ್ರಿಯಾಶಕ್ತಿ ಸ್ವರೂಪನಾದ ಶರಣನು ಜ್ಞಾನಶಕ್ತಿ ಸ್ವರೂಪನಾದ ಶ್ರೀ ಗುರುನಾಥನೊಡನೆ ಬಿನ್ನೈಸುವಂಥ ಬಿನ್ನಹವು.

೧೩-೯ ಎಮ್ಮವರು ಬೆಸಗೊಂಬರೆ, ಎಂದರೆ ನಮ್ಮ ಸಂಬಂಧವಾದಂಥವರು ಮಕ್ಕಳ ವಿವಾಹ ಮಾಡುವದಕ್ಕೆ ಶುಭಮುಹೂರ್ತವನ್ನು ಪುರೋಹಿತನನ್ನು ಕೇಳಿದರೆ.

ರುಣಸಂಬಂಧ=ಸಾಲಾವಳಿ.

೧೪-೩ ಎನ್ನ ಲಲಾಟ ಲಿಖಿತ ಬರೆದ ಬಳಿಕ ಎಂದರೆ ಬ್ರಹ್ಮನು ಬರೆದಂಥ ಅಕ್ಷರಗಳನು ಶ್ರೀ ಗುರುನಾಥನು ಒರಿಸಿ ಪ್ರಣವ ಪಂಚಾಕ್ಷರೀ ಮಂತ್ರವನ್ನು ಲೇಖನವ ಮಾಡಿದ ಮೇಲೆ, ಪಲ್ಲಟವ ಮಾಡಬಾರದು ಎಂದರೆ ಅದಕ್ಕೆ ವಿರುದ್ಧವಾಗಿ ವರ್ತಿಸಬಾರದು. ಎನ್ನ ಉರದಲುಂಡಿಗೆ ಎಂದರೆ ಎನ್ನ ಅಂಗದಲ್ಲಿ ಸತ್ಕ್ರಿಯಾಸ್ವರೂಪನಾದ ಲಿಂಗಸಂಬಂಧವಾಗಿಪ್ಪುದು. ಎನ್ನ ಶಿರದಲಿ ಅಕ್ಷರ, ಎನ್ನ ಮನದಲ್ಲಿ ಸುಜ್ಞಾನಸ್ವರೂಪವಾದ ಪ್ರಾಣಲಿಂಗಸಂಬಂಧವಾಗಿಪ್ಪುದು. ಕೂಡಲ ಚನ್ನಸಂಗಯ್ಯ ಶರಣೆಂದಿತ್ತು, ಆತ್ಮಾಂಗದ ಮಹಾ ಜ್ಞಾನಸ್ವರೂಪವಾದ ಭಾವಲಿಂಗಸಂಬಂಧವ ಮಾಡಿಕೊಂಡು ಲಿಂಗಕ್ಕೆ ನಮಸ್ಕರಿಸಿದ್ದಿತ್ತು.

೧೪-೩ ವೇದ ವಿಪ್ರ ವಿಚಾರಿಸಿ ನೋಡಲು ಉಪದೇಶ ಪರೀಕ್ಷೆ ನಾಯಕನರಕ, ಎಂದರೆ ವೇದವಿತ್ತುಗಳಾದ ವಿಪ್ರರು ವಿಚಾರಿಸಿ ನೋಡಿದರೆ ಗುರೂಪದೇಶವನ್ನು ಅವಿಶ್ವಾಸಿಸಿ ವರ್ತಿಸುವದು ಅಘೋರ ನರಕವಾಗಿರುವದು.

೧೫-೧೨ ಸಂತವಿದ್ದ ಮನೆಗೆ ಕೊಂತವತಂದಂತೆ=ಮನೆಯವರೆಲ್ಲರೂ ಸುಖ ಸಮಾಧಾನವುಳ್ಳವರಿದ್ದಾಗ್ಗೆ ಅವರೊಳಗೊಬ್ಬನು ಕೆಟ್ಟವನು ಹುಟ್ಟಿ ಜಗಳವ ತಂದಂತೆ, ಸಂತೆಯ ಗುಡಿಸಲ ಸೂಳೆಗೆ ಕೊಂತವಳವಡುವದೇ ಎಂದರೆ ಒಬ್ಬ ಸೂಳೆಯು ಒಬ್ಬ ವಿಟನಿಂದ ಈಟಿಯನ್ನು ಒತ್ತೆ ತೆಗೆದುಕೊಂಡರೆ ಇಂಥ ವಿಟನಿಂದ ಆಕೆಗೆ ಹಣವು ಬರುವದು ನಿಲ್ಲುವದಲ್ಲದೆ ಬೇರೆ ವಿಟಪುರುಷರೂ ಕೂಡ ಆ ಈಟಿಯನ್ನು ನೋಡಿ ಅಂಜಿ ಹಿಂದಕ್ಕೆ ತಿರುಗಿ ಹೋಗುವರು.

೧೬-೧೬ ಭಾಂಡಭಾಜನ ಶುದ್ಧಿ ಇಲ್ಲದವರ ಭಕ್ತಿ=ಮನೆಯೊಳಗೆ ಬಳಕೆ ಮಾಡುವಂಥ ಭಾಂಡಂಗಳೆ ಗುಡಿಯ ಒಳಗೆ ಬಳಕೆಯ ಮಾಡುತ್ತಿರುವಳು. ಗುಡಿಯೊಳಗೆ ಬಳಕೆಯ ಮಾಡಿದಂಥ ಭಾಂಡಗಳನ್ನು ಮನೆ ಒಳಗೆ ಬಳಕೆಯ ಮಾಡುತ್ತಿರುವಳು. ಹೀಗೆ ಭಾಂಡಭಾಜನ ಶುದ್ಧಿ ಇಲ್ಲದವರ ಭಕ್ತಿ.

೧೭-೨೪ ಗರಿದೋರೆ ಗಂಡರೆಂಬರ ಕಾಣೆ=ಬಾಣವು ಎದೆಯಲ್ಲಿ ನಟ್ಟು ಹೋದಲ್ಲಿ ಅದನ್ನು ಒತ್ತಿಕೊಂಡು ಪ್ರಾಣ ಹೋಗುವ ತನಕ ಯುದ್ಧ

ಮಾಡುವ ಪರಾಕ್ರಮಿಗಳ ಕಾಣೆನು. ನಿರಿ ಸೋಂಕಲು ಮುನಿಇಲ್ಲ ಎಂದರೆ ಸ್ತ್ರೀಯರ ಸಾನ್ನಿಧ್ಯದಿಂದ ಮುನಿಯಾಗಿ ಉಳಿದವರು ಇಲ್ಲ. ಹುಲ್ಲು ಗಿಚ್ಚು ಹೊಲೆಯನ ಮೇಳಾಪ ಅಲ್ಲಿ ಹುರುಳಿಲ್ಲ ಎಂದರೆ ಹುಲ್ಲಿನ ಕಿಚ್ಚು ಹ್ಯಾಗೆ ಕ್ಷಣಿಕವೋ ಹೊಲೆಯನ ನರ್ತನವು ಹ್ಯಾಗೆ ರೀತಿಯನ್ನು ಬಿಟ್ಟು ಹಾಸ್ಯಾಸ್ಪದವೋ, ಹಾಗೆಯೇ ಹುರುಳಿಲ್ಲದ್ದು.

೧೭-೨೫ ನಿಜವನರಿಯದ ಭಕ್ತ ಬಳಲುವನಲ್ಲದೆ ಲಿಂಗ ಬಳಲುವದೇ? ಕೂಡಲಸಂಗಮದೇವ ಅರಸರಿಯದ ಬಿಟ್ಟಿಯೋ?=ಉಪಾಧಿ ಭಕ್ತನು ಮಾಡುವ ಶ್ರಮದ ಕೂಡ ಲಿಂಗವು ಇರದೆ ಅವನಿಂದ ಅದು ದೂರವಾಗಿರುವದು. ಅರಸನು ತಿಳಿಯುವಂತೆ ಅವನ ಸೇವೆ ಮಾಡಿದರೆ ಲಾಭಕರವಾಗಿರುವದು. ಇಲ್ಲದಿದ್ದರೆ ಆ ಶ್ರಮವು ವ್ಯರ್ಥವಾಗುವದು. ಅದರಂತೆಯೇ ಪರಮಾತ್ಮನು ಪ್ರೀತನಾಗುವಂತೆ ಸೇವೆ ಮಾಡಬೇಕು.

೧೮-೨ ವಚನಕಾರನು ಇಲ್ಲಿ ಪರಮಾತ್ಮನನ್ನು ವ್ಯಾಪಾರಸ್ಥನಿಗೆ ಹೋಲಿಸಿ ನುಡಿದಿದ್ದಾನೆ. ಒಮ್ಮನವಾದರೆ ಒಡನೆ ನುಡಿವನು, ಅಂದರೆ ಅವನು ಒಂದೇ ಮನಸ್ಸಿನಿಂದ ಪೂಜಿಸಿದರೆ ಪ್ರೀತಿಸುವನು. ಎರಡು ಮನಸ್ಸುಳ್ಳವನಾದರೆ ಪ್ರೀತಿಸನು. ಕಾಣಿಯ ಸೋಲ ಎಂದರೆ ಒಬ್ಬನು ಯಾವ ಪ್ರಮಾಣದಿಂದ ಸೇವೆ ಮಾಡುತ್ತಾನೋ ಅದಕ್ಕೂ ಹೆಚ್ಚಿಗೆ ಪ್ರತಿಫಲವಾಗಿ ಕೊಡನು. ಅರ್ಧ ಗಾಣಿಯ ಗೆಲ್ಲ ಎಂದರೆ ಆ ಸೇವೆಗಿಂತಲೂ ಹೆಚ್ಚಿಗೆ ಭಕ್ತನಿಂದ ಇಸದುಕೊಳ್ಳುವದಿಲ್ಲ. ಹೀಗೆ ಪರಮಾತ್ಮನು ಅವರವರ ಕ್ರಿಯೆಗಳಿಗೆ ಸರಿಯಾಗಿ ಫಲಗಳನ್ನು ಕೊಡುತ್ತಿರುತ್ತಾನೆ.

೧೮-೬ ಸಾರಸಜ್ಜನರು=ಶ್ರೇಷ್ಠವಾದ ಸಜ್ಜನರು. ದೂರ ದುರ್ಜನರು=ಹೊಲ್ಲಹರಾದ ದುರ್ಜನರು.

೨೧-೧೬ ಅದಂದೆಹುಟ್ಟಿತ್ತು ಎಂದರೆ ಮರಣವಾದಾಗಲೇ ಜನನವಾಯಿತ್ತು. ಅದಂದೆ ಹೊಂದಿತ್ತು ಎಂದರೆ ಜನನವಾದಾಗಲೆ ಮರಣವಾಯಿತ್ತು. ಈ ಪ್ರಕಾರ ನಾಣ್ಣುಡಿ ಇದ್ದು ಯಾರು ಜೀವ ಹಿಂಸೆ ಮಾಡುವರೋ ಅವರಿಗಾದರೂ ಮೃತ್ಯು ಬಿಟ್ಟದ್ದಲ್ಲ.

೨೩-೨೭ ಬಲ್ಲಿದರೊಡನೆ ಬವರವಾದೊಡೆ ಗೆಲ್ಲಲುಂಟು, ಸೋಲಲುಂಟು—ಕಳ್ಳನೊಡನೆ ಭಾಷೆ ಪೂರಾಯುವಯ್ಯ ಎಂದರೆ ಸಮರ್ಥರೊಂದಿಗೆ

ಯುದ್ಧ ಮಾಡಿದರೆ ಗೆದ್ದರೂ ಅಥವಾ ಸೋತರೂ ಕೀರ್ತಿ ಬರುವದು. ಆದರೆ ಕಳ್ಳರೊಡನೆ ಸಂಘ ತೊಟ್ಟು ಯುದ್ಧ ಮಾಡ ಹೋದರೆ, ಆ ಸಂಘವು ಎಂದಾದರೂ ಪೂರ್ಣವಾಗ ಬಹುದೋ? ಆಗಲಾರದು. ಯಾಕಂದರೆ ಅವರು ಇದಿರುಗೊಟ್ಟು ನಿಲ್ಲಲಾರರು.

೨೩-೪೦ ಜವನ ಬಾಯಲು ಬಾಲವ ಕೊಯ್ದು ಹೋದಾತ ಜಾಣನು=ಯಮನ ಬಾಯಲ್ಲಿ, ಶೀಕ್ಷೆ ಎಂಬರಸನೆಯಲ್ಲಿ ಬಾಲವ ಕೊಯ್ದು ಹೋದಾತ, ಶೀಕ್ಷೆ ಎಂಬರಸನೆಗೆ ತುತ್ತಾಗಿರುವ ಮಲತ್ರಯಗಳ ಮೇಲಣ ವಾತ್ಸಲ್ಯವನ್ನು ಕೊಯ್ದು ಹೋದಾತ, ಸುಜ್ಞಾನವೆಂಬ ಶಸ್ತ್ರದಿಂದ ಛೇದಿಸಿ ಅವನೆಲ್ಲವ ನಿವೃತ್ತಿ ಮಾಡಿ ಮುಕ್ತಿಯನ್ನು ಪಡೆದಾತನು ಜಾಣನು.

೨೪-೪೬ ಒತ್ತೊತ್ತಿಯ ಜನನವ=ಮೇಲೆ ಮೇಲೆ ಸದೆ ಬಡೆಯುವ ಉತ್ಪತ್ತಿಯನ್ನು.

೨೫-೫೮ ತಾನು ಯಾರನ್ನಾದರೂ ಬಡಿದರೆ ಅಥವಾ ಬೈದರೆ ಅವರು ತಿರುಗಿ ಬಡಿಯುವದು ಅಥವಾ ಬೈಯ್ಯುವದು ಪ್ರತ್ಯಕ್ಷವು. ಹಿಂದೆ ಮಾಡಿದ ಕರ್ಮಗಳು ಏನಾದರೂ ಆಗಲಿ. ಈಗ ಉಪಭೋಗಿಸುವವರ ಅಥವಾ ಪೂಜಿಸುವವರ ಫಲವು ಇಂದೇ ಪ್ರತ್ಯಕ್ಷವಾಗುವದು.

೨೬-೬೬ ಬಲಿತು ತರಬೇಡ=ಕಡ ಬಡ್ಡಿಯ ತರಬೇಡ, ಸಾಲ ಮಾಡ ಬೇಡ.

೨೭-೭೪ ಜ್ಞಾನ ದರ್ಪಣ ಸ್ವರೂಪವಾದ ಇಷ್ಟಲಿಂಗವನ್ನು ಹಸ್ತದಲ್ಲಿ ಹಿಡಿದುಕೊಂಡು ಆರಾಧಿಸುವ ಅಣ್ಣಗಳಿರಾ, ಆ ಲಿಂಗಕ್ಕೆ ಪ್ರಾಣಕಳಾ ಚೈತನ್ಯ ಸ್ವರೂಪವಾದ ಜಂಗಮ ಭಕ್ತಿಯ ಮಾಡಬೇಕು. ಯಾಕಂದರೆ ಆ ಜಂಗಮ ಭಕ್ತಿಯಲ್ಲಿ ಲಿಂಗ ಸನ್ನಿಹಿತವಾಗಿಪ್ಪದು. ಸ್ಥಾವರ ಎಂದರೆ ಇಷ್ಟಲಿಂಗವು ಮತ್ತು ಜಂಗಮ ಲಿಂಗವು ಒಂದೇ ಎಂಬ ಕೂಡಲ ಸಂಗ ಮನ ವಚನವದೆ.

೨೮-೭೮ ಶಿವಲಾಂಛನ ಸಮೇತನಾದ ಜಂಗಮ ಮೂರ್ತಿಯು ಹೊರಗೆ ಬಂದಿರಲು ಒಳಗೆ ಲಿಂಗಾರ್ಚನೆ ಮಾಡುತ್ತಿದ್ದರೂ ಅವನನ್ನು ಇದಿರ್ಗೊಂಡು ಆದರಿಸುವದು. ಹೀಗೆ ಮಾಡದೆ ಹೋದರೆ ಮುಖದ ಮುಂದೆ ಕನ್ನಡಿಯನ್ನು ಕಟ್ಟಿಕೊಂಡು ಮೂಗಿನ ಮೇಲೆ ಗತ್ತಿಯನ್ನು ಇಟ್ಟು ಸಾಧಕ ಮಾಡಿದಂತೆ ಸರಿ. ಅಂದರೆ ಅದು ಕೊಯ್ದುಬಿಡು

ವದು. ಅತಿಥಿಯಾಗಿ ಬಂದ ಹೊರಗಿನ ಜಂಗಮವನ್ನು ಬಿಟ್ಟು ದಿನಂ ಪ್ರತಿಯ ಜಂಗಮಸೇವೆ ಹ್ಯಾಗೆ ಸಲ್ಲುವುದು?

೨೯-೮೧ ಉದಾಸೀನವ ಮಾಡಿದರೆ ಕಲ್ಲ ತಾಗಿದ ಮಿಟ್ಟೆಯಂತಪ್ಪ ರಯ್ಯ=ಜಂಗಮ ಭಕ್ತಿಯ ಮಾಡದೆ ಹೋದರೆ, ಒಂದು ಬಂಡಿಗಲ್ಲಿಗೆ ಕಲ್ಲು ತಾಗಿದರೆ, ಅದು ಹ್ಯಾಗೆ ಹಿಂದಕ್ಕೆ ಸಿಡಿದು ತನ್ನನ್ನ ಬಾಧಿಸು ವದೋ ಹಾಗೆ ಇಂಥವನ ಸ್ಥಿತಿಯಾಗುವದು.

೩೩-೧೦೭ ಬಿದಿರಿನಿಂದ ನಾನಾ ಬಗೆಯ ಪದಾರ್ಥಗಳು ಆಗುತ್ತವೆ. ಹೀಗೆ ಬಿದರಿನಂತೆ ಎಲ್ಲರಿಗೂ ಯಾರು ಉಪಯೋಗವಾಗುವದಿಲ್ಲವೋ ಅವರನ್ನು ಪರಮಾತ್ಮನು ಮೆಚ್ಚಲಾರನು.

೩೭-೧೩೫ ಶರಣರು ತಮ್ಮ ಅರ್ಥ, ಪ್ರಾಣ ಮತ್ತು ಅಭಿಮಾನ ವನ್ನು ಕಳಕೊಂಡರೂ ಅವರು ಕಳೆದುಕೊಂಡರೆಂದು ನಿಂದಿಸ ಕೂಡದು. ಶರಣರಿಗೆ ದುಃಖಗಳು ಬಂದರೆ ಸೈರಿಸಬೇಕು.

೪೩-೩೮ ಓತೀಕಾಟವು ಹೋಗಿ ಬರುವವರನ್ನು ನೋಡಿ ಗೋಣು ಹಾಕುತ್ತದೆ. ಆದರೆ ಅವರು ಸಮೀಪಕ್ಕೆ ಬಂದರೆ ಬೇಲಿಯನ್ನು ಸೇರು ತ್ತದೆ. ಗೋಸುಂಬೆಯು ಮುಂಜಾನೆ ಹಚ್ಚಗೆ, ಮಧ್ಯಾಹ್ನ ನಸುಗೆಂಪು, ಸಾಯಂಕಾಲ ಕಪ್ಪಗೆ ಇರುತ್ತದೆ. ತೊಗಲಬಾವುಲಿಯು ಬಾಯಿಂದ ತಿಂಬುವದು. ಮತ್ತು ಅದೇ ಬಾಯಿಂದ ಮಲವನ್ನು ಬಿಡುವದು. ಹೀಗೆಯೇ ಮನಸ್ಸು ಇರುತ್ತದೆ. ಹ್ಯಾಗೆ ಕುರುಡನು ಒಂದು ಕೆಲಸ ಮಾಡಬೇಕೆಂದು ಹೊರಗೆ ಹೋಗಲು ಇಚ್ಛಿಸಿ, ರಾತ್ರೆ ಎದ್ದರೂ ಆತ ನಿಗೆ ದಿಕ್ಕು ತಪ್ಪಿ ಸಂದಿಗೊಂದಿ ಓಡಾಡಿ ಹೆಬ್ಬಾಗಿಲಿಗೆ ಬರುವಷ್ಟರಲ್ಲಿ ಬೆಳಗಾಗುತ್ತದೋ ಹಾಗೆ ಪರಮಾತ್ಮನಿಲ್ಲದ ಭಕ್ತಿಯು ವ್ಯರ್ಥವು. ಅದು ಬರೀ ಇಚ್ಛಾಮಾತ್ರದಿಂದ ಸಿಗಲಾರದು.

೪೪-೪೪ ಉಪಜೀವನದ ಕಷ್ಟಕ್ಕೋಸ್ಕರ ಹ್ಯಾಗೆ ಬೇಡನು ಒಂದು ಅಡವಿಯ ಕಾಯನ್ನು ತಂದು ಅದಕ್ಕೆ ಮಸಿಯನ್ನು ಹಚ್ಚಿ ಅದು ನೇರಿಲ ಹಣ್ಣೆಂದು ರಾತ್ರೆ ಸಮಯದಲ್ಲಿ ಮಾರುತ್ತಾನೋ ಹಾಗೆ ಕೆಟ್ಟ ವೇಳೆಯ ಮೂಲಕ ಉಂಟಾದ ದಾರಿದ್ರ್ಯಕ್ಕೆ ಅಂಜಿ ನಾನು ನಿನಗೆ ಶರಣ ಹೊಗುತ್ತೇನೆ. ಇದರಲ್ಲಿ ಯಾವುದು ಹುಸಿ, ಯಾವುದು

ಕಿರಿದು ಎಂಬದನ್ನು ಜ್ಞಾನಿಯಾದ ನೀನು ನಿಶ್ಚಯವಾಗಿ ಬಲ್ಲೆ. ನಾನು ನಿಶ್ಚಯವಾಗಿ ಹೊಟ್ಟೆಯ ಆಶೆಗಾಗಿ ಮಾತ್ರ ಈ ಹೊರಗಿನ ಡಂಭಾಚಾರಗಳನ್ನು ಮಾಡುತ್ತಲಿದ್ದೇನೆ.

೪೩-೫೩ ತಲೆಯೊಡೆಯಂಗೆ ಕಣ್ಣ ಬೈಚಿಡುವೆ=ತಲೆ ಹೊಡೆಯಲು ಸಿದ್ಧನಾಗಲು ನನ್ನ ತಲೆ ಹೊಡೆಯಬಹುದು. ಆದರೆ ನನ್ನ ಕಣ್ಣನ್ನು ಮಾತ್ರ ನಾನು ಬಚ್ಚಿಟ್ಟುಕೊಳ್ಳಗೊಡಬೇಕೆಂದು ಹೇಳುವನಂತೆ ಇವನ ರೀತಿಯು.

೪೭-೬೫ ಒಲಿವ ಗಂಡಗೊಮ್ಮೆ ಒಲ್ಲದಿಪ್ಪ ಕಂಡವ್ವ=ಪ್ರೀತಿಯುಳ್ಳ ಗಂಡನು ಒಮ್ಮೆ ಪ್ರೀತಿಯನ್ನು ತೋರಿಸುವದಿಲ್ಲ.

೪೯-೭೮ ಆ ಮಿಹಿಲಾಳು ಭೋಜದೇವ ಬಲ್ಲಾಳು ಎಂದರೆ ಅರಸನಲ್ಲಿ ಇದ್ದಂಥ ಒಬ್ಬ ಅಂಜುಬುರುಕ ಸೈನಿಕನು. ನಾನು ಭೋಜದೇವ ಬಲ್ಲಾಳು ಎಂದರೆ ಅತಿ ಧೈರ್ಯಸ್ತನಾದ ಸೈನಿಕನು ಇದ್ದೇನೆಂದು ಹೇಳಿದರೆ. ಆನು ಸೂಳೆ ನಮ್ಮಕ್ಕ ಸೂಳೆ ಎಂದರೆ ನಾನೊಬ್ಬ ಸೂಳೆಯು ಇದ್ದು ನಮ್ಮಕ್ಕ ಅಂದರೆ ಶ್ರೇಷ್ಠ ವರ್ತನೆಯುಳ್ಳ ಚಂಡ ಸೋಮವ್ವನಂತೆಯೇ ನಾನೂ ಒಬ್ಬ ಸೂಳೆ ಇದ್ದೇನೆ ಎಂದರೆ ಹಾಸ್ಯಾಸ್ಪದವಾಗದೇ ಇರಲಾರದು. ಅದರಂತೆ ಶುಭ್ರವರ್ಣವುಳ್ಳ ಒಂದು ಕರುವು ಎಂದ ಮಾತ್ರಕ್ಕೆ ಅದು ಎಂದಾದರೂ ಸಮೃದ್ಧವಾಗಿ ಹಾಲನ್ನು ಕರೆಯಬಹುದೇ? ಕರೆಯಲಾರದು. ಇದರಂತೆ ನಾನು ಶರಣರ ಕೂಡ ವಿರೋಧ ತಾಳಿ ವರ್ತಿಸುವದು ಅಶಕ್ಯವಾಗಿರುವದು. ಚಂಡ ಸೋಮವ್ವನು ತನ್ನ ಮನೆಗೆ ಬಂದ ಜಂಗಮನನ್ನು ಅರ್ಚಿಸುತ್ತಿರುವಾಗ ಅವನು ಸೂರ್ಯ ಮುಳುಗುವವರೊಳಗೆ ತಿರುಗಿ ಹೋಗಬೇಕೆಂದು ಹೇಳಿದ್ದರಿಂದ ಆಕೆಯು ಅವನ ಅರ್ಚನೆಯು ಮುಗಿಯುವ ತನಕ ಸೂರ್ಯನಿಗೆ ಆಜ್ಞಾಪಿಸಿ ಆಕಾಶದಲ್ಲಿ ಅವನನ್ನು ತಡೆದಿದ್ದಳೆಂದು ಕಥೆಯುಂಟು.

೫೦-೯೧ ಭೃತ್ಯಾಪರಾಧ ಸ್ವಾಮಿನೊದ್ದಂಡ ಕೂಡಲಸಂಗಮದೇವಾ ನೀವೇ ಪ್ರಮಾಣು=ಭೃತ್ಯನು ಅಪರಾಧ ಮಾಡಿದಾಗ್ಗೆ ಸ್ವಾಮಿಗೆ ಸಾಷ್ಟಾಂಗ ನಮಸ್ಕಾರ ಮಾಡಲು ಅವನು ಮನ್ನಿಸುತ್ತಾನೆ. ಇದರ ಸತ್ಯಾಸತ್ಯತೆಗೆ ಪರಮಾತ್ಮನೇ ಪ್ರಮಾಣು.

೫೩-೧೦೯ ಕೀಳಿಂಗಲ್ಲದೆ ಹಯನ ಕರೆವುದೇ=ಆಕಳನ್ನು ಸಂತೈಸಿ ಅದರ ಕೆಳಗೆ ಕುಳಿತುಕೊಂಡರೆ, ಅದು ಹಾಲನ್ನು ಕೊಡುವದು.

೫೪-೧೧೩ ಆಯತ ಸ್ವಾಯತ ಸನ್ನಿಹಿತದನು ಭಾವವ ನಾನೆತ್ತ ಬಲ್ಲೆನು?=ಆಯತ ಸ್ವಾಯತ, ಸನ್ನಿಹಿತ ಎಂಬಿವು ಮೂರು ತ್ರಿವಿಧ ಲಿಂಗ ಸಂಬಂಧದ ಭೇದಗಳಿವೆ. ಆಯತವೆಂದರೆ ದೇಹದಲ್ಲಿ ಇಷ್ಟ ಲಿಂಗ ಸಂಬಂಧವು. ಇದು ಗುರುವಿನಿಂದಾಗತಕ್ಕದ್ದು. ಸ್ವಾಯತ ಅಂದರೆ ಅಂತರಂಗದಲ್ಲಿ ಪ್ರಾಣಲಿಂಗ ಸಂಬಂಧವು. ಸನ್ನಿಹಿತವೆಂದರೆ ಆತ್ಮಾಂಗದಲ್ಲಿ ಭಾವಲಿಂಗ ಸಂಬಂಧವು. ಇದು ಆನಂದ ಸ್ವರೂಪ ವಾದ ಜಂಗಮದ ಸಂಬಂಧವು.

೫೫-೧೨೦ ಆಳವಾಡಿ ಕಳೆವನು=ಪದಾರ್ಥಗಳನ್ನು ದೊರಕಿಸಿ ಅವುಗ ಳನ್ನು ಲಿಂಗ ಜಂಗಮಕ್ಕೆ ಅರ್ಪಿಸುವೆನು. ಒಂದು ಜುಗ ಮೇಲೆ ಕೆಡೆ ದಂತೆ=ಅನೇಕ ಯುಗಗಳು ನನ್ನ ಮೇಲೆ ಬಿದ್ದರೆ, ಎಷ್ಟು ದುಃಖವಾಗು ವದೋ ಅಷ್ಟು ದುಃಖವಾಗುವದು.

೫೬-೧೨೧ ಅಂಗಯ್ಯ ತಿಂದುದು=ಶರಣರು ಬಂದು ನನ್ನನ್ನು ಯಾವಾಗ್ಗೆ ಬೇಡುವರೋ ಎಂದು ನನ್ನ ಅಂಗೈಯ್ಯ ತಿಂಡಿಯು ಹೆಚ್ಚು ತ್ತಲಿದೆ. ಎನ್ನ ಕಂಗಳು ತೆತ್ತಿಹವಯ್ಯ=ನನ್ನ ಕಣ್ಣುಗಳು ನಟ್ಟಿರು ವವು. ಅಂದರೆ ಅವು ಎವೆ ಹಳಚದೆ ನಿರಿುರಿಕೊಂಡಿರುತ್ತವೆ.

೫೭-೧೩೦ ಆವಿಗೆಯು ಲೊದಗಿವ ಕಪ್ಪಿನಂತೆ=ಆವಿಗೆಯು ಹೊರಗೆ ನುಣ್ಣಾಗಿ ತೋರುತ್ತಿದ್ದರೂ ಒಳಗೆ ಅತ್ಯಂತ ಕಪ್ಪು ಬಣ್ಣದ್ದಿರುತ್ತದೆ. ಅದ ರಂತೆ ನಾನು ಡಂಭಾಚಾರವೃತ್ತಿಯುಳ್ಳವನಾಗಿದ್ದೇನೆ. ಹೊರಗೆ ನುಂಪಾಗಿ ಸಿಂಹ ಕ್ಕೊಲಿವ ಮದ ಕರಿಯಂತೆ ಆನು ಜಂಗಮಕ್ಕೊಲಿದೆನಯ್ಯ=ಹೊರಗೆ ಕೋಮಲ ತರನಾಗಿ ತೋರಿದರೂ ಜಂಗಮಕ್ಕೆ ನಾನು ಸಹಜ ಭಾವ ದಿಂದ ಭಕ್ತಿಯು ಮಾಡುವದಿಲ್ಲ. ಆದರೆ ಹ್ಯಾಗೆ ಮದ ಗಜವು ಸಿಂಹದ ಕಡೆಗೆ ಮನಸ್ಸಿನ ವಿರುದ್ಧವಾಗಿ ಎಳೆಯಲ್ಪಡುತ್ತದೋ ಹಾಗೆ ಮಾತ್ರ ನಾನು ಜಂಗಮಕ್ಕೆ ಒಲಿಯುತ್ತಿದ್ದೇನೆ.

೫೮-೧೪೯ ತನ್ನ ಸುಖದುಃಖಗಳನ್ನು ಶರಣಸ್ಥಲ ಅಂದರೆ ತನ್ನ ಮೇಲಿನ ಸ್ಥಲದವರಿಗೆ ಹೇಳಿದರೆ, ಪರಸ್ಪರ ಕೂಡಲಾಗದು. ಅದು ಮಾತ್ಸ

ರ್ಯಕ್ಕೆ ಆಸ್ಪದವು. ಆದ್ದರಿಂದ ತಮ್ಮ ತಮ್ಮ ಸ್ಥಲದವರಿಗೆ ಹೇಳಿಕೊ ಳ್ಳತಕ್ಕದ್ದು. ಸವತಿಯು ಎಂದಿಗಾದರೂ ತನ್ನೊಡನೆ ಸುಖವಾಗಿರು ವಳೇ? ಇರಲಾರಳು. ಆದ್ದರಿಂದ ಪರಮಾತ್ಮನೇ ಜಂಗಮ ರೂಪಾಗಿ ಬಂದು ನನ್ನಲ್ಲಿಯ ಮನಸ್ಸಿನ ದೋಷಗಳನ್ನು ಕಳೆಯಬೇಕು.

೫೪-೧೪೦ ಅನೇಕ ಜನ್ಮಗಳಲ್ಲಿ ಮಾಡಿದ ಕರ್ಮಗಳು ನನ್ನನ್ನು ಬಿಟ್ಟು ಹೋಗಲಾರವು. ಅವು ಉಭಯ ಕುಳ ಎಂದರೆ ಲಿಂಗಪೂಜೆ ಜಂಗಮ ದಾಸೋಹಕ್ಕಲ್ಲದೆ ತೆರಳವು. ಬೀದಿಯಲ್ಲಿ ಬಿದ್ದ ಶಿಶುವನ್ನು ತಾಯಿಯು ಕರೆದುಕೊಂಡು ಹೋಗುವಂತೆ ನಾನು ಆರು ಜನ್ಮದಲ್ಲಿ ಪರ ಮಾತ್ಮನು ಬರುವಂತೆ ಮಾಡಿದ್ದು ನಾನು ಬಲ್ಲೆನಾದ್ದರಿಂದ ಎಲೋ ಪರಮಾತ್ಮನೇ, ನಿನ್ನ ಹಂಗಿನ ಮೇಲೆ ಅವಲಂಬಿಸಿದ್ದೇನೆ. ನನ್ನನ್ನು ರಕ್ಷಣೆ ಮಾಡುವವರು ಲಿಂಗಜಂಗಮರಿದ್ದಾರೆ.

೫೪-೧೪೬ ತಾಳ ಸಂಪುಟಕ್ಕೆ ಬಾರದ ಘನವ ಅರ್ಪಿಸ ಹೋದರೆ ಅರ್ಪಣ ಮುನ್ನಿಲ್ಲ=ಲಿಂಗ ಜಂಗಮವನ್ನು ಭಿನ್ನವಿಟ್ಟು ನುಡಿದರೆ ಪರ ಮಾತ್ಮನು ಕೇವಲ ತಾಲವ್ಯ ಸಂಪುಟಕ್ಕೆ ಅಂದರೆ ಸ್ತೋತ್ರಕ್ಕೆ ಅಧೀನ ವಾಗಲಾರನು. ಅವನಿಗೆ ಅರ್ಪಿಸ ಹೋದರೆ ಅರ್ಪಣವಾಗಲಾರದು. ಗಮನ ನಿರ್ಗಮನವಾಯಿತ್ತು=ಜ್ಞಾನವು ಜ್ಞಾನ ರಹಿತವಾಗುವದು.

೬೬-೧೬೫ ಕಾದಂಥ ವಸ್ತುವನ್ನು ಹಿಡಿಯಬೇಕಾದರೆ ಮತ್ತೊಂದು ತಂಪಾದ ವಸ್ತುವಿನಿಂದಲೇ ಹಿಡಿಯಬೇಕು. ಇದನ್ನು ಬಿಟ್ಟು ಹಿಡಿಯ ತಕ್ಕ ಸಾಧನವನ್ನು ಕಾಯಿಸಿ ಅದರಿಂದಲೇ ಕಾದ ವಸ್ತುವನ್ನು ಹಿಡಿ ದರೆ, ಹಿಡಿಯುವವನ ಕೈ ಬೆಂದು ನೋವಾಗಿ ಮಿಡುಕುವನು. ಈ ರೀತಿಯಾಗಿ ವ್ಯವಹರಿಸುವಂಥ ಮನುಷ್ಯನೇ, ನೀನು ಲಾಂಛನಧಾರಿ ಯನ್ನು ಕಂಡು ಅವನು ಬಡವನೆಂದೆನಬೇಡ. ಅವನನ್ನು ಪ್ರೀತಿ ಯಿಂದಲೇ ಪೂಜಿಸತಕ್ಕದ್ದು. ಅವನಲ್ಲಿ ಪರಮಾತ್ಮನ ನಿಜವು ಅಡಗಿದ್ದು ನಿರಾಕಾರವಾದ ಬ್ರಹ್ಮನು ವಾಸಿಸುತ್ತಾನೆ. ಅವನ ಆಚರಣೆಯಲ್ಲಿ ಲಿಂಗ ಜಂಗಮವು ತುಂಬಿಕೊಂಡಿರುತ್ತವೆ.

೬೭-೧೯ ಅಂದೇಕೆ ಬಾರರು ನೀರಿಂಗೆ ನೇಣಿಂಗೆ ಹೊರಗಾದೆಂದು ಸಮಯಾಚಾರಕ್ಕೆ ಒಳಗಾದಂದು?=ನಾನು ವಿಪ್ರ ಕರ್ಮಕ್ಕೆ ಹೊರಗಾಗಿ

ವೀರಶೈವ ಮಾರ್ಗಕ್ಕೆ ಒಳಗಾದ ಬಳಿಕ, ಆ ನನ್ನ ಬಂಧುಗಳು ನನ್ನನ್ನು ಏಕೆ ಸಂಬಂಧಿಸಿಕೊಳ್ಳದೆ ಹೋದರು?

೬೭-೨೧ ಒಟ್ಟಿಲ ಬೆನಕ=ಅಂಗಡಿಯಲ್ಲಿಯ ವ್ಯಾಪಾರದ ಸಾಮಾನುಗಳನ್ನು ಒತ್ತಟ್ಟಿಗೆ ಒಟ್ಟಿ ಅಲ್ಲಿ ಸ್ಥಾಪಿಸಿದ ಗಣೇಶನು.

೬೮-೨೬ ಕುಳ ಸ್ಥಳಂಗಳಿಲ್ಲವ ಎಂದರೆ ಅರಿವು ಆಚರಣೆಯ ವಿಷಯಗಳನ್ನು. ಅಂಗವಿಲ್ಲದ ಸಂಗವು ಆಳವಿಲ್ಲದ ಹುಯ್ಯಲಂತೆ=ಮನಸ್ಸಿಲ್ಲದೆ ಬಲವಂತವಾಗಿ ಸ್ತ್ರೀಯೊಡನೆ ಕೂಡಿದರೆ, ಅವಳು ರೋದನ ಮಾಡುವಳೇ ಹೊರ್ತು ಆಕೆಯಿಂದ ಸುಖವನ್ನು ಹೊಂದಲಿಕ್ಕೆ ಆಗದು. ಧರ್ಮದ ಮರ್ಮವನ್ನು ಶರಣರಲ್ಲಿ ಹೇಳಬೇಕಲ್ಲದೆ, ಅದರಲ್ಲಿ ಪ್ರೀತಿ ಇಲ್ಲದವರಲ್ಲಿ ಹೇಳಕೂಡದು.

೬೮-೨ ಹಾರುವ ಹಾರುವನಪ್ಪೆ ನಾನು=ಅತ್ಯಂತವಾಗಿ ಇಚ್ಛಿಸುವಂಥ ಬ್ರಾಹ್ಮಣನು ನಾನು ಇದ್ದೇನೆ.

೬೯-೧೦ ಸಾರಿ ಹೊರಸೇಕೆ?=ಶರಣರ ಹೊರಸಿಗೆ ಹೊಂದಿ ಬೇರೊಂದು ಹೊರಸು ಹಾಕಿ ಅವರಿಗೆ ಸರಿ ಸಮಾನವಾಗಿ ಮಲಗುವದೇಕೆ?

೭೦-೧೩ ನಾನು ಹೊತ್ತ ಹುಳ್ಳಿ. ಇಲ್ಲಿ ಹುಳ್ಳಿ ಎಂದರೆ ಉರಿಯುವ ಕಟ್ಟಿಗೆ. ದೇಹವನ್ನು ಇಂಥ ಕಟ್ಟಿಗೆಗೆ ಹೋಲಿಸಿನುಡಿದಿದ್ದಾನೆ.

೭೧-೪ ಅಷ್ಟದಳ ಕಮಲವ ಸುತ್ತುವ ಜೀವಾತ್ಮನೆ ಮೆಟ್ಟಿದ ದಳವನರಿಯುದೆ= ಹೃದಯ ಕಮಲದಲ್ಲಿ ಅಷ್ಟದಳಗಳಿದ್ದು ಅವು ಅಧೋಮುಖವಾಗಿರುವವು. ಜೀವಾತ್ಮನು ಭವ ಮುಖವಾಗಿರುವಲ್ಲಿ ಈ ಎಂಟು ದಳಗಳನ್ನು ಸುತ್ತುತ್ತಿರುವನು. ಆದರೆ ಅವನಿಗೆ ಭವವು ದೂರವಾದ ಪಕ್ಷದಲ್ಲಿ ಅವನು ಈ ಎಂಟು ದಳಗಳನ್ನು ಬಿಟ್ಟು ಊರ್ಧ್ವಮುಖವಾಗಿರುವ ನಾಲ್ಕು ದಳಗಳನ್ನು ಮೆಟ್ಟುವನು. ಅವು ಧರ್ಮ, ಜ್ಞಾನ, ವೈರಾಗ್ಯ, ಐಶ್ವರ್ಯ ದ್ಯೋತಕವಾಗಿರುವವು. ಜೀವಾತ್ಮನು ಈ ಚತುರ್ದಳ ಕಮಲ ಕರ್ಣಿಕಾಕಂಜ ಮಧ್ಯದಲ್ಲಿ ನೆಲೆಗೊಂಡು ಅಚಲಾನಂದ ಪೂಜೆಯ ಕೈಕೊಂಡು ಒಪ್ಪುವಂಥ ಶಿವಲಿಂಗದಲ್ಲಿ ತನ್ನ ಮನಸ್ಸನ್ನು ಸ್ಥಿರ ಮಾಡುವಂಥದನ್ನು ತಿಳಿದಿರಬೇಕು.

೭೬-೬ ಅಭ್ಯಾಸವೆನ್ನ ವರ್ತಿಸಿತ್ತಯ್ಯ=ನಿತ್ಯದ ಕ್ರಿಯೆ ಕರ್ಮಗಳು ನನ್ನನ್ನು ಬೇರೆ ವಾರಿಗೆ. ಒಯ್ಯುತ್ತವೆ.

೭೬-೧೧ ಇಂದು ಎಂದರೆ ಚಂದ್ರ, ಚಂದ್ರನೆಂದರೆ ಜ್ಞಾನ; ಇಂದು ಹುಟ್ಟಿದ ಕೂಸಿಂಗೆ ಎಂದರೆ ಜ್ಞಾನೋದಯವಾಗಿ ಗುರು ಕಾರುಣ್ಯವನ್ನು ಪಡೆದು ಲಿಂಗ ಸಂಬಂಧಿಯಾದಂಥ ಶರಣನಿಗೆ. ಇಂದೇ ಎಂದರೆ ಜ್ಞಾನೋದಯವಾದಾಗಲೆ. ಜವ್ವನವಾಯಿತ್ತು ಎಂದರೆ ಶಿವಾದ್ವೈತ ಭಕ್ತಿ ಎಂಬ ಯೌವ್ವನಾವಸ್ಥೆಯು ಪ್ರಾಪ್ತವಾಯಿತ್ತು. ಆ ಕೂಸು ಎಂದರೆ ಶರಣನು. ಬೀದಿಯಲ್ಲಿ ಒತ್ತೆಗೊಳಲು ನಿಂದಿತ್ತಯ್ಯ ಎಂದರೆ ಇಂದ್ರಿಯಂಗಳೆಂಬ ಸಂತೆಯಲ್ಲಿ ನಿಜಾನಂದ ಶಿವಸುಖವನ್ನು ಅರ್ಪಿಸಲು ಮುಂದುವರಿಯುತ್ತಾನೆ. ಆದರೆ ಹೀಗೆ ಅರ್ಪಿಸ ಬಂದಂಥ ಶರಣನ ಸಂಗ ಸುಖವನ್ನು ತಿಳಿಯಲು ಪರಮಾತ್ಮನೊಬ್ಬನಿಗೆ ಸಾಧ್ಯವು. ಇತರರಿಗೆ ಸಾಧ್ಯವಲ್ಲ.

೭೭-೧೫ ಗುರುವು ತೋರಿಸಿದಮಾರ್ಗವನ್ನು ನೋಡದೆ, ಜ್ಞಾನಕ್ಕೆ ಹೊರಗಾಗಿ ಮನಸ್ಸಿಗೆ ಬಂದಂತೆ ನಡೆದು ಹುಚ್ಚನಾಗಿ ತಿರುಗಿದೆ. ಆದರೆ ನಿಜ ಸುಖವು ದೊರೆಕೊಳ್ಳಬೇಕಾದರೆ ಈ ಪ್ರಕಾರ ವರ್ತಿಸದೆ, ಮಿತ್ರನು ಅಂದರೆ ಗುರುವು ಯಾವ ಮಾರ್ಗವನ್ನು ತೋರಿಸುತ್ತಾನೋ ಆ ಮಾರ್ಗದಂತೆ ನಡೆಯುವದು ಅವಶ್ಯವು. ಇದರಿಂದಲೇ ಸುಖವು. ಹೀಗೆ ನಡೆದಿದ್ದಾದರೆ, ಮನೋವಿಕಾರಗಳು ಅಲ್ಲಿಯೇ ಲಯವಾಗಿ ಹೋಗುತ್ತವೆ. ಹೀಗೆಯೇ ಪರಮಾತ್ಮನ ದಯೆಯನ್ನು ಸಂಪಾದಿಸತಕ್ಕದ್ದು.

೭೭-೧೭ ಮೇಲಾದ ಫಲವ ನಮ್ಮವರು ಬೀಜ ಸಹಿತ ನುಂಗಿದರು=ಶ್ರೇಷ್ಠವಾದ ಫಲವನ್ನು ಎಂದರೆ ನಿಜ ಮೋಕ್ಷವೆಂಬ ಫಲವನ್ನು. ಎಮ್ಮವರು ಎಂದರೆ ಶರಣರು. ಬೀಜ ಸಹಿತ ಚಿದಹಂಕಾರ ಸಹವಾಗಿ. ನುಂಗಿದರು ಒಳಕೊಂಡರು. ಎನಗಿನ್ನಾವ ಭವವಿಲ್ಲ ಉತ್ಪತ್ತಿ ಇಲ್ಲ.

೭೭-೧೯ ಹ್ಯಾಗೆ ನದಿಯು ಎಲ್ಲರಿಗೂ ಪರೋಪಕಾರಿಯಾಗಿ ಪ್ರವಹಿಸುತ್ತದೋ ಹಾಗೆ ಇರುವಂಥವನೇ ಭಕ್ತ. ತನ್ನೊಡನೆ ಇದ್ದವರಿಗೆ ಸುಖ ಸಮಾಧಾನಗಳನ್ನು ಕೊಡಬಲ್ಲವನೇ ಭಕ್ತ. ಈ ಪ್ರಕಾರ ಅರ್ಪಣವನ್ನು ಮಾಡಿ ಪ್ರಸಾದ ಭೋಗಿಯಾಗಿರುವವನಲ್ಲಿ ಪರಮಾತ್ಮನಿರುತ್ತಾನೆ.

೭೫-೨೦ ನಾನು ಮಾಡುವುದೆಲ್ಲವು ನನ್ನ ಪುಣ್ಯದ ಫಲವಾಗಿದೆ. ನನ್ನ ಕರ್ಮಗಳನ್ನು ನಾನಾ ವಿಧ ಕೃತ್ರಿಮ ಉಪಾಯಗಳಿಂದ ಶಾಂತಿಯ ಮಾಡಹೋದರೆ, ಅದರಿಂದ ಅಹಿತವೇ ಹೊರ್ತು ಹಿತವಾಗಲಾರದು. ಆದರೆ ನಾನು ಪರಮಾತ್ಮನನ್ನು ಪೂಜಿಸಿದ್ದಾದರೆ, ಈ ಕರ್ಮಗಳು ದೂರಾಗಿ

ನಿಜವಾದ ಭಕ್ತಿಯು ಉತ್ಪನ್ನವಾಗಿ ಅದು ನನ್ನನ್ನು ಒಳಕೊಂಡು ಬಿಡುತ್ತದೆ.

೭೮-೩ ಸದ್ಯೋಜಾತ ಎಂದರೆ ಸದಾಶಿವಮೂರ್ತಿ. ಕೈಲಾಸದ ನಾಲ್ಕು ದ್ವಾರಗಳ ಎದುರಿಗೆ ಉಪ್ಪರ ಗುಡಿ ಎಂದರೆ ಉನ್ನತವಾದ ಭಕ್ತಿ ಗೃಹವು ರಚಿಸಲ್ಪಟ್ಟಿರುವದು. ನಂದಿವಾಹನ ನಾಲ್ಕು ದಿಕ್ಕಿಗೆ ನಾಲ್ಕು ವೃಷಭ ವಾಹನಗಳಿವೆ. ಹೀಗೆಂದು ಶೃತಿಗಳು ಡಂಗುರವನ್ನು ಹೊಡೆಯುತ್ತಲಿವೆ.

೭೯-೮ ಅಸ್ತಿಗ್ರಾಹಕನೆಂಬ ಗಣೇಶ್ವರನ ಇಚ್ಛಾ ಮಾತ್ರದಿಂದ ಜಗಜುಗವಯ್ಯ=ನಿತ್ಯತ್ವವನ್ನು ಉಳ್ಳಂಥ ನೀಕಲ ಬ್ರಹ್ಮನೆಂಬ ಗಣಾಧೀಶ್ವರನ ಚಿತ್‌ಶಕ್ತಿಯ ನೆನಹು ಮಾತ್ರದಿಂದ ಜಗತ್ತೂ ಯುಗಗಳೂ ಉತ್ಪನ್ನವಾಗಿವೆ.

೮೦-೧೭ ಪ್ರಳಯ ಪ್ರಳಯ ಅಂದಂದಿಗೆ ಹಳೆಯ=ಅನಂತ ಪ್ರಳಯಗಳಾದ ಆಯಾ ಕಾಲಗಳಲ್ಲಿ ಹಳೆಯ ಎಂದರೆ ಮೂಲಿಗನಾಗಿ ಕಾರಣಿಕನಾಗಿ ಇರುತ್ತಾನೆ.

೮೪-೩೯ ಗುರುಲಘುವೆನ್ನದವರ ಬಾಯಲ್ಲಿ ಮೆಟ್ಟಿ ಹುಡಿಯ ಹೊಯ್ಯದೆ ಮಾಬನೆ?=ಗುರುವೇ ದೀರ್ಘಾಕ್ಷರ ಸ್ವರೂಪು, ಉಳಿದ ದೈವವೇ ಹೃಸ್ವಾಕ್ಷರ ಸ್ವರೂಪು ವೆಂದರಿಯಬೇಕು. ಹೀಗೆ ಅರಿಯದವರ ಬಾಯಲ್ಲಿ ಮೆಟ್ಟಿ ಹುಡಿಯನ್ನು ಹಾಕುವದನ್ನು ಬಿಡುವನೇ?

ನಿಮ್ಮ ಹೇಳಿದ ಹೇಳಿಕೆಯಿಂದ ಪಿಂಬೆರ ವೈಲಾರಗೆ ಮೇಳವಾಡುತ್ತ ಇದ್ದ=ನೀವು ಕೊಟ್ಟ ಅಪ್ಪಣೆಯಿಂದ ಪಿಂಬೆರ ಕ್ಷೇತ್ರದಲ್ಲಿರುವ ಮಣ್ಣು ವೈಲಾರಗೆ ಬೆಣ್ಣ ಸಿಡಿ, ಸೊಪ್ಪಿನುಡಿಗೆ ಮೊದಲಾದವುಗಳನ್ನು ಉಡಿಸಿ ವಿನೋದಿಸುತ್ತಿದ್ದನು.

೮೫-೪೧ ಅವಲಕ್ಷಣ ನಾಯ ನುಡಿಯ ನಾಲಿಗೆಯ ಸಡಗರ ಡೋವಿಗೆ ಮೃತ್ಯುವಿನ ನುಡಿಗೊಳಗಾಯಿತ್ತು=ಯಾವನು ಪರಶಿವನಲ್ಲದೆ ಬೇರೆ ದೈವವದೆ ಎಂದು ನುಡಿಯುತ್ತಾನೋ ಅವನ ನುಡಿಯು ಕಿವಿ ಬಾಯಿಯನ್ನು ಕೊಯಿಸಿಕೊಂಡ ನಾಯಿಯ ಬೊಗಳುವಿಕೆಗೆ ಸಮಾನವು. ಅದರಂತೆ ಅವನ ನಾಲಿಗೆಯೂ, ಸಡಗರವೂ, ತಲೆಯೂ ಈ ನಾಯಿಯ

ನಾಲಿಗೆ, ಅಪೇಕ್ಷೆ ಮತ್ತು ತಲೆಗೆ ಸಮಾನವು. ಈ ಬಗೆಯ ನುಡಿಯು ಮೃತ್ಯುವಿನ ನುಡಿಗೆ ಒಳಗಾಗುವದು.

೮೩-೪೬ ಮಾತಿನ ಮಾತಿಂಗೆ=ವೇದಶಾಸ್ತ್ರಗಳ ಮಾತನ್ನು ಕಲಿತು ಕೊಂಡು.

೮೭-೫೫ ಬ್ರಹ್ಮ ಸಭೆ ನೆರೆದಲ್ಲಿ ಎಂದರೆ ಬ್ರಾಹ್ಮಣರ ಸಭೆ ನೆರೆದ ಕಾಲಕ್ಕೆ. ಬ್ರಹ್ಮವಿತ್ತುಗಳು ಎಂದರೆ ಬ್ರಾಹ್ಮಣರು. ಬ್ರಹ್ಮತ್ವ ಪಡೆದು, ಬ್ರಹ್ಮೋಪದೇಶವನ್ನು ಹೊಂದಿ, ತಮ್ಮ ವಚನ ಬ್ರಹ್ಮರೆನಿಸಿಕೊಂಡು ತಮ್ಮ ವಾಕ್ಯದಲ್ಲಿ ಬ್ರಾಹ್ಮಣರೆನಿಸಿಕೊಂಡು, ವಿಷ್ಣುವನ್ನು ನಂಬುವರು.

ನಿಕ್ಷೇತ್ರ ನೆರೆದ=ಭೂಮಿಯನ್ನು ಹೋಗಲಾಡಿಸಿಕೊಂಡನು.

೮೭-೫೬ ಬಡಗಿಯ ಕುಲದಲ್ಲಿ ಹುಟ್ಟಿದ ಮಾಚಲ ದೇವಿಯ ಶುದ್ಧ ಸ್ತ್ರೀಯಳನ್ನಾಗಿ ಮಾಡುವೆವೆಂದು ಬಂಗಾರದ ಆಕಳನ್ನು ಮಾಡಿಸಿ ಅದರ ಹೊಟ್ಟೆಯೊಳಗೆ ಪಂಚಾಮೃತವನ್ನು ತುಂಬಿಸಿ ಚಿನ್ನದ ಕೊಪ್ಪರಿಗೆಯಲ್ಲಿ ಹಾಲು, ಬೆಳ್ಳಿಯ ಕೊಪ್ಪರಿಗೆಯಲ್ಲಿ ಮೊಸರು, ಕಬ್ಬಿಣ ಕೊಪ್ಪರಿಗೆಯಲ್ಲಿ ನೀರು ತುಂಬಿಸಿ, ಆ ಬಂಗಾರದ ಆಕಳ ಬಾಯಲ್ಲಿ ಹೊಗಸಿ, ಹಿಂದಿನಿಂದ ತೆಗಿಸಿ, ಚಿನ್ನದ ಕೊಪ್ಪರಿಗೆಯಲ್ಲಿ ಸ್ನಾನವ ಮಾಡಿಸಿ, ಒಂದನೇ ಜನ್ಮವಾಯಿತ್ತೆಂದು, ಮತ್ತೆ ಬಾಯಲ್ಲಿ ಹೊಗಸಿ ಹಿಂದಿನಿಂದ ತೆಗೆದು ಬೆಳ್ಳಿಯಕೊಪ್ಪರಿಗೆಯಲ್ಲಿಯ ಮೊಸರಿನ ಸ್ನಾನ ಮಾಡಿಸಿ ಎರಡನೇ ಜನ್ಮವಾಯಿತ್ತೆಂದು, ಮತ್ತದರ ಬಾಯಲ್ಲಿ ಹೊಗಸಿ ಹಿಂದೆ ತೆಗೆದು ಕಬ್ಬಿಣ ಕೊಪ್ಪರಿಗೆಯಲ್ಲಿ ಉದಕದಲ್ಲಿ ಸ್ನಾನವ ಮಾಡಿಸಿ, ಮೂರನೇ ಜನ್ಮವಾಯಿತ್ತೆಂದು ಶುದ್ಧ ಕ್ಷತ್ರಿಯಳಾದಳೆಂದು ಆ ಮಲಿನವಾದ ಕ್ಷೀರದಲ್ಲಿ ಹಾಲು ಪಾಯಸಮಾಡಿ ರಾವಣ ಶಾಖೆಯಲ್ಲಿ ಎಂದರೆ ಔಡಲದ ಎಲೆಯಲ್ಲಿ ತಿಂಬುವರಿಗೇನೆನ್ನಲಿ?

೮೭-೫೭ ಮೂರುತಿಗೊಂಡಲ್ಲಿ ಚತುರ್ವೇದಿಗಳಿಗೊಮ್ಮೆ ಅಕ್ಕಿತ್ತೆ ಅಯ್ಯ?=ಚತುರ್ವೇದಿಗಳು ಯಜ್ಞ ಮಾಡಲು ಮೂರುತಿಗೊಂಡಲ್ಲಿ ದೀಕ್ಷಾ ಬದ್ಧರಾಗಿರಲು ಅದು ಅವರಿಂದ ನೀಗಿಸಲು ಶಕ್ಯವಾದೀತೇ?

೮೯-೬೩ ಹೊಲೆ ಗಂಡಲ್ಲದೆ ಎಂದರೆ ಸ್ತ್ರೀಯಳು ಸೂತಕವಾದಲ್ಲದೆ ಪಿಂಡದ ನೆಲೆಗಾಶ್ರಯವಿಲ್ಲ ಎಂದರೆ ಪಿಂಡೋತ್ಪತ್ತಿ ಇಲ್ಲ. ಜಲ ಬಿಂದುವಿನ ವ್ಯವಹಾರ ಒಂದೇ ಜಲ ಬುದ್ಬುದಮಯ ಸ್ವರೂಪವಾದ ದೇಹದ ವ್ಯಾಪಾರವು ಒಂದೇ.

ಸ್ಪಷ್ಟಾಗಿ ಆಳವಡಿಸು ಕಂಡ್ಯಾ. ಶರಣ ಸತಿಯ ಳಿಗೆ ಇದು ಮಾಡತಕ್ಕ ಬಾಳುವೆ. ಮತ್ತು ಆಕೆಯು ವಿಸ್ತಾರವು. ಶರಣಸತಿಗೆ ಅಹಂಕಾರವು ಹೋಗಿ ನಿಜ ಭಾವವು ಉಳಿದ ಬಳಿಕ ಅದೇ ಸತ್ಯವು.

೧೩೪-೬ ಬಹಿರಂಗದಲ್ಲಿ ಸತ್ಕ್ರಿಯೆ ಎಂಬ ಲಿಂಗವನ್ನು ಹಿಡಿದರೆ ಅನುಭಾವ ಲಿಂಗಸಿದ್ಧಿ, ಎಂದರೆ ಅಂತರಂಗದಲ್ಲಿ ಜ್ಞಾನ ಸಾಧ್ಯವಾಗುವದು. ಅನುಭಾವ ಲಿಂಗವನ್ನು ಹಿಡಿದರೆ, ಮಾರ್ಗ ಕ್ರಿ ಲಿಂಗಸಿದ್ಧಿ, ಎಂದರೆ ಇಷ್ಟಲಿಂಗ ಸಿದ್ಧಿಯಾಗುವದು. ಈ ಮಾರ್ಗ ಕ್ರಿಲಿಂಗದಿಂದ ಮೀರಿದ ಕ್ರಿಲಿಂಗಸಿದ್ಧಿ ಎಂದರೆ ಅಂತರಂಗದಲ್ಲಿಯು ಪ್ರಾಣಲಿಂಗವು ಸಾಧ್ಯವು. ಈ ಮೀರಿದ ಕ್ರಿಲಿಂಗವಿಡಿದು ಕ್ರಿಯಾನಿಷ್ಪತ್ತಿಲಿಂಗವು ಸಿದ್ಧಿ, ಎಂದರೆ ಆತ್ಮಾಂಗದಲ್ಲಿ ಭಾವಲಿಂಗವು ಸಾಧ್ಯವಾಗುತ್ತಿಹುದು. ಇದು ಕಾರಣ ಸತ್ಕ್ರಿಯೆಯಿಂದ ಲಿಂಗ ಸಾಮರಸ್ಯವು ಒದಗುವದು.

೧೩೫-೧ ಮಧ್ಯಪಿಂಡಗಳೆಲ್ಲವು ಸೂಕ್ಷ್ಮದಲ್ಲಿ ಎಂದರೆ ಪ್ರಾಣಲಿಂಗ ಸಂಬಂಧ ಮಾಡಿಕೊಂಡವರೆಲ್ಲ ಪರಮಾತ್ಮನನ್ನು ಅರಿಯರು. ಪೂರ್ವ ಪಿಂಡಂಗಳೆಲ್ಲ ಎಂದರೆ ಸ್ಥೂಲ ತನುವಿನಲ್ಲಿ ಇಷ್ಟಲಿಂಗ ಸಂಬಂಧ ಮಾಡಿಕೊಂಡವರೆಲ್ಲ ಶಿವನನ್ನು ಅರಿಯರು. ಕಾಲಪಿಂಡಂಗಳೆಲ್ಲ ಎಂದರೆ ಭಾವಲಿಂಗ ಸಂಬಂಧ ಮಾಡಿಕೊಂಡ ಭಿನ್ನ ಯೋಗಾಭ್ಯಾಸಿಗಳು ಯಮನ ಬಾಧೆಗೆ ಒಳಗಾಗುವರು. ಇವರೆಲ್ಲರೂ ಸಂಶಯಪಿಂಡಗಳಿಗೆ ಒಳಗಾದವರು. ಎಲ್ಲರು ಇವುಗಳನ್ನು ಬಿಟ್ಟು ಶರಣ ಸೇವೆ ಮಾಡುವುದು.

೧೩೬-೮ ನಾನು ಶುದ್ಧನಾಗಿ ಅರ್ಪಣ ಮಾಡತಕ್ಕದ್ದು. ಆದರೆ ನನ್ನ ಮನಸ್ಸು ಶಾಂತವಿರದ್ದರಿಂದ ನಾನು ಶುದ್ಧನಲ್ಲ. ನಾನು ಎಲ್ಲ ಪದಾರ್ಥಗಳಲ್ಲಿ ಇರತಕ್ಕ ರೀತಿಯನ್ನು ಕಂಡು ಹಿಡಿದು ಆ ಪ್ರಕಾರ ವರ್ತಿಸತಕ್ಕದ್ದು. ಆದರೆ ಅರ್ಪಣಕ್ಕೆ ಮನಸ್ಸಿನ ಏಕಾಗ್ರತೆಯು ಇರುವದು ಆವಶ್ಯಕ. ಇದು ನನ್ನಲ್ಲಿ ಇಲ್ಲ. ನನ್ನಲ್ಲಿ ತಪ್ಪಿದ್ದರೂ ಕೂಡ ನಾನು ಭಕ್ತಿಪೂರ್ವಕವಾಗಿ ನಿನಗೆ ಸಮರ್ಪಿಸಿದ್ದನ್ನು ಇದ್ದ ಪರಿಯಲ್ಲಿ ಕೈಕೋ.

೧೩೬-೯ ಎಡೆಯಾಟ ಕಡ ಬಡ್ಡಿಯ ಕೊಟ್ಟು ಕೆಟ್ಟಿತ್ತುನೋಡಾ ಭಕ್ತಿ ಎಂದರೆ ಸಾಹುಕಾರನು ಸಾಲಕೊಟ್ಟು ಸಾಲಗಾರನ ಮನೆಗೆ ಎಡತಾಕಿ ಅದನ್ನು ವಸೂಲು ಮಾಡುತ್ತಾನೆ. ಈ ಪ್ರಕಾರ ನನ್ನ ಭಕ್ತಿಯ ಸ್ಥಿತಿಯು ಇರುತ್ತದೆ. ಇದು ನಿಜವಾದ ಭಕ್ತಿಯಲ್ಲ. ಇದು ಫಲಾಪೇಕ್ಷೆಯುಳ್ಳದ್ದು.

೧೩೬-೧೧ ಕಳಾ ಎಂದರೆ ಚಿತ್ಕಳೆಯು. ಬಿಂದು ಎಂದರೆ ಚಿದ್ಬಿಂದು. ವಟಾ ಎಂದರೆ ಚಿನ್ನಾದವು. ಮುಖಿ ಎಂದರೆ ಈ ಚಿನ್ನಾದ ಚಿದ್ಬಿಂದು ಚಿತ್ಕಳೆಗೆ ಮುಖ್ಯವಾಗಿರುವ ಮೂಲಜ್ಞಾನ ಚಿತ್ತು. ಎಂಬ ಹೆಂಗಸಿನ ಕಯ್ಯಲು ಎಂದರೆ ಆ ಚಿನ್ನಾದ ಚಿದ್ಬಿಂದು ಚಿತ್ಕಳೆ ಮೂಲ ಚಿತ್ತೆಂಬ ಚತುರ್ವಿಧವು ಗಟ್ಟಿಗೊಂಡು ಅಖಂಡ ಗೋಳಕಾಕಾರ ತೇಜೋ ಮೂರ್ತಿ ಯಾಗಿರುವ ಮಹಾಲಿಂಗವು ಹುಟ್ಟಲು, ಆ ಮಹಾಲಿಂಗದ ಚಿತ್‌ಶಕ್ತಿ ಎಂಬ ಹೆಂಗಸಿನ ಕಯ್ಯಲ್ಲಿ ಜಲಾಕಾರವೆಂಬ ಗಡಿಗೆ ಇದ್ದಿತ್ತು ಎಂದರೆ ದೀಕ್ಷಾಗುರು ಮೂರ್ತಿಯು ಅಂಗದ ಮೇಲೆ ಇಷ್ಟಲಿಂಗ ಸಂಬಂಧ ಮಾಡಿದನು. ಆ ಗಡಿಗೆಯಲ್ಲಿ ಚನ್ನಬಸವಣ್ಣ ನೀರತಂದ, ಎಂದರೆ ಚನ್ನ ಬಸವಣ್ಣನು ಮನದಲ್ಲಿ ಪ್ರಾಣಲಿಂಗ ಸಂಬಂಧ ಮಾಡದನು. ಮಡಿವಾ ಳಯ್ಯ ಸುಯಿಧಾನವ ತಂದ ಎಂದರೆ ಇವನು ಆತ್ಮಾಂಗದಲ್ಲಿ ಭಾವಲಿಂಗ ಸಂಬಂಧ ಮಾಡಿದನು. ಹೀಗೆ ಮೂರುಲಿಂಗ ಸಂಬಂಧ ಮಾಡಿಕೊಂಡ ಶರಣನ ಇದರೊಲೆಯನುರುಹಿಕೊಂಡಾ ಎಂದರೆ ಹೀಗೆ ಮೂರುಲಿಂಗ ಸಂಬಂಧ ಮಾಡಿಕೊಂಡ ಶರಣನಿಗೆ ಮಧ್ಯಸ್ಥವಾಗಿರುವ ಹೃದಯೇಂದ್ರಿಯ ದಲ್ಲಿ ಜ್ಞಾನವನ್ನು ಪ್ರಭಾವಿಸಿಕೊಡು ಎಂಬ ಅರ್ಥ.

೧೩೭-೧೨ ಪ್ರಪಂಚವು ದಿಟವೆಂದು ಪೂಜಿಸಿದರೆ ಆ ಪೂಜೆಯು ಅಸತ್ಯವಾಗಿ ಪ್ರಪಂಚವು ಕಳೆದು ಹೋಗುವದು. ಆದರೆ ಪ್ರಪಂಚವು ಸಟೆ ಎಂದು ಪೂಜೆಸಿದರೆ ಆ ಪೂಜೆಯ ಫಲವು ದೊರೆದು ನಾನು ಈ ಪ್ರಪಂಚವನ್ನು ಗೆದ್ದು ದೂರಾಗುವೆನು. ರತಿ ಸುಖಕ್ಕೆ ಹಚ್ಚಿದ ದೀವಿ ಗೆಯು ಪರದೆಗೆ ಹತ್ತಿ ಮನೆ ಎಲ್ಲವನ್ನು ಸುಡುವಂತೆ ನಾನು ಮಾಡುವ ಭಕ್ತಿಯು ನನ್ನನ್ನೇ ನಾಶ ಮಾಡುವಂಥಾದ್ದಾಗಿರುವದು.

೧೩೭-೨ ತನು ಮನ ಧನವೆಂಬ ಕನ್ನಡಿಯ ನೋಡಯ್ಯ. ತನು ಮನ ಧನವೆಂದು ಹೇಳಿಕೊಂಬುವ ಮೂರು ಕನ್ನಡಿಗಳಲ್ಲಿ ನಾನು ಶಿಲ್ಕಿ ಕೊಂಡಿದ್ದೇನೆ. ಆದರೆ ಇವು ನನ್ನವಲ್ಲ. ಅವು ಅಸ್ಥಿರವಾದವು. ಅವು ನನ್ನ ಸಂಬಂಧವಲ್ಲವು.

೧೩೮-೪ ಕುಲಗೆಟ್ಟರೆ ಕೆಡಬಹುದು. ಆದರೆ ಮಾಡಿದ ನಿಶ್ಚಯವು ಕೆಡಬಾರದು. ಒಂದುವೇಳೆ ನಿಶ್ಚಯನೂ ಕೆಡಬಹುದು. ಆದರೆ ಭಕ್ತಿಯ ರೀತಿಯು ಕೆಡಬಾರದು. ಭಕ್ತಿಯೂ ಕೆಡಬಹುದು. ಆದರೆ ಇಷ್ಟಲಿಂಗದ

ಚಾರಣೆಯು ಕೆಡಬಾರದು. ಇದೂ ಕೆಡಬಹುದು. ಆದರೆ ಪ್ರಾಣಲಿಂಗದ ಆಚರಣೆಯು ಕೆಡಬಾರದು. ಇದೂ ಕೆಡಬಹುದು. ಆದರೆ ಭಾವಲಿಂಗದ ಆಚರಣೆಯು ಕೆಡಬಾರದು. ಆದರೆ ಮೊದಲಿಗೆ ಮಲತ್ರಯದೊಂದಿಗೆ ಆಚರಿಸಿದ್ದೆ ಆಚರಿಸಿದ್ದು. ಮುಂದೆ ಹೀಗೆ ಆಚರಿಸೆನು.

೧೫೮-೭ ಶರಣನು ಸಂಕಟ ಪಡುತ್ತಾನೆಂದರೆ ಅವನು ಸೈರಿಸನು. ಅವನಿಗೆ ಬಾಹ್ಯಾಚಾರಗಳು ಮಹತ್ವವಾಗಿರವು. ಕೋಪದಿಂದ ವಿಭೂತಿಯ ಪೆಟ್ಟಿಗೆ, ಧೂಪದ ಗುಂಡಿಗೆ, ದೀಪಾರತಿ, ಮತ್ತು ಪ್ರಸಾದಗಳನ್ನು ಸಹ ಲೆಕ್ಕಿಸುವದಿಲ್ಲ. ಅವನು ಪಾಪಕರ್ಮ ಮಾಡುವವನು. ಎಂದರೆ ಅಂತರ್ಯಾಚಾರಗಳಾದ ಇಷ್ಟ ಪ್ರಾಣ ಭಾವಲಿಂಗಸಂಬಂಧಿಯ ಆಚರಣೆಗಳು. ಮತ್ತು ಪ್ರಸಾದ ಇವುಗಳಂತೆ ನಡೆಯುವವನಾಗಿರುವನು. ಹೊರಗಿನವನ್ನು ಲೆಕ್ಕಿಸನು.

೧೫೯-೧ ಎನಗೆ ಗುರುವಿನ ಪ್ರಸಾದ ಎಂದರೆ ನನಗೆ ನಿಃಕಲ ಬ್ರಹ್ಮಸ್ವರೂಪನಾದ ಗುರುವಿನ ಪ್ರಸಾದ. ನಿನಗೆ ಎಂದರೆ ಲಿಂಗಕ್ಕೆ ಚನ್ನನ ಪ್ರಸಾದ ಎಂದರೆ ನಿರಂಜನ ಬ್ರಹ್ಮವೇ ತಾನಾದ ಜಂಗಮದ ಪ್ರಸಾದ ಸೇವನೆಯು. ಎನಗೆಯೂ ನಿನಗೆಯೂ ಸಮಯಾಚಾರ. ಎಂದರೆ ಅಂಗಕ್ಕೂ ಲಿಂಗಕ್ಕೂ ಜಂಗಮವು ಅವಶ್ಯವು ಎಂದುದಾಗಿ ಸಮಯಾಚಾರವಿದ್ದು, ಆ ಪ್ರಕಾರ ಇರುವದೇ ನಿಜವು. ಪರಮಾತ್ಮನೇ, ನೀನು ಎನಗೆ ಚಿಕ್ಕ ತಮ್ಮ ಎಂದರೆ ನನಗೆ ಮೊದಲು ಜ್ಞಾನೋದಯವಾಗಿ ಕಡೆಯಲ್ಲಿ ನೀನು ಗುರುಮುಖದಿಂದ ಇಷ್ಟಲಿಂಗವಾಗಿ ಹುಟ್ಟಿದ್ದರಿಂದ ನೀನು ನನ್ನಕಿಂತ ಸಣ್ಣವನು.

೧೫೯-೨ ಶುದ್ಧಾತ್ಮನಾದವನು ಪರಮಾತ್ಮನಾದವನು ಎಂಬಿಬ್ಬರು ಎಂದರೆ ಸಿದ್ಧಾಂತಿಗಳೂ ವೇದಾಂತಿಗಳೂ ಯಾವಾಗಲೂ ನಿಷ್ಪತ್ತಿ ಎಂಬ ರತ್ನಕ್ಕೋಸ್ಕರ ಹೊಡೆದಾಡುತ್ತಿರುವರು. ಆದರೆ ಆ ರತ್ನವನ್ನು ಇಷ್ಟಲಿಂಗವಾಗಿ ಧರಿಸಿದರೆ ಪರಬ್ರಹ್ಮವು ದೊರಕುವದು.

೧೫೯-೩ ಆ ಇಷ್ಟಲಿಂಗದ ಆರಾಧನೆ ಎಂದರೆ ಪ್ರಸಾದರೂಪವಾಗಿ ಭಕ್ತನು ಆಚರಿಸುವದೇ ಇದೆ. ಅದು ಎಲ್ಲರಿಗೂ ವಶವಾಗದು. ಆ ಪ್ರಸಾದವು ತಾನೇ ಬಂದು ನನ್ನ ದೇಹವನ್ನು ಆವರಿಸುವದು. ಆಗ ನಾನು ಪರಮಾತ್ಮನಿಗೆ ಉಪಭೋಗ್ಯ ವಸ್ತುವಾಗುವೆನು.

೧೫೯-೪ ಜಗತ್ತಿನಲ್ಲಿ ಎಲ್ಲರೂ ಪರಮಾತ್ಮನನ್ನು ದೊರಕಿಸಿಕೊಳ್ಳಲು ಬೇಟೆಯಾಡ ಹೋಗುತ್ತಾರೆ. ಅವರಂತೆ ನೀನಾದರೂ ಹೋಗು. ಆದರೆ ನೀನು ಹೋದರೆ ಸತ್ತ ಬೇಟೆಯನ್ನು ತರಬೇಡ. ಅಂದರೆ ಜ್ಞಾನ ಹೀನವಾದ ಜೀವವನ್ನು ತರಬೇಡ. ತಂದರೆ ಅದಕ್ಕೆ ಕಷ್ಟಪಡಿಸಿಕೊಂಡು ತರಬೇಡ. ಎಂದರೆ ನಿನ್ನ ಇಂದ್ರಿಯ ಕರಣಾದಿಗಳನ್ನು ಬಂಧಿಸ ಬೇಡ. ಹೀಗೆ ಅವನ್ನು ಜೀವ ಸಹಿತ ಹಿಡಿದರೂ ಅದರ ಮಾಂಸವನ್ನು ಬಿಟ್ಟು ಬರಬೇಡ. ಅಂದರೆ ಅದರ ತಿರುಳನ್ನು ಕಂಡು ಹಿಡಿದು ಅದನ್ನು ಮಾತ್ರ ತೆಗೆದುಕೊಂಡು ಬರುವದು. ಈ ಬಗೆಯಾಗಿ ಬೇಟೆಯನ್ನು ಆಡಿ ತಂದಪ್ಪಾದರೆ ನಾನು ಅದನ್ನು ಪರಮಾತ್ಮನಿಗೆ ಅರ್ಪಿತ ಮಾಡಿ ಸಮರಸಭಾವವನ್ನು ಹೊಂದುವೆ.

೧೬೦-೧ ಮನೆಯ ಗಂಡನ ಎಂದರೆ ಇಷ್ಟಲಿಂಗದ. ಮನೆವಾರ್ತೆ ಎಂದರೆ ಜ್ಞಾನ ಕ್ರಿಯಾಚಾರವನ್ನು ಏನು ಹೇಳುವೆ? ಅಂಗವಿದ್ಯೆಯನೊಲ್ಲ=ಪ್ರಪಂಚಿನೊಡನೆ ಚರಿಸಗೊಡಲೊಲ್ಲನು. ಕಂಗಳೊಳಗಣ ಕಸವ ಕಳೆದಲ್ಲದೆ ನೋಡಲೀಯ್ಯ, ಎಂದರೆ ಸುಜ್ಞಾನ ದೃಷ್ಟಿಯಾಗಿ ಆಳವಡಿಸಿಕೊಂಡಲ್ಲದೆ ನೋಡಗೊಡನು. ನನ್ನ ಕೈ, ಕಾಲು ಮತ್ತು ಸರ್ವಾಂಗ ಅಂದರೆ ನನ್ನ ಕ್ರಿಯೆಗಳನ್ನು ಶುದ್ಧಮಾಡದ ಹೊರ್ತು ಪರಮಾತ್ಮನು ನನ್ನಲ್ಲಿ ಕೂಡಿಕೊಳ್ಳನು.

೧೬೦-೨ ಅಳಿಯನ ಕಂಡರೆ ಎಂದರೆ ಇಷ್ಟಲಿಂಗವನ್ನು ಕಂಡರೆ, ಹ್ಯಾಗೆ ಸ್ತ್ರೀಯಳು ತನ್ನ ಪತಿಯನ್ನು ಕಂಡರೆ ನಾಚುವಳೋ ಅಥವಾ ತೊಲಗುವಳೋ ಹಾಗೆ ನಿನ್ನ ಮನಸ್ಸಿನ ಸ್ಥಿತಿಯನ್ನು ಉಂಟುಮಾಡಿಕೊಳ್ಳು. ಆದರೆ ಪರಮಾತ್ಮನು ಸರ್ವವ್ಯಾಪಿಯಾದ ಕಾರಣ ಅವನನ್ನು ಬಿಟ್ಟು ತೊಲಗಿ ಹೋಗುವದು ಅಶಕ್ಯವು. ಅವನಲ್ಲಿಯೇ ನೀನು ಲಯವಾಗತಕ್ಕವಳು.

೧೬೦-೩ ಇಷ್ಟಲಿಂಗದಿಂದ ಸತ್ಯವೂ ಸಮಾಧಾನವೂ ಉಂಟಾಗುತ್ತವೆ. ಆದರೆ ಅದು ಮನಸ್ಸಿನಲ್ಲಿ ನೆಲೆಗೊಂಡು ನಿಲ್ಲುವದಿಲ್ಲ. ಅದರಿಂದ ಸರ್ವರಿಗೂ ಸಮ್ಮತವಾದ ಸುಖವೂ ಇದೆ. ಆದರೆ ಅದು ಮನಸ್ಸನ್ನು ಸೋಂಕುವದಿಲ್ಲ. ನಾನು ನೀನೇಯಾಗಿದ್ದೇನೆ ಎಂಬುದೊಂದು ಮಹತ್ತಾದ ಸ್ಥಿತಿಯೂ ಇರುತ್ತದೆ. ಆದರೆ ಅದು ಈಗ ನನ್ನ ವಿವೇಕಹೀನತೆಯಿಂದ ಕೇವಲ ಭ್ರಾಂತಿಮಯವಾಗಿರುತ್ತದೆ.

೧೪೦-೪ ಸಿನೆ ಬಂಜೆಯರಿಬ್ಬರಿಗೆ ಮಗಹುಟ್ಟಿ, ಎಂದರೆ ಶೂನ್ಯ ಲಿಂಗ ಮತ್ತು ಕ್ರಿಯಾ ರಹಿತವಾದ ಅಂಗ ಇವರಿಬ್ಬರಲ್ಲಿ ಇಷ್ಟಲಿಂಗವು ಉದ್ಭವಿಸಲು, ಅವನು ನನ್ನ ಸಾಲಕ್ಕೂ ಧನಕ್ಕೂ ಗಳಿಸಿದ ಧಾನ್ಯಕ್ಕೂ ಒಡೆಯನಾದ, ಎಂದರೆ ಅವನು ಅವುಗಳನ್ನು ಪ್ರಸಾದ ರೂಪವಾಗಿ ಮಾಡು ವನು. ಇಂಥ ಮಗನು ಇದ್ದರೆ, ಎಲೈ ಪರಮಾತ್ಮನೇ ನೀನು ಇರಿಸಿ ದಂತೆ ತಂದೆ ತಾಯಿಯಂತೆ ಅವನನ್ನು ಸಂರಕ್ಷಣೆ ಮಾಡುತ್ತ ಇರುವೆನು.

೧೪೧-೬ ಸಹಜ ಸಂಗಿಯಾದಂಥ ಶರಣನ ಸ್ಥಿತಿಯು ಹ್ಯಾಗಿರು ತ್ತದೆಂದರೆ ಅವನ ಶರೀರವೇ ಲಿಂಗಕ್ಕೆ ಸ್ವಾಭಾವಿಕವಾದ ಆಲಯವಾಗಿದ್ದು ಸಹಜ ಭಾವದಿಂದ ಪರಮ ಸುಖಿಯಾಗಿರುವನು. ರೂಪಿಸುವಲ್ಲಿ ರೂಪಾ ಧಿಕ. ಇಷ್ಟಲಿಂಗವನ್ನು ಕುರುಹಿಡುವಲ್ಲಿ ಶ್ರೇಷ್ಠವಾದ ಸ್ಥಿತಿಯುಳ್ಳವನು. ಅವನು ಅನುಮಿಷ ದೃಷ್ಟಿಯುಳ್ಳವನಾದ್ದರಿಂದ ಅವನ ನೋಟವು ಘನವಾ ದದ್ದು. ಅವನ ನಿಲವು ಎಂದರೆ ಸ್ಥಿತಿಯು ಹ್ಯಾಗಿರುವದೆಂದರೆ, ಸೂರ್ಯನು ನೀರಿನಲ್ಲಿ ಬಿಂಬಿಸಿದಲ್ಲಿ ಅದರಲ್ಲಿ ಅವನು ರತ್ನಪ್ರಾಯನಾಗಿ ಶೋಭಿಸುತ್ತಿ ದ್ದರೂ ಅದರಿಂದ ಅವನು ಹ್ಯಾಗೆ ವ್ಯತಿರಿಕ್ತವಾಗಿ ಇರುತ್ತಾನೋ, ಹಾಗೆ ಶರಣನು ಈ ಜಗತ್ತಿನಲ್ಲಿ ಇದ್ದೂ ಇಲ್ಲದಂತೆ ಇರುತ್ತಾನೆ.

೧೪೧-೭ ಮರುಳು ತಲೆ ಎಂದರೆ ಜ್ಞಾನವು. ಹುರುಳು ತಲೆ ಎಂದರೆ ಕ್ರಿಯೆಯು. ಇವೆರಡು ನೀನೇ ದೇವಾ, ಪರಶಿವಲಿಂಗವೇ ಆಗಿರುವಿ. ಹೆಂಗಸು ಗಂಡಸು ನೀನೇ ದೇವಾ. ಹೆಂಗಸು ಎಂದರೆ ಶರಣ ಸತಿಯಳು, ಗಂಡಸು ಎಂದರೆ ಇಷ್ಟಲಿಂಗವೆಂಬ ರಮಣನು, ನೀನೇ ಎಂದರೆ ಪರಶಿವಲಿಂಗವಾ ಗಿರುವವು. ಎಮ್ಮಕ್ಕ ಎಂದರೆ ಕ್ರಿಯಾಶಕ್ತಿಯು ಅಗ್ರಜಳು ಜ್ಞಾನಶಕ್ತಿಯಾ ಗಿರುವಳು. ಆಕೆಯು ಗಂಡ ಎಂದರೆ ಆ ಜ್ಞಾನಶಕ್ತಿಯ ವಲ್ಲಭನಾದ ಪ್ರಾಣ ಲಿಂಗವು ನೀನೇ ದೇವಾ. ಹೀಗೆ ಆಚರಿಸಿದಲ್ಲಿ ಜೀವದ ಭ್ರಮಣೆಯು ನಿಂತು ಶಿವಭಾವವು ನೆಲೆಗೊಳ್ಳುವದು.

೧೪೧-೧ ಜನರು ಹೊನ್ನು ಹೆಣ್ಣು ಮಣ್ಣು ಇವುಗಳ ತೃಪ್ತಿ ಯಲ್ಲಿ ಇದ್ದುಕೊಂಡು ಪಂಚಭೂತಗಳಿಗೆ ಒಳಗಾಗಿ ತಾವು ಹ್ಯಾಗೆ ಆಚ ರಿಸಬೇಕೆಂಬದನ್ನು ತಿಳಿಯದೆ ಆಚರಿಸಿ, ಅಥವಾ ಶುದ್ಧವಾಗಿ ಆಚರಿಸು ವದನ್ನೇ ಬಿಟ್ಟುಕೊಟ್ಟು ಕೆಟ್ಟುಹೋದರು. ಅವರು ಪರಮಾತ್ಮನ ಬಯ ಲಲ್ಲಿ ಹ್ಯಾಗೆ ಅರ್ಪಣಮಾಡಬೇಕೆಂಬುದನ್ನು ಅರಿಯದೆ ಕೆಟ್ಟರು.

೧೪೨-೩ ರಕ್ಕಸಿ ಎಂದರೆ ಮಾಯೆಯು ಮನೆಯಾದ ದೇಹದಲ್ಲಿ ಭೋಜನವನುಂಡು ಹ್ಯಾಗೆ ತೃಪ್ತಿಯಾಗುವದೆಂದು ಕೇಳಿದರೆ ಹೇಳುವೆನು. ಅದು ಬೆಂಕಿಯನ್ನು ರಕ್ಷಿಸಬೇಕೆಂದು ಅದನ್ನು ನೀರಿನ ಕೈಯ್ಯಲ್ಲಿ ಠೇವಾಗಿ ಇಟ್ಟಂತೆಯೇ ಸರಿ. ಅಂದರೆ ಇದು ಅಶಕ್ಯವಾದದ್ದು.

೧೪೨-೪ ಪ್ರಾಣಲಿಂಗವನ್ನು ಇಷ್ಟಲಿಂಗವಾಗಿ ಮಾಡಬಲ್ಲವನು ಶರಣನು. ಮತ್ತು ಇಷ್ಟಲಿಂಗವನ್ನು ಪ್ರಾಣಲಿಂಗವನ್ನಾಗಿ ಮಾಡುವವನೇ ಲಿಂಗದ ಜ್ಞಾನ ತಿಳಿದವನು. ಇಷ್ಟ ಪ್ರಾಣ ಒಂದಾಗುವದೇ ಪರಮಾತ್ಮನಲ್ಲಿ ಐಕ್ಯವು.

೧೪೨-೬ ಹ್ಯಾಗೆ ಮಾತನಾಡಬೇಕೆಂಬುದನ್ನು ನೀವು ತಿಳಿಯದೆ ವ್ಯರ್ಥವಾಗಿ ಸಿಟ್ಟಿಗೇಳುತ್ತೀರಿ. ಹೀಗೆ ವ್ಯರ್ಥವಾಗಿ ಮಾತಾಡುವದು ಏನು ಪ್ರಯೋಜನವು? ಬೀಜವನ್ನುಬಿತ್ತಿ ಹ್ಯಾಗೆ ಕಷ್ಟದಿಂದ ಬೆಳೆಯನ್ನು ತೆಗೆದುಕೊಳ್ಳುತ್ತಾರೋ, ಹಾಗೆ ಮಾತಿನಿಂದ ಬೆಳೆಯನ್ನು ತೆಗೆದುಕೊಳ್ಳ ತಕ್ಕದ್ದು. ಅಂದರೆ ಭವಯುಕ್ತವಾದ ಮಾತುಗಳನ್ನು ಬಿಟ್ಟು ಬಿಟ್ಟಾಗಲೇ ನೀನು ಪರಬ್ರಹ್ಮಸ್ವರೂಪನಾಗುವಿ.

೧೪೨-೮ ಒಬ್ಬನು ಹುಸಿಯ ಸಂಕೋಲೆಯಾಗಿರ್ದಲ್ಲಿ ಕಾದುಕೊಂಡಿರ್ದನೊಬ್ಬ, ಎಂದರೆ ಮಾಯೆಯಿಂದ ತುಂಬಿಕೊಂಡಂಥ ದೇಹದಿಂದ ಕೂಡಿಕೊಂಡು ಅದರಲ್ಲಿಯೇ ಕ್ರಿಯಾಕರ್ಮಗಳನ್ನು ಮಾಡುತ್ತ ಕಷ್ಟ ಪಡುತ್ತಲಿರುವನು. ಇನ್ನೊಬ್ಬನು ಆತ್ಮನೇ ಬ್ರಹ್ಮವೆಂದು ವೇದಾಂತಿಯಂತೆ ಒಂದು ಕನಸನ್ನೇ ನಿಜವೆಂದು ತಿಳಿದು ಆಚರಿಸುತ್ತಿರುವನು. ಇನ್ನೊಬ್ಬನು ಯೋಗಾಭ್ಯಾಸ ಮಾಡುತ್ತ ನಾನು ದೇವರನ್ನು ಕಂಡೆನೆಂದು ಹೇಳುತ್ತಿರುವನು. ಆದರೆ ಲಿಂಗಾಂಗಿಯು ಇವರನ್ನು ದೂರೀಕರಿಸಿ ಶಿವನಲ್ಲಿ ಹೋಗುತ್ತಿರುವಾಗ, ಬೇರೆ ಜನರೆಲ್ಲ ವ್ಯರ್ಥವಾಗಿ ಕಷ್ಟಪಡುತ್ತಲಿರುವರು.

೧೪೨-೯ ಅಂಗ ಲಿಂಗ ಸಮರತಿ, ಸಮಕಳೆ, ಸಮಸುಖವನ್ನು ಹೇಳಿಕೊಡುವಂಥ ಸ್ವಾನುಭಾವವು, ಹಿರಿದು ಅಂದರೆ ಮಹಾ ಘನಲಿಂಗವಾದದ್ದು, ಕಿರಿದು ಎಂದರೆ ಇಷ್ಟಲಿಂಗವಾದದ್ದು. ಯಾರಿಗೆ ತಿಳಿಯುವದು? ಇದು ಗುರುವಿದ್ದವರಿಗೆ ಮಾತ್ರ ತಿಳಿಯುವದು ಶಕ್ಯವು. ಉಳಿದವರಿಗೆ ಶಕ್ಯವಲ್ಲ. ಗುರುವಿಲ್ಲದಂತವರು ಕಲ್ಲುಪರೀಕ್ಷೆ ಮಾಡುವವನರಂತೆಯೇ

ಇರುತ್ತಾರೆ. ಹೀಗೆ ಪರೀಕ್ಷೆ ಮಾಡುವವರಿಗೆ ರತ್ನಪರೀಕ್ಷೆಯಾಗದು. ಗುರುವಿದ್ದವರಿಗೂ ಗುರುವಿಲ್ಲದವರಿಗೂ ಇಷ್ಟು ಭೇದವಿದೆ.

೧೪೨-೧೦ ಪ್ರಕೃತಿ ಶರೀರವನ್ನು ಬಿಟ್ಟು ಲಿಂಗಶರೀರಿಯಾಗಿರುವದೇ ಶಿಷ್ಯನು, ಗುರೂಪದೇಶ ಹೊಂದಿದ್ದರ ಚಿನ್ಹವು. ಹ್ಯಾಗೆ ಕೋಲನ್ನು ಕಿಚ್ಚಿನಲ್ಲಿಟ್ಟರು ಅದು ಸುಟ್ಟು ಬೂದಿಯಾಗುವದೋ ಹಾಗೆ ಶಿಷ್ಯನು ತನ್ನ ದುರ್ಗುಣಗಳನ್ನು ಸುಟ್ಟಿರಬೇಕು.

೧೪೩--೧ ಒಲೆ ಎಂದರೆ ತನುತ್ರಯುಗಳು, ಅಡೆ ಎಂದರೆ ಆ ತನುತ್ರಯುಗಳಿಗೆ ಮಧ್ಯಸ್ಥವಾದ ಹೃದಯ. ಇದನ್ನು ಪ್ರಭಾವಿಸಿದರೆ ಅಲ್ಲಿ ಹುಟ್ಟಿದ ಜ್ವಾಲೆಯ ಹೊಗೆಯು ಗೋಳಕನಾಥನ ಕೊರಳ ಸುತ್ತಿತ್ತು ಎಂದರೆ ಪ್ರಪಂಚವನ್ನು ಮರೆ ಮಾಡಿತ್ತು. ಮಹೀತಳನ ಎಂದರೆ ಜೀವನ ಜಡೆ ಸೀಯಿತ್ತು, ಎಂದರೆ ಅಹಂಕಾರವನ್ನು ಸುಟ್ಟಿತ್ತು. ಮರೀಚಿಕನ ಅಂದರೆ ಮನಸ್ಸಿನ ಸ್ಥಿರವೃತ್ತಿಯು ಬೆಂದಿತ್ತು. ರುದ್ರನ ಎಂದರೆ ದುಃಖಾಪಹಾರಿಯಾದ ಶರಣನ ಹಾವುಗೆ ಉರಿಯಿತ್ತು. ಎಂದರೆ ಕ್ರಿಯೆಗಳು ನಷ್ಟವಾದವು. ದೇವಗಣಂಗಳು ಅಂದರೆ ಕರಣಂಗಳು ನಿವಾಟವಾದರು, ಎಂದರೆ ಲಿಂಗ ಕರಣಂಗಳಾದವು. ಮಡದಿಯರೈವರು, ಎಂದರೆ ಪಂಚ ಶಕ್ತಿಯರು ಮುಡಿಯ ಹಿಡಿದುಕೊಂಡು ಹೋದರು, ಎಂದರೆ ಬಹಿರ್ಮುಖವಳಿದು ಅಂತರ್ಮುಖವಾದರು. ಕೂಡಲ ಸಂಗಮದೇವ ಭಸ್ಮಧಾರಿಯಾದ, ಎಂದರೆ ಪರಮಾತ್ಮನು ಚಿತ್ತನ್ನೇ ತನ್ನ ಅಂಗವನ್ನಾಗಿ ಮಾಡಿಕೊಂಡನು.

೧೪೩-೨ ಆ ಭಸ್ಮ ಎಂದರೆ ಜ್ಞಾನವು ಉದಯವಾಗಿ, ಬ್ರಹ್ಮ ತನ್ನ ಕಪಾಲವಿಡಿದನು, ಎಂದರೆ ಜ್ಞಾನ ಸ್ವರೂಪವಾದ ಲಿಂಗವನ್ನು ತನ್ನ ಕಯ್ಯಲ್ಲಿ ಇಷ್ಟಲಿಂಗವಾಗಿ ಹಿಡಿದನು. ಗಣನಾಥನ ಎಂದರೆ ಜೀವನ, ಐವತ್ತೆರಡು ಸರ ಹರಿದು ಬಿದ್ದವು, ಎಂದರೆ ಐವತ್ತೆರಡು ದಳ ಪ್ರಕೃತಿಯೊಡನೆ ಕೂಡಿ ಚರಿಸುವ ಜೀವನ ವರ್ತನೆಯು ನಷ್ಟವಾಗಿ ಹೋಗಿ ಸಜೀವ ಸ್ವರೂಪವಾಗಿ ಆ ದಳಗಳನ್ನೆಲ್ಲ ಲಿಂಗಕ್ಕೆ ಪೂಜೋಪಕರಣಗಳಾಗಿ ಅಳವಡಿಸಿಕೊಂಡಿರುವನು. ಆ ಜ್ಞಾನವು ತಾಗಿ ಸಂಸಾರವೆಂಬ ಮಾಯೆಯ ಮೂರುಮೊಲೆ ಅಂದರೆ ಹೆಣ್ಣು ಮಣ್ಣು ಹೊನ್ನು ಇವುಗಳು ನಷ್ಟವಾದವು. ನಾದಪ್ರಿಯ ನಂದಿಯನೇರಿಕೊಂಡು, ಎಂದರೆ ಪ್ರಾಣಲಿಂಗವನ್ನು ವಶಮಾಡಿಕೊಂಡು, ಅತೀತನ ಮೇಲೆ ಆನಂದ ಸಿಂಹಾಸನವನಿಕ್ಕಿ, ಎಂದರೆ ಆತ್ಮಾಂಗದ ಮೇಲೆ ಮಹಾಜ್ಞಾನನೆಂಬ ಪ್ರಣವ

ಪೀಠವನ್ನು ನಿರ್ವಿಸಿ, ದೇಶತ್ವ ಕೆಟ್ಟಿತ್ತು, ಎಂದರೆ ಬಯಲ ಸ್ಥಿತಿಯನ್ನು ಹೊಂದಿದನು.

೧೮೩-೩ ನಾನೊಮ್ಮೆ ಬೇಂಟೆಯ ಹೋದರೆ, ಎಂದರೆ ನಾನು ಲಿಂಗಸಾಧನೆಯನ್ನು ಮಾಡಲು ಉದ್ಯುಕ್ತನಾದರೆ, ಭಸಿತಕಪ್ಪಹುತಿಯು ನಿಕ್ಕಿಹೆವೆಂದು, ಎಂದರೆ ಜ್ಞಾನವನ್ನು ಒಳಕೊಳ್ಳಬೇಕೆಂದು, ಸಾಸಿರ ದೇಳುನೂರು ವರುಷ ಒಬ್ಬ ರಾಜನ ಕೊಂದೆನು, ಎಂದರೆ ಸರ್ವಾಚಾರ ಸಂಪತ್ತಿನ ಆಚರಣೆಗಳನ್ನೆಲ್ಲ ಆಚರಿಸಿ ಜೀವನ ವರ್ತನೆಯನ್ನೆಲ್ಲ ನಷ್ಟ ಮಾಡಿದೆನು. ಈ ಜೀವನಿಗೆ ಮಾಯಾಶಕ್ತಿ ಎಂಬ ಹೆಂಡತಿ ಇದ್ದು ಅವಳಿಗೆ ೫೦ ಕಣ್ಣುಗಳಿವೆ. ಎಂದರೆ ಆಕೆಯ ೫೦ ದಳ ಪ್ರಕೃತಿಗಳೊಡನೆ ಆಚರಿಸುತ್ತಿರುವಳು. ಅವಳು ತನ್ನ ಹೂ ಮುಡಿಯ ಬಿಟ್ಟು ಅತ್ತಳು, ಎಂದರೆ ಲಿಂಗಸಾಧನೆಯ ಬೇಂಟೆಯಲ್ಲಿ ಈ ಸ್ತ್ರೀಯಳು ತನ್ನ ವೈಯ್ಯಾರಗಳನ್ನು ಬಿಟ್ಟು ಶಕ್ತಿರಹಿತಳಾದಳು. ಆಗ್ಗೆ ಅವಳ ಬಾಯಲ್ಲಿ ಅಜಬಿದ್ದ, ಎಂದರೆ ಮನುಷ್ಯನ ಹುಟ್ಟಿಗೆ ಕಾರಣನಾದಂಥವುಗಳೆಲ್ಲವೂ ನಷ್ಟವಾದವು. ಕಂಗಳಲ್ಲಿ ಧೂಮಕೇತು ಬಿದ್ದ, ವಿಷ್ಣುವಿನ ಸ್ಥಿತಿ ಭೋಗಗಳೆಲ್ಲವು ನಷ್ಟವಾಗಿ ನೋಟವೆಲ್ಲ ಜ್ಞಾನ ಚಕ್ಷುವಾಯಿತ್ತು. ಈ ಸ್ಥಿತಿಯುಂಟಾಗಲು ಸಂಹಾರ ಕರ್ತೃವಾದ ರುದ್ರನ ಸ್ಥಿತಿಯು ಕೆಟ್ಟು ಹೋಯಿತು. ಹೀಗೆ ಐಕ್ಯಸ್ಥಿತಿಯನ್ನು ಹೊಂದುವನು.

೧೮೧-೮ ಲಿಂಗಾರ್ಚನೆಯನ್ನು ಕಂಡುಹಿಡಿವ ಮಹಿಮರು ಸಲುಗೆವಂತರಾಗಿ, ಎಂದರೆ ಶಿವನಿಂದ ಮನ್ನಣೆಹೊಂದಿದವರಾಗಿ ಅವನಲ್ಲಿ ಆನಂದವನ್ನು ಅನುಭವಿಸುತ್ತಲಿದ್ದಾರೆ. ಆದರೆ ನಾನು ಇದಕ್ಕೆ ಬಾಹಿರನಾಗಿದ್ದೇನೆ. ಲಿಂಗವೇ ಲಿಂಗವೇ, ಎಂದೆನ್ನುತ್ತ ದೂರವಾಗಿ ಇದ್ದೇನೆ. ನಾನು ನಿಮ್ಮ ಬರಿಯ ನಾಮವನ್ನು ಮಾತ್ರ ಉಚ್ಚರಿಸುತ್ತಲಿರುವ ಕೀಳನಾಗಿದ್ದೇನೆ.

೧೮೩-೫ ಐಕ್ಯಸ್ಥಿತಿಯಲ್ಲಿ ಶರಣನು ಕ್ರಿಯಾರಹಿತನಾಗಿದ್ದಾನೆ. ಅವನು ಆಚರಿಸುವ ಕ್ರಿಯೆಗಳಲ್ಲಿ ಸತ್ಯವೂ ಇಲ್ಲ, ಶುದ್ಧವೂ ಇಲ್ಲ. ಅದರಂತೆಯೇ ಅಸತ್ಯವೂ ಇಲ್ಲ, ಅಶುದ್ಧವೂ ಇಲ್ಲ. ಇವುಗಳಿಗೆಲ್ಲ ಮೀರಿದಂಥವನಾಗಿರುತ್ತಾನೆ.

೧೮೮-೨ ಜಲವ ನುಂಗಿತ್ತಯ್ಯ ಎನ್ನ ಕರವು. ಕರವು ಎಂದರೆ ಸತ್ಕ್ರಿಯಾಸ್ವರೂಪವಾದ ಇಷ್ಟಲಿಂಗವು. ಜಲ ಎಂದರೆ ಬುದ್ಬುದಸ್ವರೂ

ಪವಾದ ದೇಹವನ್ನು ಅವಗ್ರಹಿಸಿತ್ತು. ಶಿಖಿ ಎಂದರೆ ಆ ಇಷ್ಟಲಿಂಗದ ಚಿತ್ಕಲೆಯಾದ ಪ್ರಾಣಲಿಂಗವು, ಪತ್ರ ಎಂದರೆ ಹೃದಯ ಅದರ ಎಂಟೆಸಳ ಚಿತ್ಕಲೆಯಾದ ಪ್ರಾಣಲಿಂಗವು, ಪತ್ರ ಎಂದರೆ ಹೃದಯ ಅದರ ಎಂಟೆಸಳ ಕಮಲವನ್ನು ಒಳಕೊಂಡಿತ್ತು. ಮಂತ್ರ ಅಭಿನ್ನವಾಯಿತ್ತು ಎಂದರೆ ಮಂತ್ರ ಸ್ವರೂಪವಾದ ಪ್ರಾಣಲಿಂಗ ಅಭಿನ್ನ ಎಂದರೆ ಸಮರಸವಾಯಿತ್ತು. ಹೀಗೆ ಅಂಗ ಪ್ರಾಣಂಗಳಾಗಿರುವ ಇಷ್ಟ ಮತ್ತು ಪ್ರಾಣಲಿಂಗಗಳು ಪರ ಸ್ಪರ ಕೂಡುವ ಪೂರ್ವದಲ್ಲಿ ಪೂಜೆ ಇರುವದೇ ಹೊರತು ಮುಂದೆ ಇರು ವದಿಲ್ಲ. ಕ್ರಿಯೆಗಳು ನಷ್ಟವಾಗುವವು.

೧೪೪-೪ ಗೆರೆ ಇಲ್ಲದ ಕೋಲಿನಲ್ಲಿ ಉದ್ದರಿಯನಿಕ್ಕಿದ ಭಂಡಾದ ಹರದನಂತಾದೆನಯ್ಯ ಎಂದರೆ, ಸೇರು ಪಂಜೇರು ಇವುಗಳನ್ನು ತೋರಿ ಸಲಿಕ್ಕೆ ಗೆರೆ, ಅಂದರೆ ಅಳತೆಯನ್ನು ತೋರಿಸಲಿಕ್ಕೆ ಗುರುತುಗಳನ್ನು, ಚಿಂತ ಕೋಲಿನ ಮೇಲೆ ಬಣಜಿಗನು ಹಾಕಿಕೊಂಡು ತನ್ನ ಉದ್ದರಿಯನ್ನು ವಸೂಲ ಮಾಡಿಕೊಳ್ಳುತ್ತಾನೆ. ಆ ಪ್ರಕಾರ ಗುರುತು ಮಾಡದೆ ಹೋದರೆ ಅವನಿಗೆ ಏನೂ ತಿಳಿಯಲಾರದು. ಹಾಗೆ ಶರಣನಿಗೆ ಕ್ರಿಯಾಕರ್ಮಗಳು ಆರಂಭದಲ್ಲಿ ಅವಶ್ಯವಾಗಿದ್ದು ಮುಂದೆ ಇವೂ ನಷ್ಟವಾಗುವವು.

೧೪೬-೧ ಇಷ್ಟಲಿಂಗ ಪ್ರಾಣಲಿಂಗವೆಂಬುದು ನನಗೆ ಗೊತ್ತು ಇಲ್ಲ. ಭಾವಸ್ಥಳದ ಕ್ರಿಯೆಗಳೂ ಸಹ ನಷ್ಟವಾದವು. ಆಗ್ಗೆ ಆ ಜೀವವು ಆ ಭಾವದಲ್ಲಿಯೇ ಅಡಗುವದು. ಈ ಪ್ರಕಾರ ಪರಮಾತ್ಮನು ಮೂರೂ ದೇಹ ಗಳನ್ನು ಆವರಿಸಿಕೊಳ್ಳುವನು.

೧೪೬-೨ (ಐಕ್ಯನ ಶರಣ) ಮಹಾಲಿಂಗವಿರುವ ಕ್ಷೇತ್ರ ಸ್ಥಾನಂಗಳು ಆ ಪರಮಾತ್ಮನನ್ನು ಸೂಚಿಸುವ ಚಿನ್ಹಗಳೇ ಹೊರತು ನಿಜವಾದ ಲಿಂಗವೂ ರೂಪವೂ ಅಲ್ಲ. ಹಾಗೆಯೇ ಅವು ನಿರೂಪವೂ ಅಲ್ಲ. ಕಾಯಸಂಬಂಧಿಯೂ ಅಲ್ಲ. ಅದು ಮಹಾಘನ ಸ್ಥಿತಿಯಿಂದತ್ತತ್ತವಾಗಿರುತ್ತದೆ.

೧೪೬-೩ ಹುತ್ತ ಎಂದರೆ ದೇಹಕ್ಕೆ ಎಷ್ಟು ದ್ವಾರಗಳಿದ್ದರೂ ಜ್ಞಾನ ಸ್ವರೂಪವಾದ ಪರಬ್ರಹ್ಮವಿರುವ ಸ್ಥಾನವು ಒಂದೇ ಇದೆ. ಭಾವ ಭಾವಿಸಿ ಶಿವಭಾವ ಸ್ವರೂಪವಾದ ಶರಣನು ನೆನೆದು ಧ್ಯಾನಿಸಲು ಭ್ರಮೆಯು ದೂರಾಗಿ ಹೋಗುವದು. ಮತ್ತು ಕಡೆಗೆ ನಿರ್ಭಾವ ಸ್ಥಿತಿಯುಂಟಾಗುವದು.

೧೪೮-೪ ಪರಶಿವಲಿಂಗದ ಸಮ್ಮುಖದಲ್ಲಿ ಸಿಂಹಶೂದ್ರಿಕನ ರೂಪನ್ನು ಇಡುವರಲ್ಲದೆ ಅನ್ಯ ದೈವಗಳ ಮುಂದೆ ಇಡುವದಿಲ್ಲ. ನಂದಿಕೇಶ್ವರ ಭೃಂಗಿ

ನಾಟ್ಯವು ನಮ್ಮ ಪರಶಿವಲಿಂಗದ ಮುಂದೆ ಇರುತ್ತದೆ. ಹೊರ್ತು ಬೇರೆ ದೇವರ ಮುಂದೆ ಇರುವದಿಲ್ಲ. ಇದಕ್ಕೆ ದಿಟದೀವಿಗೆ ಎಂದರೆ ಭಾಷಾಪ ತ್ರವು ನಮ್ಮ ಪರಶಿವಲಿಂಗದ ಸಮ್ಮುಖದಲ್ಲಿಯೇ ಇದೆ. ಅನ್ಯ ದೈವವೆಂ ಬುದನ್ನು ತೂರ್ಯೆಯಿಂದ ಕಾಣಬಾರದು. ಸಕಲ ವೇದ ಶಾಸ್ತ್ರಾಗಮ ಪುರಾಣಂಗಳಲ್ಲಿ ಹುಡುಕಿದರೂ ಅರಿಯಬಾರದು. ಹಣೆಯಲ್ಲಿ ಕಣ್ಣು ಳ್ಳಂಥ ಭವರಹಿತನಾದಂಥ ದೇವರು ಒಬ್ಬನೇ ಇದ್ದಾನೆ.



# ಪರಿಶಿಷ್ಟ ೧.

## ಶ್ರೀ ಬಸವಣ್ಣನವರ ಉಲ್ಲೇಖವಿದ್ದ ಅರ್ಜುನವಾಡದ ಶಿಲಾಲೇಖವು.

(ಲೇಖಕ:— ರಾ॥ ಸಾ॥ ಪಿ. ಜಿ. ಹಳಕಟ್ಟಿ-ವಿಜಾಪುರ. ಇವರು ಶಿವಾನುಭವ ತ್ರೈಮಾಸಿಕ ಸಂಚಿಕೆ ೯ ಇದರಲ್ಲಿ ಅಚ್ಚು ಹಾಕಿದ್ದು:)

### ಮೂಲ ಶಿಲಾಲೇಖವು.

೧. ನಮಸ್ತುಂಗ ಸಿರ(=ಶಿರ)ಶ್ಚುಂಬಿ ಚಂದ್ರ ಚಾಮರ ಚಾರ-

೨. ವೇ ತ್ರೈಳೋಕ್ಯ ನಗರಾರಂಭ ಮೂಲಸ್ತಂಭಾಯ ಶಂ-

೩. ಭವೇ॥ ಶ್ರೀಯಂ ಶ್ರೀಕಲ್ಲಿನಾಥಂ ಕುಡು-

೪. ಗೆ ಭವಹರಂ ಭಕ್ತ ಬ್ರಿಂದಕೀ ಗೌರೀ ಜಾಯಾ ಕಾಯಾ-

೫. ನುಷಂಗಾಕಳಿತ ಲಳಿತತಾ ಪ್ರೋಲ್ಲಸದ್ವಾಮಭಾಗಂ ಸ್ವೀಯ ಸ್ವಾ-

೬. ಯತ್ತ ಶಕ್ತಿತ್ರಯ ಮಯಮಹಿಮಂ ದೇವ ದಾಯಾದ ಮಾ-

೭. ಯಾ ಪಾಯಾಭಿಪ್ರಾಯಲೀಲಂ ಪ್ರಣತ ಜನ ದುರಂತಾಪ ಸಂಘಟ ಶೀಲಂ ॥

೮. [ಶ್ರೀ]ಮತ್ತರದವಾಡಿ ಮಧ್ಯಗ್ರಾಮ ಬಾಗವಾಡಿ ಪುರವರಾಧೀಸ್ವರ ಮಾದಿರಾಜನ ತನೂ-

೯. ಜಂ ಬಸವರಾಜನ ಮಹಿಮೆಯೆಂತೆಂವಡೆ॥ ಮಂಗಳಕೀರ್ತಿ ಪುರಾತನ ಜಂಗಮ-ಲಿಂ-

೧೦. ಗೈಕಭಕ್ತಿ ನಿರ್ಭ್ಬರಲೀಲಾ ಸಂಗಂ ಸಂಗನಬಸವಂ ಸಂಗತಿಯಂ ಮಾಳ್ಕೆ ಭಕ್ತಿಯೊಳ-

೧೧. ಗನವರತಂ॥ ಯಾದವ ಭೂಮಿಪಾಳರಿಳೆಯಂ ಚತುರರ್ಧ್ಧಿ ಪರೀ-

೧೨. ತೆಯಂ ನಿಸರ್ಗೋರ್ಜ್ಜಿದಯರಾಳ್ವ ರನ್ತವರೊಳಸ್ವ ಚಮೂಚಯ ವಾರ್ಧ್ಧಿ ಸಿಂಹಣ-

೧೩. ಕ್ಷ್ಮಿತ್ರದಯಿತಂ ತಪಗ್ಗ್ರತನಯು ಪ್ರಭವಂ ನ್ರಿಪ ಕಂಸರ ಂಸಮು ಸ್ತ್ರೋಪಧಿ-

೧೪. ವೇಳೆಯಿಂ ಪೊರಗೆ ಬೆಳ್ಗೊಡೆಯೊಳ್ನೆಳಲಂ ನಿಮಿರ್ಚ್ಚಿಪಂ॥ ಸಲೆ ಭೂದೇವ-

೧೫. ಕ್ಕರ್ಗ್ಗಿತ್ತಲಸದೆ ಗೋ-ಭೂಮಿ-ಹೇಮ-ವಸ್ತ್ರಾದಿಗಳಂ ಮಳೆವರಸು ಗಳೋ

೧೬. ಳ್ಕೊಂಬಂ ಬಲವಂತಂ ಕಂಸರಂ ಪ್ರತಾಪಸಹಾಯಂ॥ ಸ್ವಸ್ತಿ ಸಮಸ್ತ-

೧೭. ಭುವನಾಶ್ರಯ ಶ್ರೀ ಪ್ರಿಥ್ವೀ ವಲ್ಲಭ ಮಹಾರಾಜಾಧಿ ರಾಜ ಪರಮೇ-

೧೮. ಶ್ವರ ಪರಮಭಟ್ಟಾರಕ ದ್ವಾರಾವತೀ ಪುರವರಾಧೀಶ್ವರಯಾ-

೧೯. ದವ-ಕುಳ-ಕಮಳ-ಕಳಿಕಾ-ವಿಕಾಸ-ಭಾಸ್ಕರಯರಿರಾಯ

೨೦. ಜಗಜ್ಝಂಪ ಮಾಳವರಾಯ- ಮದನ- ತ್ರಿನೇತ್ರ ಗೂರ್ಜ್ಜರರಾಯ- ಭಯಂಕರ-

೨೧. ತೆಲುಂಗರಾಯ- ಸ್ಥಾಪನಾಚಾರ್ಯ್ಯ ಇತ್ಯಾದಿ ನಾಮಾವಳೀ ಸಮ ಳಂಕ್ರಿತ

೨೨. ಶ್ರೀಮತ್ಪ್ರೌಢ ಪ್ರತಾಪ ಚಕ್ರವರ್ತ್ತಿ ಶ್ರೀ ಕಂಸರ ದೇವಂ ದೇವಗಿ-

೨೩. ರಿಯ ನೆಲೆವೀಡಿನೊಳು ಸುಖಸಂಕಥಾ ವಿನೋದದಿನನವರತಂ ರಾ-

೨೪. ಜ್ಯಂ ಗೆಯುತ್ತುಮಿರೆ ತತ್ಪಾದ ಪದ್ಮೋಪಜೀವಿ॥ ಚಿಕ್ಕನ ಚಿಕ್ಕ ಮಗಂ ವಿಭವಕ್ಕೆ-

೨೫. ಕುಬೇರಂಗೆ ಸೆಣಸುವಂ ರಾಯರುಮಂ ಮಿಕ್ಕಂ ಬೀಚುಗಿಯಾ-

೨೬. ದಾರ್ಯ್ಯಕ್ಕಾರಿಂ ಪಿರಿಯನಾತನಂಣಂ ಮಲ್ಲಂ॥ ಆತನ ತನೂಭವಂ॥

೨೭. ಚಾವುಂಡಂ ಪಾರ್ವ್ವತೀ ವಲ್ಲಭ ಚರಣ ಸರೋಜದ್ವಯಾಮೋದ ಭ್ರಿಂಗಂ ಚಾವುಂ-

೨೮. ಡಂ ತ್ಯಾಗ-ಭೋಗಾನುಭವ ಭವಸುಖಶ್ರೀ-ವಧೂನ್ರಿತ್ಯ ರಂಗಂ ಚಾವುಂಡಂ ಸಾಮ-

೨೯. ಭೇದ ಪ್ರಭ್ರುತಿ ಸಕಳ ಮಂತ್ರಾಂಗ ವಿದ್ಯಾಸಮುದ್ರಂ ಚಾವುಂಡಂ ವೀರ-ವೈರಿ-ಪ್ರ-

೩೦. ಕರ ಸಮರ ಸಂಘಟ್ಟ ಕಾಳಾಗ್ನಿ ರುದ್ರಂ॥ ಯೆನೆ ನೆಗಳ್ದಾ
ಚಾವುಂಡನ ಮನವನ್ನಂ-

೩೧. ನಾಗರಾಜನಕ್ಷಿಳ ನಿಯೋಗಙಾ ನೆನಿಪ್ಪ ದಿವಾಕರ ದೇವನ ಪುತ್ರಂ
ವಾಣಸಾಸ್ವ-

೩೨. ಯಾಂಬರಮಿತ್ರಂ॥ ತ್ಯಾಗಗುಣಕ್ಕೆ ತಾಯ್ಪನೆ ಸಮಸ್ತ ನ್ರಿಪಾಳ
ನಿಯೋಗ ವ-

೩೩. ರ್ತ್ತನಾ ಶ್ರೀಗೆ ನಿವಾಸಮಿಷ್ಟರ ವಿಶಿಷ್ಟರ ತೋಷಣ ಪೋಷಣಂಗ
ಳೊಳ್ಳಾಗ-

೩೪. ರಮೆಂದು ಬಂಣ್ಣಿಸುವುದೀ ಧರೆ ಪಂಡಿತಪಾರಿಜಾತನಂ ನಾಗನನಾ
ಜನಾರ್ದನವ ಭ-

೩೫. ಕ್ತಿ ಭರ ಪ್ರಭವಾನುರಾಗನಂ॥ ಸಂಗನಬಸವನ ಅಪ್ರ...ಗ್ರೈಕಂ-

೩೬. ದೇವರಾಜ ಮುನಿಪನ ತನಯುಂ ಜಂಗಮ ಪರುಸಂ...ರ

೩೭. ಸಂಗಂ ಪ್ರಿಯ ಸುತನೆನಿಪ್ಪ ಕಲಿದೇವರಸಂ॥ ಕಲಿದೇವಮುನಿ-

೩೮. ಪನಾತ್ಮಜ ಸಲೆ ಮೂಜಗದೊಳಗೆ ಮೆರೆ*ವ ಮಾನವ ದೇವಂ
ಗೆಲಿದಂ ಅಸನ

೩೯. ಬೆಸನವ[೦] ಛಲರಧಿಕಂ ಹಾಲಬಸವಿದೇವ ಮುನೀಸಂ ಸ್ವಸ್ತಿಸ
ಮಸ್ತ-

೪೦. ಭುವನಾಶ್ರೆಯಂ ಮಾಹಾಮಹೇಸ್ವರಂ ಕವಿಳಾಸಪುರವ-

೪೧. ರಾಧೀಸ್ವರರುಂ ಸುವಂರ್ಣ್ನ ವ್ರಿಷಭ ಧ್ವಜಂ ಶೇಸಿಮ್ಮಿ ಪುರಾಥ ಪಾದಾ
ರ್ಚ್ಚನಕ-

೪೨. ರುಂ ಮಹಾಲಿಂಗ-ಜಂಗಮ ಪ್ರಸಾದನಿಯತರುಂ ಸಮ-

೪೩. ಯಭಕ್ತಿ ಸಂಪನ್ನ ಶ್ರೀ ಬಸವರಾಜನಂನ್ವಯರುಮಪ್ಪ ತಪಚಕ್ರ-

೪೪. [ವ] ರ್ತ್ತಿ ವೀರಪ್ರಿತಿ ಹಾಲಬಸವಿದೇವಂಗೆ ಆಮಹಾಪ್ರಧಾನಂ
ರ*-

೪೫. ಟ್ಟ ರಾಜ್ಯ ಪ್ರತಿಷ್ಠಾಚಾರ್ಯ್ಯನುಮಪ್ಪ ನಾಗರಸರು ಸಕ ವರುಷಂ
ಸಾಸಿರ-

೪೬. ದ ನೂರ*ಯೆಂಭತ್ತ ಯೆರಡನೆಯ ಸಿಧ್ಧಾರ್ಥಿ ಸಂವಛರದ ಚೈ-

೪೭. ತ್ರ ಬಹುಳ ಅಮಾಸೆ ಸೋಮವಾರ ಸೂರ್ಯ್ಯ ಗ್ರಹಣದಲ್ಲಿ ಪುಲಿಗಿ-
ರಿ*ಯ ಸೋಮನಾಥದೇವರ ಸಂನಿಧಿಯಲ್ಲಿ ಆ ಚಾಡಿಸೆಟ್ಟಿ ಯರ್

೪೯. ತೀರ್ತ್ಥ ವಿಶೇಸಮಂ ಬೆಸಗೊಳಲು ನೂಲೆನಾಡೊಳಗಿನ ಕವಿಳಾಲ
ಸತೀ [ರ್ತ್ಥಂ]

೫೦. ನಾಲ್ಕುಯುಗದ ಪುರಾಣೋಕ್ತದಿಂ ಬಂದ ಕ್ಷೆತ್ರ ವದೆಂತೆಂದಡೆ ಕ್ರಿತ-

೫೧. ದಲ್ಲಿ ಕವಿಳಾಸ ಮುನಿ ಕವಿಳಾಸನಾಥ [;] ತ್ರತೆಯಲ್ಲಿ ಅಂಕ
ರಾಜಮುನಿ ಅಂಕ

೫೨. ನಾಥ [ ; ] ದ್ವಾಪರದಲ್ಲಿ ಮಹಾರಾಜ ಮುನಿ ಮಹಾಲಿಂಗದೇವ
[ ; ] ಕಲಿಯುಗದಲ್ಲಿ

೫೩. ಕಲಿರಾಜಮುನಿ ಕಲಿದೇವನಾಮ [ ॥ ] ಇ ಮುನಿಗಳು ಮುಕ್ಷ
ಸಮುಸ್ತ ಗಣೇಸ್ವ—

೫೪. [ರ] ರು ಆರಾಧಿಸಿ ಸಾಲೋಕ್ಯ ಸಾಮಿೂಪ್ಯ ಸಾಯುಜ್ಜವಂ ಪಡ-

೫೫. ಪರು ಆ ದೇವರಿಗೆ ಅಂಕನಾಥವೆಸರಿಂ ಅಂಕವಲ ತಳ ವಿರ್ತ್ತಿ
ಕೊ-

೫೬. ತ್ತಸಿಕುರು * ವನಿಗೆ (=?) ಇ ಹಳ್ಳಿ ಮೂಂಧಾತ ಚಕ್ರವರ್ತ್ತಿ
ಬಿಟ್ಟ ಧಂಮ್ಮ [ ॥ ] ಆ-

೫೭. ತೀರ್ಥಕ್ಕದು ಸಾಸನಸ್ಥವೆಂಬುದಂ ಚವುಡಿಸೆಟ್ಟಿಯುರು ಕೇಳಿ ಮ[ನಾ]
ನಾಗ-

೫೮. ರಸರೂ ತಾವು ಏಕಸ್ಥವಾಗಿ ಕವಿಳಾಸ ಪುರದೊಳಗೆ ಸ್ವಯಂಬು
ಮ-

೫೯. ಲ್ಲಿಕಾರ್ಜುನ ಸಂಗಮೇಸ್ವರ ನಾಗೇಸ್ವರ ಯಿೂ ಮೂರು* ಲಿಂಗ
ಕಂ ಅಂಗ-

೬೦. ಭೋಗ ರಂಗಭೋಗ ಜೀರ್ಣ್ನೋ ಧಾರಕಂ ಪಾರಣೆಯ ಜಂಗಮಾ-

೬೧. ರಾಧನೆಗಂ ಕೊತ್ತಸೆಕುರು * ವನಿಗೆ ತಳವ್ರಿತ್ತಿ ಅಂಕವಲ
ಕೂಂ....

೬೨. ನಾಡೊಳು ಸಲುವಂತೆ ಹೆಜ್ಜುಗ್ಗಿಯ ವೊಭತ್ತು . . ಸುಂಕ

೬೩. ಸೂರೆ*ತಿನ ಪರಿಹಾರ ಯಿಂತಿನಿತುಮಂ ಸರ್ವ್ವ ಬಾಧೆ

೬೪. ಸರ್ವ್ವನಮುಸ್ಯವಂ ಮಾಡಿ ಚವುಡಿಸೆಟ್ಟಿಯುರು ನಾಗರಸರು

೬೫. ಯತಿರಾಯ ಹಾಲಬಸವಿದೇವಂಗೆ ಪೂರ್ವ್ವದತ್ತವೆಂದು

೧೬. ಧಾರಾಪೂರ್ವ್ವಕಂ ಮಾಡಿಕೊಟ್ಟರು. [ ॥ ] ಆ ಚವುಡಿಸೆಟ್ಟಿಯರ ನಿ-

೧೭. ಯಾಮದಿಂ ನಾಗರಸರು ಪುರದಿಂ ಪಡುವಲು ತೊರೆ*ಯ ಕೂ-

೧೮. ಡಿವಹಳ್ಳ ನೀರುವರಿಯೆ ಮೇರೆಯಾಗಿ ಮೇಗೆ ಕಲಗಡಿಗ ಗೆರೆ*-

೧೯.... ಸವ ಗೋಡಿ ಬಡಗಲು ಮೊಸರಗುತ್ತಿ ಊರಾರ (=?) ವಿಡಿದು ಮೂಡಲು

೨೦. ...ಗಲ್ಲಕಣಿ .. ಗೋಡಿಯ ಬಂದ ಹಳ್ಳ ನೀರುವರಿಏ ತೆಂಕ—

೨೧. ಲು ತೊರೆ*ಯ ಕೂಡಲು ಯಿೂ ಚತುಸ್ಸೀಮಾಭ್ಯಂತರ ಕವಿಳಾಸಪು-

೨೨. ರದಲ್ಲಿ ಸುಂಕ .........................................ನಿ-

೨೩. ಧಿ ನಿಕ್ಷೇಪ ಅಂಕೆ ಟಂಕೆ... ಗೋಸನೆ ಮುದ್ರೆ ನಾಗೇಸ್ವರ ಮಮಲ್ಲೇಸ್ವರ

೨೪. ಕೆ ಕುರು * ವನಿಗೆ [ । ] ಸಂಗಮೇಶ್ವರಕೆ ಪಾರಣೆಯ ಜಂಗಮಾರಾಧ-

೨೫. ನೆಗೆ ಕೊತ್ತಸಿಗೆ (=?)ಇ ಧಂಮ್ರ್ಮಕೆಯಿದು ವಿವರವೆಂದು ನಾಗರಸರು, ಕೊಟ

೨೬. ಸಾಸನ ನಾಲ್ಕು... ಪಟ್ಟಣಂಗಳು ನೂಲೆನಾಡೊಳಗೆ ಸಂತೆಗಳ

೨೭. ಆಯದಾಯ ಇ ಪರಿ... ಮೆಯಿದೆರೆ* ಸುಂಕ ಹದಿನೆಂ

೨೮. ಟ್ಟು ಸಮಯಮೆಲ್ಲರು * ಮತ ಮೂವರು ಬಣಜು ಭಕುತಿ ಭೇದವಿ-

೨೯. . . [ = ?] ಕವಿಳಾಸಪುರವೆ ಸಾಸನ ದವನೆ ಬಸವರಾಜನೆಸಾಸನಿಕನೆಂ-

೩೦. ದುಮುಭಯ ನಾನಾದೇಸಿ ಮುಂಮುರಿ ದಂಡಂಗಳು ಕಾವ ಸಾಸನ [ ॥ ]

## ಶಿಲಾಶಾಸನದ ಸ್ಥೂಲಭಾಷಾಂತರ

ಕಿರಣಸಮೂಹದಿಂದ ರಾಜಿಸುವ ಚಂದ್ರನಿಂದ ಒಪ್ಪುವ ಮಸ್ತಕವುಳ್ಳವನೂ ಮೂಲೋಕವೆಂಬ ನಗರಾರಂಭಕ್ಕೆ ಮೂಲಸ್ತಂಭನಂತೆಯೂ ಇರುವ ಶಂಭುವಿಗೆ ನಮಸ್ಕಾರವು-

---

* ಹೀಗೆ ನಕ್ಷತ್ರ ಚಿನ್ಹವಿರುವರ ಕಾರವು ಶಕಟರೇಫವೆಂಬುದಾಗಿ ತಿಳಿಯಬೇಕು.

ಪಾರ್ವತಿಗೆ ಅರ್ಧಮಯ್ಯನ್ನಿತ್ತು ಪ್ರಕಾಶಿಸುವವನೂ ಶಕ್ತಿತ್ರಯ ಗಳನ್ನು ತನ್ನಲ್ಲುಂಟುಮಾಡಿಕೊಂಡು ಮಹಾಮಹಿಮೆಯಿಂದಿರುವವನೂ ಶರಣಾಗತ ಜನರ ದುಃಖವನ್ನು ದೂರಮಾಡುವ ಶೀಲವುಳ್ಳವನೂ ಆದ ಕಲ್ಲಿನಾಥನು ಭಕ್ತಸಮುದಾಯಕ್ಕೆ ಐಶ್ವರ್ಯವನ್ನು ಕೊಡಲಿ.

ತದ್ದೇವಾಡಿಯ ಮಧ್ಯಗ್ರಾಮವಾದ ಬಾಗವಾಡಿ ಎಂಬ ಶ್ರೇಷ್ಠಗ್ರಾಮದ ಒಡೆಯನಾದ ಮಾದಿರಾಜನ ಮಗನಾದ ಬಸವರಾಜನ ಮಹಿಮೆಯು ಎಂಥದೆಂದರೆ:—

ಮಂಗಳವಾದ ಕೀರ್ತಿಯುಳ್ಳವನಾದಂಥ ಪುರಾತನ ಜಂಗಮ ಮತ್ತು ಲಿಂಗ ಇವುಗಳಲ್ಲಿ ನಿರ್ಭರವಾದ ಏಕಭಕ್ತಿಯಿಂದ ಕೂಡಿದಂಥ ಸಂಗನ ಬಸವನು ನಮ್ಮಲ್ಲಿ ಯಾವಾಗಲೂ ಭಕ್ತಿಯ ಸಂಬಂಧವನ್ನುಂಟುಮಾಡಲಿ.

ಯಾದವರಾಜರು ಶ್ರೇಷ್ಠವಂಶದಲ್ಲಿ ಹುಟ್ಟಿದವರಾಗಿ ನಾಲ್ಕು ಸಮುದ್ರಗಳಿಂದ ಬಳಿಸಲ್ಪಟ್ಟಂಥ ಭೂಮಿಯನ್ನು ಆಳುತ್ತಲಿರುವರು. ಹೀಗಿರಲು ಅವರಲ್ಲಿ ಅಶ್ವಸೈನ್ಯದ ಒಡೆಯನಾದ ದಯಾಳುವಾದ ಸಿಂಘಣನೆಂಬ ಅರಸನು ಆಳಿದನು. ಆ ಮೇಲೆ ಅವನ ಹಿರಿಯ ಮಗನೂ ಬಲಶಾಲಿಯೂ ಆದ ಕನ್ನರರಾಜನು ಎಲ್ಲ ಸಮುದ್ರಗಳಿಂದ ಸುತ್ತಲ್ಪಟ್ಟ ಭೂಮಿಗೆ ತನ್ನ ಶ್ರೇಷ್ಠವಾದ ಛತ್ರದಿಂದ ಆಶ್ರಯವನ್ನು ಮಾಡಿಕೊಟ್ಟನು.

ಶೌರ್ಯವೇ ಸಹಾಯವಾಗಿರುವಂಥ ಕನ್ನರನು ಬ್ರಾಹ್ಮಣರಿಗೆ ಗೋಭೂಮಿ, ದ್ರವ್ಯ ವಸ್ತ್ರಾದಿಗಳನ್ನು ಆಲಸ್ಯಪಡದೆ ಕೊಟ್ಟು ಅವುಗಳನ್ನು ಅವನು ತನ್ನ ಬಾಹುಬಲದಿಂದ ತನ್ನನ್ನು ಇದಿರಿಸುವ ರಾಜರಿಂದ ಮರಳಿ ತಿರುಗಿ ತೆಗೆದುಕೊಳ್ಳುವನು.

ಸ್ವಸ್ತಿಸಮಸ್ತ ಭುವನಾಶ್ರಯ ಶ್ರೀ ಪೃಥ್ವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಪರಮಭಟ್ಟಾರಕ ದ್ವಾರಾವತೀ ಪುರವರಾಧೀಶ್ವರ ಯಾದವ ಕುಳಕಮಳ ಕಳಿಕಾವಿಕಾಸ ಭಾಸ್ಕರ ಯರಿರಾಯ ಜಗಜ್ಝಂಪ, ಮಾಳವರಾಯಮರ್ದನ, ತ್ರನೇತ್ರ, ಗೂರ್ಜರ ರಾಯಭಯಂಕರ, ತೆಲುಗರಾಯ ಸ್ಥಾಪನಾಚಾರ್ಯ ಎಂಬಿವೇ ಮೊದಲಾದ ಬಿರುದುಗಳಿಂದ ಅಲಂಕೃತರಾದಂಥ ಶ್ರೀಮತ್ ಪ್ರೌಢ ಪ್ರತಾಪಚಕ್ರವರ್ತಿಗಳಾದ ಕನ್ನರದೇವನು ದೇವಗಿರಿಯ ರಾಜಧಾನಿಯಲ್ಲಿ ಸುಖಕರವಾದ ಮಾತಿನ ವಿನೋದದಿಂದ ಬಹುಕಾಲ ರಾಜ್ಯವಾಳುತ್ತಿರಲು,

ಆತನ ಪಾದ ಪದ್ಮೋಪಜೀವಿಯಾದ ಚಿಕ್ಕನೂ, ಸಂಪತ್ತಿನಲ್ಲಿ ಕುಬೇರನನ್ನೂ ಎಮರಿಸುವಂಥ ರಾಜರಿಗೆ ಮಿಗಿಲಾಗಿ ನಿಂತಂಥ ಆತನ ಕಿರಿಯ ಮಗನಾದ ಬೀಚಿಗಿಯೂ ಔದಾರ್ಯದಲ್ಲಿ ಎಲ್ಲರಿಗೂ ಶ್ರೇಷ್ಠನಾದಂಥ ಅವನ ಅಣ್ಣನಾದ ಮಲ್ಲನೂ ಅವನ ಮಗನಾದ ಚಾವುಂಡನೂ ಇದ್ದರು.

ಈ ಚಾವುಂಡನು ಪಾರ್ವತೀವಲ್ಲಭನಾದ ಶಿವನ ಪಾದಕಮಲದಲ್ಲಿ ಭೃಂಗನೆಂತಲೂ, ತ್ಯಾಗ ಭೋಗಗಳಲ್ಲಿ ತತ್ಪರನಾದವನೆಂತಲೂ, ಭವಸುಖವೆಂಬ ಸ್ತ್ರೀಯಳ ನಾಟ್ಯಕ್ಕೆ ರಂಗಭೂಮಿ ಎಂತಲೂ ಸಾಮಭೇದ ಮೊದಲಾದವುಗಳಿಗೆ ಮತ್ತು ಮಂತ್ರಾಂಗ ವಿದ್ಯೆಗಳಿಗೆ ಸಮುದ್ರನೆಂತಲೂ ವೀರವೈರಿಗಳ ಕಾಳಗದಲ್ಲಿ ಕಾಲರುದ್ರನೆಂತಲೂ ಹೆಸರುಪಡೆದವನಾಗಿದ್ದನು.

ಆ ಚಾವುಂಡನ ಪ್ರೀತಿಗೆ ಪಾತ್ರನಾದ ನಾಗರಾಜನು ಯಾವತ್ತು ನಿಯೋಗಗಳನ್ನು ಬಲ್ಲವನಾದ ದೀವಾಕರನ ಪುತ್ರನಾಗಿ ವಾಣಸವಂಶವೆಂಬ ಆಕಾಶಕ್ಕೆ ಸೂರ್ಯನಂತೆ ಇದ್ದನು.

ಪೃಥ್ವಿಯ ಜನರೆಲ್ಲರು ನಾಗನೆಂದರೆ ತ್ಯಾಗಗುಣಕ್ಕೆ ತವರುಮನೆ ಎಂತಲೂ ಎಲ್ಲ ಅರಸರ ನಿಯೋಗವನ್ನು ಪಾಲಿಸುವವನೆಂತಲೂ ಲಕ್ಷ್ಮಿಗೆ ನಿವಾಸಸ್ಥಾನವೆಂತಲೂ ಮಿತ್ರರನ್ನೂ ಪಂಡಿತರನ್ನೂ ಸಂತೋಷಪಡಿಸುವವನೆಂತಲೂ ಪೋಷಿಸುವವನೆಂತಲೂ ಒಳ್ಳೇ ಜನರಿಗೆ ಆಶ್ರಯದಾತನೆಂತಲೂ ಶ್ರೇಷ್ಠವಾದ ಪಂಡಿತನೆಂತಲೂ ವಿಷ್ಣುವಿನ ಬಗ್ಗೆ ದಟ್ಟವಾದ ಭಕ್ತಿ ಪ್ರೀತಿಯುಳ್ಳವನೆಂತಲೂ ಅವನನ್ನು ಹೊಗಳುವರು.

ಸಂಗನಬಸವ ಹಿರಿಯ........................,ದೇವರಾಜ ಮುನಿಪನ ಮಗನೂ ಜಂಗಮ ಪರುಷ.....................ಅವನ ಪ್ರೀತಿಯ ಮಗನಾದ ಕಲಿದೇವರಸನೂ ಇದ್ದರು. ಈ ಕಲಿದೇವ ಮುನಿಪನ ಮಗನಾದ ಹಾಲಬಸವಿದೇವ ಮುನೀಶ್ವರನೆಂಬವನು ಮಾನವ ಶ್ರೇಷ್ಠನೆಂತಲೂ, ಅಶನವ್ಯಸನಾದಿಗಳನ್ನು ಗೆದ್ದಂಥವನೆಂತಲೂ, ಛಲವಂತರಲ್ಲಿ ಅಧಿಕನೆಂತಲೂ ಮೂಜಗದಲ್ಲಿ ಹೆಸರುಗೊಂಡಿದ್ದಾನೆ.

ಸ್ವಸ್ತಿ ಸಮಸ್ತ ಭುವನಕ್ಕೆ ಆಶ್ರಯರಾದಂಥ ಮಹಾಮಾಹೇಶ್ವರರಾದಂಥ, ಕವಿಳಾಸಪುರವರಾಧೀಶ್ವರರಾದಂಥ ಬಂಗಾರದ ವೃಷಭಧ್ವಜ

ವುಳ್ಳವರಾದಂಥ ೬೩ ಪುರಾತನರ ಪಾದಾರ್ಚಕರಾದಂಥ ಮಹಾಲಿಂಗ ಜಂಗಮ ಪ್ರಸಾದದಲ್ಲಿ ಮಗ್ನರಾದಂಥ ತಮ್ಮ ಧರ್ಮದಲ್ಲಿ ಭಕ್ತಿಸಂಪನ್ನರಾದಂಥ ಶ್ರೀ ಬಸವರಾಜನ ವಂಶದವರಾದಂಥ, ತಪಚಕ್ರವರ್ತಿಗಳಾದಂಥ ವೀರ ವ್ರತಿಗಳಾದಂಥ ಹಾಲಬಸವಿ ದೇವರಿಗೆ ಆ ಮಹಾ ಪ್ರಧಾನನೂ ರಟ್ಟರಾಜ್ಯಪ್ರತಿಷ್ಠಾಪನಾಚಾರ್ಯನೂ ಆದ ನಾಗರಸನು ಶಕ ವರ್ಷ ೧೧೪೧ನೆಯ ಸಿದ್ಧಾರ್ಥಿ ಸಂವತ್ಸರದ ಚೈತ್ರ ಬಹುಳ ಅಮಾವಾಸ್ಯ ಸೋಮವಾರ ಸೂರ್ಯಗ್ರಹಣದಲ್ಲಿ ಪುಲಿಗೆರೆಯ ಸೋಮನಾಥದೇವರ ಸನ್ನಿಧಿಯಲ್ಲಿ ಆ ಚೌಡಿಸೆಟ್ಟಿಯರು ತೀರ್ಥದ ಮಹತ್ವವನ್ನು ಕೇಳಲು ನೂಲೆ ನಾಡಿನಲ್ಲಿ ಕವಿಳಾಲಸ ತೀರ್ಥವು ನಾಲ್ಕೂ ಯುಗದಲ್ಲಿ ಪುರಾಣೋಕ್ತವಾಗಿ ಬಂದಂಥ ಕ್ಷೇತ್ರವಿರುತ್ತದೆ. ಅದು ಹ್ಯಾಗೆಂದರೆ-- ಕೃತಯುಗದಲ್ಲಿ ಕವಿಳಾಸಮುನಿ ಕವಿಳಾಸನಾಥನೆಂತಲೂ, ತ್ರೇತಾಯುಗದಲ್ಲಿ ಅಂಕರಾಜಮುನಿ ಅಂಕನಾಥನೆಂತಲೂ, ದ್ವಾಪರದಲ್ಲಿ ಮಹಾರಾಜಮುನಿ ಮಹಾಲಿಂಗದೇವನೆಂತಲೂ, ಕಲಿಯುಗದಲ್ಲಿ ಕಲಿರಾಜಮುನಿ ಕಲಿದೇವನೆಂತಲೂ ಹೀಗೆ ಈ ಮುನಿಗಳು ಮುಖ್ಯಸಮಸ್ತ ಗಣೇಶ್ವರರು ಇಲ್ಲಿ ಆರಾಧಿಸಿ ಸಾಲೋಕ್ಯ, ಸಾಮೀಪ್ಯ, ಸಾಯುಜ್ಯ, ಪದವಿಗಳನ್ನು ಹೊಂದಿದರು.

ಆ ದೇವರಿಗೆ ಅಂಕನಾಥ ಹೆಸರಿನಿಂದ ಅಂಕವಲ, ತಳವೃತ್ತಿ, ಕೊತ್ತಸಿ, ಕುರುವಸಿಗೆ ಇವುಗಳನ್ನು ಮಾಂಧಾತಚಕ್ರವರ್ತಿಯು ಬಿಟ್ಟು ಕೊಟ್ಟ ಧರ್ಮ.

ಇದು ಈ ತೀರ್ಥಕ್ಕೆ ಶಾಸನವಾಗಿ ಕೊಟ್ಟಿತೆಂಬುದನ್ನು ಚೌಡಿಸೆಟ್ಟಿಯರು ಕೇಳಿ, ನಾಗರಸರೂ ತಾವೂ ಕೂಡಿ ಕವಿಳಾಸಪುರದೊಳಗೆ ಸ್ವಯಂಭು ಮಲ್ಲಿಕಾರ್ಜುನ, ಸಂಗಮೇಶ್ವರ, ಮತ್ತು ನಾಗೇಶ್ವರ ಹೀಗೆ ಮೂರುಲಿಂಗಗಳ ಅಂಗಭೋಗ, ರಂಗಭೋಗ, ಜೀರ್ಣೋದ್ಧಾರ ಇವುಗಳಿಗೋಸ್ಕರವೂ ಪಾರಣೆಯ ಜಂಗಮಾರಾಧನೆಗೋಸ್ಕರವೂ ಕೊತ್ತಸೆ, ಕುರುವಸಿಗೆ, ತಳವೃತ್ತಿ ಅಂಕವಲಿ ×× ನಾಡಿನಿಂದ ಸಲುವಂತೆ ಹೆಜ್ಜುಗಿ ...... ಸುಂಕ, ನೂರೆತ್ತಿನ ಪರಿಹಾರ ಹೀಗೆ ಇವುಗಳನ್ನು ಸರ್ವಬಾಧಾ ಪರಿಹಾರವಾಗುವ ಉದ್ದಿಶ್ಯವಾಗಿ ಚವುಡಿಸೆಟ್ಟಿಯರೂ ನಾಗರಸರೂ ಯತಿರಾಯನಾದ ಹಾಲಬಸವಿದೇವರಿಗೆ ಮೊದಲಿಗೆ ಕೊಟ್ಟದ್ದನ್ನು ಧಾರಾಪೂರ್ವಕವಾಗಿ ದಾನಮಾಡಿಕೊಟ್ಟರು.

ಆ ಚವುಡಿಸೆಟ್ಟಿಯರ ಹೇಳಿಕೆಯಿಂದ ನಾಗರಸರು ಊರ ಪಶ್ಚಿಮಕ್ಕೆ ತೊರೆಯು ಕೂಡಿದ ಹಳ್ಳ ಹರಿಯುತ್ತಿರಲು ಅವರಮೇಲೆ ಮೆಲುಗಡಿಗೆ ಕಲ ಗಡಿಗ ಗೆರೆ xxx ಉತ್ತರಕ್ಕೆ ಮೊಸರಗುತ್ತಿ ಊರು xx ಪೂರ್ವಕ್ಕೆ xxx ಕಲ್ಲಿನಕಣಿ xx ಗೋಡಿಯ ಹಳ್ಳನೀರು ಹರಿಯುವ ವರೆಗೆ ದಕ್ಷಿಣಕ್ಕೆ ನದಿಯು ಸಂಗಮುವ ಸ್ಥಳ ಈ ನಾಲ್ಕು ಸೀಮೆಯಲ್ಲಿರುವ ಕವಿಳಾಸಪುರದಲ್ಲಿಯ ಸುಂಕ xxx ನಿಧಿನಿಕ್ಷೇಪ ಅಂಕೆ ಟಂಕೆ.........ಗೋಸನೆ ಮುದ್ರೆ ನಾಗೇಶ್ವರ, ಮಲ್ಲೇಶ್ವರ ಕುರುವನಿಗೆ ಇವುಗಳನ್ನು ಸಂಗಮೇಶ್ವರಸಿಗೋಸ್ಕರ ಪಾರಣೆಯು ಜಂಗಮಾರಾಧನೆಗೋಸ್ಕರ xxx ಈ ಪ್ರಕಾರಧರ್ಮವನ್ನು ಮಾಡಬೇಕೆಂದು ನಾಗರಸರು ಕೊಟ್ಟಶಾಸನವು.........ನೂಲೆನಾಡೊಳಗೆ ಸಂತೆಗಳ ಆಯದಾಯ ಈ ಪರಿ.........ಬರಲು ಸುಂಕ ಹದಿನೆಂಟು ಜಾತಿಯುವರೆಲ್ಲರು ಮೂರು ಮತಸ್ತರು.........ಬಸವರಾಜನೇ ಶಾಸನಿಕನೆಂದು ...........

## ಶಿಲಾಶಾಸನದಿಂದ ತಿಳಿದುಬರುವ ಮಹತ್ವದ ಸಂಗತಿಗಳು.

ಈ ಶಿಲಾಶಾಸನದಲ್ಲಿ ಬಸವೇಶ್ವರನ ಉಲ್ಲೇಖವಿರುತ್ತದೆ. ಇದು ಬೆಳಗಾವಿ ಜಿಲ್ಲಾ ಹುಕ್ಕೇರಿಯ ನೈರುತ್ಯದಿಕ್ಕಿಗೆ ೧॥ ಮೈಲುಗಳ ಮೇಲಿರುವ ಅರ್ಜುನವಾಡದ ಸಮಿಾಪದಲ್ಲಿದೆ. ಬಸವೇಶ್ವರನ ಉಲ್ಲೇಖವಿದ್ದ ಶಿಲಾಲಿಪಿಗಳು ಈ ವರೆಗೆ ಎಲ್ಲಿಯೂ ಸಿಕ್ಕಿದ್ದಿಲ್ಲ. ನಾವು ಈಗ ಪ್ರಸಿದ್ಧಿಸಿರುವ ಶಿಲಾಶಾಸನವೇ ಮೊದಲನೆಯದು. ಇದರಲ್ಲಿ ಈ ವರೆಗೆ ಅಪರಿಚಿತವಾದ ಅತ್ಯಂತ ಮಹತ್ವದ ಅನೇಕ ವಿಷಯಗಳಿರುವದರಿಂದ ಕರ್ನಾಟಕಸ್ಥರೆಲ್ಲರೂ ಇದಕ್ಕೆ ವಿಶೇಷ ಲಕ್ಷವನ್ನು ಪೂರೈಸುವರೆಂದು ನಾವು ನಂಬಿದ್ದೇವೆ.

ಈ ಶಿಲಾಶಾಸನದ ಕಾಲವು ಶಕೆ ೧೧೮೩ ಅಂದರೆ ಇಸ್ವಿ ಸನ್ನ ೧೨೬೦ ಇರುತ್ತದೆ. ಅಂದರೆ ಬಸವೇಶ್ವರನ ತರುವಾಯ ಸುಮಾರು ನೂರು ವರ್ಷವ್ದು ಇರುತ್ತದೆ. ಇದರಲ್ಲಿ ಬಸವೇಶ್ವರನ ಮತ್ತು ಅವನ ವಂಶದವರ ವೃತ್ತಾಂತವಿದೆ. ಈ ಶಿಲಾಶಾಸನದಿಂದ ಬಸವೇಶ್ವರನ ಮೊಮ್ಮಗನು ದೇವರಾಜ ಮುನಿಪನು, ಈ ದೇವರಾಜನ ಮೊಮ್ಮಗನು ಕಲಿದೇ

ವನು, ಅವನ ಮಗನು ಹಾಲಬಸವಿದೇವ ಮುನಿಪನು, ಹೀಗೆ ಇದ್ದ ರೆಂದು ತಿಳಿದುಬರುತ್ತದೆ. ಈ ವಿಷಯಗಳಿದ್ದ ಶಿಲಾಲೇಖದ ಭಾಗದಲ್ಲಿ ತೂತುಗಳು ಬಿದ್ದದರಿಂದ ಬಸವೇಶ್ವರನ ಮಗ ಮತ್ತು ಅವನ ಮೊಮ್ಮಗ ಇವರ ಹೆಸರುಗಳು ತಿಳಿದು ಬರುವದಿಲ್ಲ. ಇವರೆಲ್ಲರೂ ಕವಿಳಾಸಪುರದ ಅಧೀಶ್ವರರಾಗಿ ಇದ್ದರೆಂದು ಇಲ್ಲಿ ವರ್ಣಿಸಲ್ಪಟ್ಟಿದೆ. ಈ ಕವಿಳಾಸಪುರವು ಆ ಕಾಲಕ್ಕೆ ಒಂದು ದೊಡ್ಡ ಕ್ಷೇತ್ರಸ್ಥಾನವಾಗಿತ್ತೆಂದು ತೋರಿಬರುತ್ತದೆ. ಅಲ್ಲಿ ಕಲ್ಲಿನಾಥನ ಗುಡಿಯು ಪ್ರಸಿದ್ಧವಾಗಿತ್ತು. ಇದಲ್ಲದೆ ಅಲ್ಲಿ ಮಲ್ಲಿಕಾರ್ಜುನ, ಸಂಗಮೇಶ್ವರ, ನಾಗೇಶ್ವರ ಎಂಬ ಹೆಸರಿನ ಮೂರು ದೇವಾಲಯಗಳಿದ್ದು ಅವುಗಳ ಅಂಗಭೋಗ, ರಂಗಭೋಗ, ಜೀರ್ಣೋದ್ಧಾರ, ಪಾರಣೆಯ ಜಂಗಮಾರಾಧನೆ ಇವುಗಳಿಗೋಸ್ಕರ ಹಾಲಬಸವಿದೇವನಿಗೆ ದೇವಗಿರಿ ಯಾದವರಾಜನಾದ ಕನ್ನರನ ಪ್ರಧಾನಿಯಾದ ನಾಗರಸನು ಈ ಕವಿಳಾಸಪುರದಲ್ಲಿಯ ಕೆಲವು ಹಕ್ಕು ಬಾಬುಗಳನ್ನು ದಾನ ಕೊಟ್ಟಂತೆ ಈ ಶಾಸನದಿಂದ ತಿಳಿದುಬರುತ್ತದೆ.

ಈ ಶಾಸನದಿಂದ ತೋರಿಬರುವ ಕೆಲವು ಮಹತ್ವದ ವಿಷಯಗಳನ್ನು ಇಲ್ಲಿ ವಿವರಿಸಲು ನಾವು ಯತ್ನಿಸುತ್ತೇವೆ.

## ಬಸವೇಶ್ವರನ ಉಲ್ಲೇಖವು.

ಈ ಶಾಸನದ ಆರಂಭದಲ್ಲಿ ಶಂಭುವಿನ ಮತ್ತು ಕಲ್ಲಿನಾಥನ ಸ್ತುತಿಪರ ಶ್ಲೋಕಗಳಿದ್ದು ಆ ಮೇಲೆ ಬಸವೇಶ್ವರನ ಸ್ತುತಿಯು ಇದೆ. ಅದು ಏನೆಂದರೆ:—

"ಶ್ರೀ ಮತ್ತರದವಾಡಿ ಮಧ್ಯಗ್ರಾಮ ಬಾಗವಾಡಿ ಪುರವರಾಧೀಶ್ವರ ಮಾದಿರಾಜನ ತನೂಜಂ ಬಸವರಾಜನ ಮಹಿಮೆ ಎಂತೆಂದೊಡೆ:— ಮಂಗಳ ಕೀರ್ತಿ ಪುರಾತನ ಜಂಗಮಲಿಂಗ ಲಿಂಗೈಕ ಭಕ್ತಿ ನಿರ್ಭರಲೀಲಾಸಂಗಂ ಸಂಗನಬಸವಂ ಸಂಗತಿಯಿಂ ಮಾಳ್ಕೆ ಭಕ್ತಿಯೊಳಗನವರತಂ" ಎಂದು ಇದೆ.

ಈ ಉಕ್ತಿಯಲ್ಲಿ ಬಸವೇಶ್ವರನ ಉಲ್ಲೇಖವಿರುವದು ಸ್ಪಷ್ಟವಿದೆ. ಇಲ್ಲಿ ಅವನು ಬಾಗವಾಡಿ ಪುರದ ಅಧಿಪತಿಯಾದ ಮಾದಿರಾಜನ ಮಗನೆಂದು ಹೇಳಲ್ಪಟ್ಟಿದೆ. ಈ ಬಾಗವಾಡಿಯು ತರದವಾಡಿ ಸೀಮೆಯು

ಮಧ್ಯಗ್ರಾಮವೆಂದು ಇಲ್ಲಿ ಹೇಳಲ್ಪಟ್ಟಿದೆ. 'ತರದವಾಡಿ' ಎಂದರೆ ಈಗ ಇಂಡೀ ತಾಲೂಕಿನಲ್ಲಿ ಭೀಮಾನದಿಯ ತೀರದಲ್ಲಿರುವ ತದ್ದೇವಾಡಿ ಗ್ರಾಮ ವಿರುತ್ತದೆ. ಶಿಲಾಲೇಖಗಳಲ್ಲಿ ತರದವಾಡಿ ಸಾವಿರವೆಂದು ಉಲ್ಲೇಖವಿದ್ದು ಅದರ ದಕ್ಷಿಣಭಾಗಕ್ಕೆ ಕೆಲವಡಿ ಮುನ್ನೂರು ಕಿಸುಕಾಡು ಎಪ್ಪತ್ತು ಹೀಗೆ ಪ್ರದೇಶಗಳು ಇದ್ದದ್ದು ತಿಳಿದುಬರುತ್ತದೆ. 'ಕೆಲವಡಿ' ಗ್ರಾಮವು ಈಗ ಬಾದಾಮಿ ತಾಲೂಕಿನಲ್ಲಿ ಇದೆ. 'ಕಿಸುಕಾಡು' ಈಗಿನ ಪಟ್ಟದಕಲ್ಲೆಂದು ಪ್ರಸಿದ್ಧವು. ಇದಾದರೂ ಇದೇ ತಾಲೂಕಿನಲ್ಲಿಯೇ ಇದೆ. ಆದ್ದರಿಂದ ತದ್ದೇವಾಡಿ ಭಾಗವು ಈಗಿನ ಬಾದಾಮಿ ತಾಲೂಕನ್ನು ಬಿಟ್ಟು ಉಳಿದ ವಿಜಾಪುರ ಜಿಲ್ಹೆ ಎಂಬದು ಸ್ಪಷ್ಟವಾಗುತ್ತದೆ. ಈ ಭಾಗದ ಮಧ್ಯದಲ್ಲಿಯೇ ಈಗಿನ ಬಾಗೇವಾಡಿ ಗ್ರಾಮವು ಇರುತ್ತದೆ. ಬಾಗೇವಾಡಿ ಎಂಬ ಹೆಸ ರಿನ ಗ್ರಾಮವು ಇದರ ಹೊರ್ತು ಬೇರೆ ಯಾವುದೂ ಈ ಪ್ರದೇಶದಲ್ಲಿ ಇರುವದಿಲ್ಲ. ಆದ್ದರಿಂದ ಈ ಶ್ಲೋಕದಲ್ಲಿ ಉಲ್ಲೇಖಿಸಲ್ಪಟ್ಟ ಬಾಗೇವಾಡಿ ಗ್ರಾಮವು ವಿಜಾಪುರ ಜಿಲ್ಹೆಯಲ್ಲಿಯ ಈಗಿನ ಬಸವನ ಬಾಗೇವಾಡಿಯೇ ಎಂಬದು ಸ್ಪಷ್ಟವಾಗುತ್ತದೆ.

ಈ ಶ್ಲೋಕದಲ್ಲಿ ಬಸವೇಶ್ವರನು ಪುರಾತನರು ಜಂಗಮರು ಮತ್ತು ಲಿಂಗ ಇವುಗಳಲ್ಲಿ ಅತ್ಯಂತ ಭಕ್ತಿಯುಳ್ಳವನೆಂದು ಹೇಳಲ್ಪಟ್ಟಿದ್ದಾನೆ. ಮತ್ತು ಸಂಗನಬಸವನೆಂತಲೂ ಕರೆಯಲ್ಪಟ್ಟಿದ್ದಾನೆ. ವಚನಕಾರರು ಬಸವೇಶ್ವರನನ್ನು ಸಂಗನಬಸವನೆಂದು ಮೇಲಿಂದಮೇಲೆ ಕರೆಯುವದುಂಟು. ಈ ಹೆಸರು ಈ ಶಿಲಾಲೇಖದಲ್ಲಿಯೂ ಉಪಯೋಗಿಸಲ್ಪಟ್ಟಿದೆ. ಬಸವೇ ಶ್ವರನು ಸಂಗಮೇಶ್ವರನಿಂದ ದೀಕ್ಷೆಯನ್ನು ಹೊಂದಿದವನಾದ್ದರಿಂದ ಅವ ನಿಗೆ ಸಂಗನಬಸವನೆಂದು ಹೆಸರು ಬಂದಿರಬಹುದೆಂದು ತೋರುತ್ತದೆ. ಅವನು ಪುರಾತನರಲ್ಲಿಯೂ ಲಿಂಗಜಂಗಮದಲ್ಲಿಯೂ ಪ್ರೇಮವುಳ್ಳವನೆಂ ತಲೂ ಇಲ್ಲಿ ಹೇಳಿದೆ. ಈ ಎಲ್ಲ ಸಂಗತಿಗಳಿಂದ ಈ ಶಿಲಾಶಾಸನದಲ್ಲಿ ಉಲ್ಲೇಖಿಸಲ್ಪಟ್ಟ ಬಸವರಾಜನು ವೀರಶೈವ ಮತೋದ್ಧಾರಕನಾದ ಬಸ ವೇಶ್ವರನೇ ಇರಬೇಕೆಂದು ಗೊತ್ತಾಗುತ್ತದೆ.

## ಬಸವೇಶ್ವರನ ವಂಶದವರ ಉಲ್ಲೇಖವು.

ಮುಂದೆ ಬಸವೇಶ್ವರನ ವಂಶಜರ ವರ್ಣನೆಯು ಬಂದಿರುತ್ತದೆ. ಹೀಗೆ ಬಸವೇಶ್ವರನಿಗೆ ವಂಶದವರು ಉಳಿದದ್ದು ವೀರಶೈವ ಯಾವ

ಗ್ರಂಥದಲ್ಲಿಯೂ ಉಪಲಬ್ಧವಿಲ್ಲ. ಕೆಲವು ಗ್ರಂಥಗಳಲ್ಲಿ ಮಾತ್ರ ಅವನಿಗೆ ಬಾಲಸಂಗನೆಂಬ ಒಬ್ಬ ಮಗನಿದ್ದನೆಂತಲೂ ಅವನು ಚಿಕ್ಕವಯಸ್ಸಿನಲ್ಲಿ ಮರಣಹೊದಿದನೆಂತಲೂ ತಿಳಿದು ಬರುತ್ತದೆ. ಆದರೆ ಈ ಶಿಲಾಶಾಸನದಿಂದ ಬಸವೇಶ್ವರನಿಗೆ ವಂಶಜರು ಇದ್ದರೆಂಬ ಸಂಗತಿಯು ಸ್ಪಷ್ಟವಾಗುತ್ತದೆ. ಅವರು ಕಲ್ಯಾಣ ಪಟ್ಟಣ ಮತ್ತು ಸ್ವಗ್ರಾಮವಾದ ಬಾಗೇವಾಡಿಯನ್ನು ಬಿಟ್ಟು ಈ ಕವಿಳಾಸಪುರದಲ್ಲಿ ಹಿಂದುಗಡೆ ಬಂದು ನಿಂತಿದ್ದರೆಂದು ಕಂಡು ಬರುತ್ತದೆ. ಈ ಶಿಲಾಶಾಸನದ ಆಜ್ಞಿನಲ್ಲಿ ಈ ಹೆಸರುಗಳಿದ್ದ ಕಲ್ಲಿನ ಭಾಗದಲ್ಲಿ ತೂತುಗಳು ಬಿದ್ದದರಿಂದ ಬಸವೇಶ್ವರನ ವಂಶಜರಲ್ಲಿ ಈರ್ವರ ಹೆಸರುಗಳು ಗೊತ್ತಾಗದೆ ಉಳಿದಿವೆ. ಇದು ಬಹು ವಿಷಾದಕರವಾಗಿರುತ್ತದೆ.

ಈ ಶಿಲಾಲೇಖದಲ್ಲಿ ಬಸವೇಶ್ವರನ ಮಗನ ಹೆಸರು ಉಪಲಬ್ಧವಿಲ್ಲ. ಅಲ್ಲಿ ಸಂಗನಬಸವನ ಅಘ್ರ ಎಂಬ ಶಬ್ದಗಳು ಮಾತ್ರ ಉಳಿದಿವೆ. ಈ ಶಬ್ದಗಳು "ಸಂಗನಬಸವನ ಅಗ್ರಜ" ಎಂದು ಇರಬಹುದು. ಅಗ್ರಜನೆಂದರೆ ಹಿರಿಯ ಮಗ ಎಂದು ಅರ್ಥವಾಗುತ್ತದೆ. ಆದ್ದರಿಂದ ಬಸವೇಶ್ವರನಿಗೆ ಒಬ್ಬನಕಿಂತಲೂ ಹೆಚ್ಚಿಗೆ ಮಕ್ಕಳು ಇರಬಹುದೆಂಬ ಊಹೆಗೆ ಆಸ್ಪದವಾಗುತ್ತದೆ.

ಈ ಬಸವೇಶ್ವರನ ಹಿರಿಯ ಮಗನ ಮಗನು ಅಂದರೆ ಮೊಮ್ಮಗನಹೆಸರು ದೇವರಾಜನೆಂದು ಇದ್ದುದಾಗಿ ಗೊತ್ತಾಗುತ್ತದೆ. ಇವನ ವರ್ಣನಾತ್ಮಕ ವಿಶೇಷಣಗಳು ಶಿಲಾಲೇಖದಲ್ಲಿ ನಷ್ಟವಾಗಿವೆ. ಆದರೆ ಅವಶಿಷ್ಟಭಾಗದಲ್ಲಿ ಇವನು ಮುನಿಪನೆಂದು ಕರೆಯಲ್ಪಟ್ಟಿದ್ದಾನೆ.

ಈ ದೇವರಾಯನ ಮಗನ ಹೆಸರು ಶಿಲಾಲೇಖದಲ್ಲಿ ಅಳಿಸಿಹೋಗಿದೆ. ಆದರೆ ಆತನು "ಜಂಗಮ ಪುರುಷ", ಅಂದರೆ ಶ್ರೇಷ್ಠನಾದ ಜಂಗಮ ಎಂದು ವರ್ಣಿಸಲ್ಪಟ್ಟಿದ್ದಾನೆ.

ಈತನ ಪ್ರಿಯ ಸುತನು ಕಲಿದೇವರಸನೆಂದು ಇಲ್ಲಿ ಹೇಳಲ್ಪಟ್ಟಿದೆ. ಈತನ ವರ್ಣನಾತ್ಮಕ ಭಾಗವಾದರೂ ಶಾಸನದಲ್ಲಿ ಹೊರಟು ಹೋಗಿದೆ.

ಈ ಕಲಿದೇವ ಮುನಿಯ ಮಗನ ಹೆಸರು ಹಾಲಬಸವಿದೇವ ಮುನೀಶ್ವರನೆಂಬವನು ಇದ್ದು ಈತನು ಮೂಲೋಕದಲ್ಲಿ ಪ್ರಸಿದ್ಧ ಹೊಂದಿದವನೆಂತಲೂ ಮನುಷ್ಯ ಶ್ರೇಷ್ಠನೆಂತಲೂ ಅಶನ ಮತ್ತು ವ್ಯಸನ ಇವು

ಗಳನ್ನು ಗೆದ್ದಂಥವನೆಂತಲೂ ಛಲದಲ್ಲಿ ಅಧಿಕನೆಂತಲೂ ಹೇಳಲ್ಪಟ್ಟಿದ್ದಾನೆ.

ಈ ಪ್ರಕಾರ ಬಸವೇಶ್ವರನ ವಂಶಜರ ವರ್ಣನಾ ವಿಷಯಗಳು ಇದರಲ್ಲಿ ಬಂದಿವೆ. ಮುಂದೆ ಹಾಲಬಸವಿದೇವನ ಬಗ್ಗೆ ವಿಶೇಷ ವೃತ್ತಾಂತವು ಕೊಡಲ್ಪಟ್ಟದೆ. ಅದಾದರೂ ಅತ್ಯಂತ ಮಹತ್ವದ್ದಾಗಿದೆ.

ಹಾಲಬಸವಿದೇವನು "ಮಹಾಮಹೇಶ್ವರ" ಎಂದು ಹೇಳಲ್ಪಟ್ಟಿದ್ದಾನೆ. ಅದರಂತೆಯೇ "ಮುನೀಶ್ವರ" ನೆಂತಲೂ ಕರೆಯಲ್ಪಟ್ಟಿದ್ದಾನೆ. ಈ ವಿಶೇಷಣಗಳು ಈ ಯಾವತ್ತೂ ವಂಶಜರಿಗೆ ಉಪಯೋಗಿಸಲ್ಪಟ್ಟವೆ. ಇದರ ಮೇಲಿಂದ ಆ ಕಾಲಕ್ಕಿನ ವೀರಶೈವರಿಂದ ಬಸವೇಶ್ವರನ ವಂಶಸ್ಥರೆಲ್ಲರು ಅತ್ಯಂತ ಆದರಣೀಯರಾಗಿದ್ದರೆಂದು ತಿಳಿದುಬರುತ್ತದೆ. ಅವರು "ಮುನಿಪ, ಜಂಗಮ ಪುರುಷ, ಮಹಾಮಹೇಶ್ವರ" ಎಂದು ಕರೆಯಲ್ಪಟ್ಟಿದ್ದಾರೆ. ಆದರೂ ಇವರೆಲ್ಲರೂ ಪ್ರಾಪಂಚಿಕರಾಗಿದ್ದುದು ಸ್ಪಷ್ಟವು.

ಹಾಲಬಸವಿದೇವನು "ಸುವರ್ಣ ವೃಷಭಧ್ವಜ"ವುಳ್ಳವನೆಂದು ಹೇಳಲ್ಪಟ್ಟಿದ್ದಾನೆ. ಇವನ ವಂಶಕ್ಕೆ ಮೂಲಭೂತನಾದವನು ಬಸವೇಶ್ವರನಾಗಿದ್ದದರಿಂದ ಅವನ ಗುರುತಾದ ವೃಷಭನನ್ನು ಇವರು ತಮ್ಮ ನಿಶಾನೆಯಲ್ಲಿ ಇಟ್ಟುಕೊಂಡಿದ್ದ ಹಾಗೆ ತೋರುತ್ತದೆ.

ಅವನು "ತ್ರಿಷಷ್ಟಿ ಪುರಾತ ಪಾದಾರ್ಚಕ" ಎಂದು ಹೇಳಲ್ಪಟ್ಟಿದ್ದಾನೆ. ಅಂದರೆ ಅರುವತ್ತುಮೂರು ಪುರಾತನರಿಗೋಸ್ಕರ ಭಕ್ತಿಯುಳ್ಳವನೆಂದು ಹೇಳಲ್ಪಟ್ಟಿದೆ. ಈ ಪುರಾತನರೆಲ್ಲರೂ ವೀರಶೈವರಿಗೆ ಯಾವಾಗಲೂ ಪೂಜ್ಯರಾಗಿರುತ್ತಾರೆ.

ಇವನು "ಮಹಾಲಿಂಗ ಜಂಗಮ ಪ್ರಸಾದ ನಿಯತ" ಎಂದು ಹೇಳಲ್ಪಟ್ಟಿದ್ದಾನೆ. ಈ ಲಿಂಗ, ಜಂಗಮ, ಪ್ರಸಾದಗಳು ಅಷ್ಟಾವರಣಗಳಲ್ಲಿ ಬರುತ್ತಿದ್ದು ಇವುಗಳಿಗೆ ಒಳಪಟ್ಟು ನಡೆಯುವವನೆಂದು ಇಲ್ಲಿ ಹೇಳಲ್ಪಟ್ಟಿದ್ದಾನೆ.

ಇವನು ಸಮಯ ಭಕ್ತಿ ಸಂಪನ್ನನೆಂತಲೂ ಹೇಳಲ್ಪಟ್ಟಿದ್ದಾನೆ. ಅಂದರೆ ಯಾವ ಧರ್ಮ ಮಾರ್ಗಕ್ಕೆ ಅವನು ಹೊಂದಿದವನೋ ಅದರಲ್ಲಿಯೇ ವಿಶ್ವಾಸವುಳ್ಳವನೆಂದು ಹೇಳಲ್ಪಟ್ಟಿದೆ.

"ಶ್ರೀ ಬಸವರಾಜ ನನ್ವಯರು" ಎಂದು ಹೇಳಲ್ಪಟ್ಟಿದೆ. ಇದರಲ್ಲಿ ಬಸವೇಶ್ವರನ ವಂಶದವನೆಂದು ಸ್ಪಷ್ಟವಾಗಿ ಇಲ್ಲಿ ಹೇಳಲ್ಪಟ್ಟಿದ್ದಾನೆ. ಮುಂದೆ ತಪ ಚಕ್ರವರ್ತಿ ಮತ್ತು ವ್ರತಿ ಎಂದು ಹೇಳಲ್ಪಟ್ಟಿದ್ದಾನೆ.

ಈ ಪ್ರಕಾರ ಹಾಲಬಸವಿದೇವನ ವರ್ಣನೆ ಇದ್ದು ಇದು ಅವನ ಪೂರ್ವಜರೆಲ್ಲರಿರೂ ಹತ್ತುವಂತೆ ಇದೆ. ಇದರಿಂದ ಬಸವೇಶ್ವರನ ವಂಶಜರ ಸ್ಥಿತಿಯು ಚನ್ನಾಗಿ ವ್ಯಕ್ತವಾಗುತ್ತದೆ. ಈ ಶಾಸನದಲ್ಲಿ ಲಿಂಗ, ಜಂಗಮ, ಪ್ರಸಾದ, ಪುರಾತನರು, ಮಹೇಶ್ವರರು, ಗಣೇಶ್ವರ ಮೊದಲಾದ ಶಬ್ದಗಳು ಮೇಲಿಂದಮೇಲೆ ಬರುತ್ತವೆ. ಇವುಗಳೆಲ್ಲವೂ ವೀರಶೈವ ಮತಗ್ರಂಥಗಳಲ್ಲಿ ಮಾತ್ರ ಉಪಲಬ್ಧವಿರುವ ಶಬ್ದಗಳು. ಇದರ ಮೇಲಿಂದ ಈ ಬಸವೇಶ್ವರನ ವಂಶಸ್ಥರೆಲ್ಲರೂ ವೀರಶೈವ ಮತಾನುಯಾಯಿಗಳಾಗಿ ಜನರಲ್ಲಿ ಅತ್ಯಂತ ಮಾನ್ಯರಾಗಿ ಜೀವಿಸುತ್ತಿದ್ದರೆಂಬದು ಸಿದ್ಧವಾಗುತ್ತದೆ.

## ಕವಿಳಾಸಪುರ.

ಇನ್ನು ಮುಂದೆ ಇವರು ವಾಸಿಸುತ್ತಿದ್ದ ಕವಿಳಾಸಪುರದ ಬಗ್ಗೆ ವಿಚಾರಿಸುವಾ. ಈ ಗ್ರಾಮವು 'ನೂಲೆ' ನಾಡೊಳಗೆ ಇದ್ದ ಬಗ್ಗೆ ಈ ಶಿಲಾಶಾಸನದಿಂದ ತಿಳಿದುಬರುತ್ತದೆ. ನೂಲೆ ಗ್ರಾಮವು ಈಗಲೂ ಹುಕ್ಕೇರಿ ತಾಲೂಕಿನಲ್ಲಿದೆ. ಅದು ಹುಕ್ಕೇರಿಯ ಪಶ್ಚಿಮಕ್ಕೆ ಸುಮಾರು ೧೫ ಮೈಲುಗಳ ಮೇಲೆ ಇದೆ. ಬೆಳಗಾವ ಜಿಲ್ಹೆಯ ಉತ್ತರಭಾಗಕ್ಕೆ ಮೊದಲಿನ ಕಾಲದಲ್ಲಿ 'ಕುಹುಂಡಿ' ಅಥವಾ 'ಕುಂಡಿ ಮೂರುಸಾವಿರ' ಎಂಬ ಹೆಸರೂ ಇತ್ತು. ಈ ಸೀಮೆಯಲ್ಲಿ ನೂಲೆ ನಾಡು ಒಂದು ತಾಲೂಕಿನಂತೆ ಇರಬಹುದು. ನೂಲೆ ಗ್ರಾಮದಿಂದ ಕವಿಳಾಸಪುರವು ೭--೮ ಮೈಲು ಆಗಬಹುದು. ಈ ಕವಿಳಾಸಪುರವು ಆ ಕಾಲಕ್ಕೆ ಒಂದು ತೀರ್ಥವೆಂತಲೂ ನಾಲ್ಕುಯುಗದ ಪುರಾಣೋಕ್ತದಿಂದ ಬಂದ ಕ್ಷೇತ್ರವೆಂತಲೂ ತಿಳಿಯಲ್ಪಡುತ್ತಿತ್ತು. ಹೀಗೆ ಈ ಸ್ಥಾನಕ್ಕೆ ಪಾವಿತ್ರ್ಯವು ಬಂದದ್ದು ಕಲ್ಲಿನಾಥ ದೇವಸ್ಥಾನದಿಂದಲೇ ಇರುತ್ತದೆ. ಕೃತಯುಗದಲ್ಲಿ ಕವಿಳಾಸಮುನಿಯು ಅದನ್ನು ಪೂಜಿಸಿದ್ದರಿಂದ ಕವಿಳಾಸನಾಥನೆಂತಲೂ ತ್ರೇತಾಯುಗದಲ್ಲಿ ಅಂಕರಾಜ ಮುನಿಯು ಪೂಜಿಸಿದ್ದರಿಂದ ಅಂಕನಾಥನೆಂತಲೂ ದ್ವಾಪರದಲ್ಲಿ ಮಹಾರಾಜ ಮುನಿಯು ಆರಾಧಿಸಿದ್ದರಿಂದ ಮಹಲಿಂಗದೇವನೆಂತಲೂ ಕಲಿಯುಗದಲ್ಲಿ ಕಲಿರಾಜ ಮುನಿಯು ಆರಾಧಿಸಿದ್ದರಿಂದ ಕಲಿದೇವನೆಂತಲೂ ಈ ದೇವಸ್ಥಾನವು ಹೆಸರುಪಡೆದಿತ್ತು. ಅಲ್ಲದೆ ಇದನ್ನು ಅನೇಕ ಗಣೇಶ್ವರರು ಆರಾಧಿಸಿ ಸಾಲೋಕ್ಯ, ಸಾಮೀಪ್ಯ, ಸಾಯುಜ್ಯ, ಸಾರೂಪ್ಯ

ಪದವಿಯನ್ನು ಪಡೆದಿದ್ದರು. ಆದ್ದರಿಂದ ಆ ಕಾಲಕ್ಕೆ ಈ ಗ್ರಾಮವು ಜನರಲ್ಲಿ ಒಂದು ಪ್ರಸಿದ್ಧ ತೀರ್ಥವೆಂದು ಭಾವಿಸಲ್ಪಡುತ್ತಿತ್ತು.

ಆದರೆ ಈ ಕವಿಳಾಸಪುರವು ಈ ಕಾಲಕ್ಕೆ ಅಸ್ತಿತ್ವದಲ್ಲಿ ಇರುವ ದಿಲ್ಲ. ಆದರೆ ಈ ಕವಿಳಾಸಪುರದ ಮೊದಲಿನ ವಿಸ್ತಾರವು ಎಷ್ಟಿತ್ತೆಂಬ ದನ್ನು ಈ ಶಿಲಾಲೇಖದಿಂದ ಸ್ಥೂಲಮಾನವಾಗಿ ಕಂಡುಹಿಡಿಯಬಹುದಾ ಗಿದೆ. ಯಾಕಂದರೆ ಇದರಲ್ಲಿ ಈ ಪುರದ ಚತುಸ್ಸೀಮೆಯು ಹೇಳಲ್ಪ ಟ್ಟಿದೆ. ಈ ವಿವರಣೆ ಇದ್ದ ಭಾಗವು ಕೆಲವೆಡೆಗಳಲ್ಲಿ ಭಿನ್ನವಾಗಿದೆ. ಆದರೂ ಅದರಿಂದ ತಿಳಿಯುವದೇನಂದರೆ:— ನದಿಯನ್ನು ಕೂಡಿದ ಹಳ್ಳದ ಪೂರ್ವದ ದಂಡೆಯು ಈ ಗ್ರಾಮದ ಪಶ್ಚಿಮಕ್ಕೆಂತಲೂ, ಮೊಸರಗುತ್ತಿ ಗ್ರಾಮವು ಉತ್ತರದಿಕ್ಕಿಗೆಂತಲೂ, ಅದರ ಪೂರ್ವಕ್ಕೆ ಕಲ್ಲಿನ ಕಣಿ ಇದ್ದ ಕೆರೆಯ ಕೋಡಿಯಿಂದ ಬಂದ ಹಳ್ಳದ ದಂಡೆಯು ಪೂರ್ವಕ್ಕೆಂತಲೂ, ನದಿಯ ಸಂಗಮಸ್ಥಳವು ದಕ್ಷಿಣಕ್ಕೆಂತಲೂ ಹೇಳಿದೆ. ಈ ಚತುಃ ಸೀಮೆಯ ಸಹಾಯದಿಂದ ಮುಂಚಿನ ಕವಿಳಾಸಪುರದ ಸ್ಥಳವನ್ನು ಈಗ ಗುರ್ತಿಸ ಬಹುದಾಗಿದೆ. ಹುಕ್ಕೇರಿ ಗ್ರಾಮದ ಪಶ್ಚಿಮಕ್ಕೆ ಸಮ ಸಮೀಪವಾಗಿ ಮೂರು ಸಣ್ಣ ಸಣ್ಣ ಹಳ್ಳಗಳಿವೆ. ಅವುಗಳಲ್ಲಿ ಮಧ್ಯದ ಹಳ್ಳವು ಬಹಳ ಸಣ್ಣದು ಇದೆ. ಅವೆಲ್ಲವುಗಳು ಹಿರಣ್ಯಕೇಶಿ ಹೊಳೆಯನ್ನು ಕೂಡುತ್ತವೆ. ಈ ಮೂರು ಹಳ್ಳಗಳಲ್ಲಿ ಎಲ್ಲಕ್ಕೂ ಪಶ್ಚಿಮ ಕಡೆಯ ಹಳ್ಳವೇ ಕವಿಳಾ ಸಪುರದ ಪಶ್ಚಿಮ ಮೇರೆಯು. ಶಿಲಾಲೇಖದಲ್ಲಿ ಉಲ್ಲೇಖಿಸಿದ ಮೊಸರ ಗುತ್ತಿ ಗ್ರಾಮವು ಈಗ್ಗೆಯೂ ಅಲ್ಲಿಯೇ ಇದೆ. ಈ ಗ್ರಾಮವೇ ಈ ಕವಿ ಳಾಸಪುರದ ಉತ್ತರ ಮೇರೆಯಾಗಿತ್ತು. ಈ ಗ್ರಾಮದ ಮೇರೆಗೆ ಹೊಂದಿ ಈಗ ಒಂದು ಗುಡ್ಡವು ಇದ್ದು ಅಲ್ಲಿ ಒಂದು ಕಲ್ಲಕಣಿಯೂ ಜಲಾಶ ಯವೂ ಮೊದಲು ಇರಬಹುದು. ಇದರ ಪೂರ್ವಕ್ಕೆ ಹಳ್ಳವು ಇದ್ದು ಇದರ ದಂಡೆಯೇ ಕವಿಳಾಸಪುರದ ಪೂರ್ವ ಮೇರೆಯಾಗಿತ್ತು. ಮತ್ತು ಈ ಹಳ್ಳವು ಹಿರಣ್ಯಕೇಶಿ ಹೊಳೆಯನ್ನು ಕೂಡಿದಂಥ ಸ್ಥಳವೇ ಇದರ ದಕ್ಷಿಣ ದಿಕ್ಕಿನ ಮೇರೆಯಾಗಿತ್ತು. ಅಂದರೆ ಈ ಗ್ರಾಮವು ಮೇಲ್ಕಂಡ ಮೂರು ಹಳ್ಳಗಳಲ್ಲಿ ನೆಲಿಸಿದ್ದು ಅದರ ಉದ್ದ ಸುಮಾರು ಎರಡು ಮೈಲು ಮತ್ತು ಅಗಲು ೧॥ ಮೈಲು ಇರಬಹುದಾಗಿ ತೋರುತ್ತದೆ. ಈ ಪ್ರದೇ ಶವು ಹುಕ್ಕೇರಿಗ್ರಾಮದ ಪಶ್ಚಿಮಕ್ಕೆ ೨ ಅಥವಾ ೨॥ ಮೈಲು ಅಂತರದ ಮೇಲೆ ಇರುತ್ತದೆ. ಈ ಭಾಗದಲ್ಲಿ ಈಗ ಹಾಲಶಂಕರ ಲಿಂಗನ ಗುಡಿ

ಇದೆ. ಗುಡಿ ಎಂದರೆ ಚನ್ನಾಗಿ ಕಟ್ಟಿದ ದೇವಸ್ಥಾನವಲ್ಲ. ಈಗಿನ ಕಾಲವ ಮಣ್ಣಿನ ಮನೆ. ಇದರ ಹೊರ್ತು ಯಾವ ದೇವಾಲಯವೂ ಅಲ್ಲಿ ಇರುವ ದಿಲ್ಲ. ಆದರೆ ಅರ್ಜುನವಾಡ, ಕೊಚ್ಚರಿಗಿ, ಮಸರಗುಪ್ಪಿ ಈ ಮೂರು ಊರು ಕೂಡಿ ಮೊದಲು ಒಂದೇ ಊರು ಇದ್ದ ಹಾಗೂ, ಕಾರಣಾಂತ ರದಿಂದ ಆ ಊರು ಮುರಿದು ಮೂರು ಹಳ್ಳಿಗಳಾದ ಹಾಗೂ ಅಲ್ಲಿ ಆಖ್ಯಾಯಿಕೆ ಉಂಟು. ಅಲ್ಲದೆ ಈ ಮೂರೂ ಊರುಗಳಲ್ಲಿ ಒಂದೇ ವಂಶದ ಗೌಡರು, ಒಂದೇ ವಂಶದ ಕುಲಕರ್ಣಿಯರು, ಒಂದೇ ವಂಶದ ವತನೀ ಹೊಲೇರು ಇರುವರಂತೆ.

ಈ ಲೇಖದಿಂದ ತಿಳುದು ಬರುವ ಮತ್ತೊಂದು ಮಹತ್ವದ ಸಂಗತಿ ಏನಂದರೆ ಬಸವೇಶ್ವರನ ಉಲ್ಲೇಖವಿರುವ ಇದರಲ್ಲಿಯ ವಾಕ್ಯಗಳನ್ನು ನೋಡಿದರೆ ಅವನು ವೀರಶೈವ ಮತಸ್ಥಾಪಕನಾಗಿರಲಿಕ್ಕಿಲ್ಲೆಂಬ ಅನು ಮಾನವು ದೃಢವಾಗುತ್ತದೆ. ಅವನ ವರ್ಣನಾತ್ಮಕ ವಾಕ್ಯಗಳಲ್ಲಿ ವೀರ ಶೈವ ಮತಸ್ಥಾಪನಾಚಾರ್ಯ ಅಥವಾ ಈ ಅರ್ಥವನ್ನು ಭೋಧಿಸುವಂಥ ಯಾವ ವಿಶೇಷಣವೂ ಇರುವದಿಲ್ಲ. ಅವನು ಮತಸ್ಥಾಪಕನಾಗಿದ್ದರೆ ಇದನ್ನು ಸೂಚಿಸತಕ್ಕ ವಾಕ್ಯಗಳು ಸಹಜವಾಗಿಯೇ ಇದರಲ್ಲಿ ಬರುತ್ತಿ ದ್ದವು. ಆದರೆ ಇಂಥ ಶಬ್ದಗಳ ಬದಲು ಆತನು "ಪುರಾತನ ಜಂಗಮ ಲಿಂಗೈಕ ಭಕ್ತಿ ನಿರ್ಭರ ಲೀಲಾಸಂಗಂ" ಎಂದು ಮೊದಲಾಗಿ ವರ್ಣಿಸ ಲ್ಪಟ್ಟಿದ್ದಾನೆ. ಇದರ ಮೇಲಿಂದ ಅವನಕ್ಕಿಂತಲೂ ಮೊದಲು ಶಿವಮತವು ಅಸ್ತಿತ್ವದಲ್ಲಿತ್ತೆಂಬ ಊಹೆಗೆ ಆಸ್ಪದವಾಗುತ್ತದೆ.

## ಬೇರೆ ಐತಿಹಾಸಿಕ ವಿಷಯಗಳು.

ಇನ್ನು ಮೇಲೆ ಈ ಶಿಲಾಶಾಸನದಿಂದ ಕಂಡು ಬರುವ ಬೇರೆ ಐತಿಹಾ ಸಿಕ ವೃತ್ತಾಂತಗಳನ್ನು ನೋಡುವಾ.

ಇದರಲ್ಲಿ ಯಾದವ ಭೂಪಾಲಕನಾದ ಸಿಂಹಣನ ಉಲ್ಲೇಖವಿದೆ- ಇವನು ಈ ರಾಜವಂಶದಲ್ಲಿ ಪ್ರತಾಪಶಾಲಿಯಾದ ಅರಸನು. ಅವನು ೧೨೧೦ ರಿಂದ ೧೨೪೭ರ ವರೆಗೆ ದೇವಗಿರಿಯಲ್ಲಿ ಆಳಿದನು. ಇವನೇ ಮೊದಲು ಉತ್ತರ ಕರ್ನಾಟಕ ಪ್ರಾಂತವನ್ನು ವಶಮಾಡಿಕೊಂಡು ಆಳಿದ ನೆಂದು ಇತಿಹಾಸದಿಂದ ತಿಳಿದು ಬರುತ್ತದೆ.

ಇವನ ಹಿರಿಯಮಗನಾದ ಕನ್ನರಸು ಇಲ್ಲಿ ಉಲ್ಲೇಖಿಸಲ್ಪಟ್ಟಿದ್ದಾನೆ. ಇವನು ೧೨೪೭ ರಿಂದ ೧೨೬೦ ರ ವರೆಗೆ ಆಳಿದನು. ಈ ಅರಸನ ಕಾಲ ದಲ್ಲಿಯೇ ಅವನ ಮಂತ್ರಿಯಾದ ನಾಗರಸನು ಹಾಲಿಬಸವಿದೇವನಿಗೆ ಈ ಶಾಸನವನ್ನು ಕೊಟ್ಟದ್ದು ಇರುತ್ತದೆ.

ಈ ಶಿಲಾಲೇಖದಲ್ಲಿ ಆಗ ಕರ್ನಾಟಕ ಪ್ರಾಂತದಲ್ಲಿ ಮಾಂಡಲಿಕ ರಾಗಿ ಆಳುತ್ತಿದ್ದಂಥ ಚಿಕ್ಕ ಅವನ ಮಕ್ಕಳಾದ ಮಲ್ಲ ಮತ್ತು ಬೀಚುಗಿ ಮತ್ತು ಮಲ್ಲನ ಮಗನಾದ ಚಾವುಂಡ ಇವರ ಉಲ್ಲೇಖಗಳು ಬಂದಿವೆ. ಇವರ ಉಲ್ಲೇಖವಿದ್ದ ಶಿಲಾಶಾಸನಗಳು ಕರ್ನಾಟಕದ ಬೇರೆ ಬೇರೆ ಭಾಗ ಗಳಲ್ಲಿ ಸಿಗುತ್ತವೆ. ಅವುಗಳ ಮೇಲಿಂದ ತಿಳಿದುಬರುವದೇನಂದರೆ ಇವ ರಲ್ಲಿ ಬೀಚುಗಿಯೇ ಅತ್ಯಂತ ಪ್ರಸಿದ್ಧನೂ ಶೂರನೂ ಆಗಿದ್ದನು- ಅವನು ಅನೇಕ ಸಮರಾಂಗಣದಲ್ಲಿ ದೇವಗಿರಿ ಯಾದವರಿಗೆ ಸಹಾಯಕನಾಗಿ ದ್ದನು. ಧಾರವಾಡ ಜಿಲ್ಹಾ ಬ್ಯಾಹಟ್ಟಿಯಲ್ಲಿ ಈತನ ಒಂದು ಶಿಲಾಶಾ ಸನವಿದ್ದು ಅದರಲ್ಲಿ ಅವನು ರಟ್ಟರನ್ನು ಗೆದ್ದಂತೆ ಉಲ್ಲೇಖವಿದೆ. ಲಕ್ಷ್ಮೇ ಶ್ವರದಲ್ಲಿ ೧೨೪೭ ನೇ ಇಸ್ವಿಯ ಒಂದು ಶಿಲಾಶಾಸನವಿದ್ದು ಇದರಲ್ಲಿ ಇವನು ಯಾದವರ ಮಹಾ ಪ್ರಧಾನನೆಂತಲೂ ಸೇನಾಪತಿಯೆಂತಲೂ ವರ್ಣಿಸಲ್ಪಟ್ಟಿದ್ದಾನೆ. ಇದರಿಂದ ಇವನು ಲಕ್ಷ್ಮೇಶ್ವರದಲ್ಲಿದ್ದು ಅಲ್ಲಿಂದ ಅವನು ಕರ್ನಾಟಕದ ರಾಜ್ಯಭಾರ ಮಾಡುತ್ತಿದ್ದಹಾಗೆ ತೋರುತ್ತದೆ. ಅವನ ಅಣ್ಣನಾದ ಮಲ್ಲನು ಮುದುಗಲದಲ್ಲಿದ್ದು ಕರ್ನಾಟಕದ ಪೂರ್ವ ಭಾಗವನ್ನು ಆಳುತ್ತಿದ್ದನು. ಈ ಮಲ್ಲ ಅಥವಾ ಮಲ್ಲಶೆಟ್ಟಿಯ ಶಿಲಾ ಶಾಸನವು ಬಸವನ ಬಾಗೇವಾಡಿಯಲ್ಲಿಯೇ ಇದೆ. ಈ ಮಲ್ಲನ ಮಗನೇ ಚಾವುಂಡನು. ಈ ಚಾವುಂಡನು ಈ ಕವಿಳಾಸಪುರದ ಶಾಸನದಲ್ಲಿ ಶಿವಭಕ್ತನೆಂತಲೂ ಮಂತ್ರಾಂಗ ವಿದ್ಯಾಸಮುದ್ರನೆಂತಲೂ ಹೊಗಳಲ್ಪಟ್ಟಿ ದ್ದಾನೆ. ಈ ಚಾವುಂಡನ ಒಂದು ಶಿಲಾಶಾಸನವು ಸವದತ್ತಿಯ ಸಮೀ ಪದಲ್ಲಿರುವ ಮುನವಳ್ಳಿಯಲ್ಲಿ ಇದೆ. ಇದರಲ್ಲಿ ಇವನು ಯಾದವರಾ ಯನ ದಕ್ಷಿಣ ಪ್ರಾಂತವನ್ನೆಲ್ಲ ಆಳುತ್ತಿದ್ದನೆಂದು ಉಲ್ಲೇಖವಿದೆ. ಇವನು ತನ್ನ ಕಿರಿಯಪ್ಪನಾದ ಬೀಚುಗಿಯು ಆಳುತ್ತಿದ ಲಕ್ಷ್ಮೇಶ್ವರದಲ್ಲಿಯೇ ಆಳು ತ್ತಿರಬಹುದು.

ಈ ಕವಿಳಾಸಪುರದ ಶಿಲಾಶಾಸನದಲ್ಲಿ ನಾಗರಸನು ಈ ಚಾವುಂ ಡನ ಮಿತ್ರನೆಂದೂ ವಾಣಸವಂಶದವನೆಂದೂ ರಟ್ಟರಾಜ್ಯ ಪ್ರತಿಷ್ಠಾಚಾ

ರ್ಯನೆಂದೂ ಮಹಾಪ್ರಧಾನನೆಂದೂ ವರ್ಣಿಸಲ್ಪಟ್ಟಿದ್ದಾನೆ. ಶಿಲಾಲೇಖಗಳಲ್ಲಿ ಬೀಜುಗಿಯು ರಟ್ಟ ರಾಜ್ಯವನ್ನು ಕೈವಶ ಮಾಡಿಕೊಂಡದ್ದರ ಉಲ್ಲೇಖವಿದೆ. ಆದರೆ ಈ ನಾಗರಸನು ಈ ರಾಜ್ಯದ ಪ್ರತಿಷ್ಠಾಪಕನೆಂದು ಇಲ್ಲಿ ಹೇಳಲ್ಪಟ್ಟಿದ್ದಾನೆ. ಆದ್ದರಿಂದ ಈತನು ರಟ್ಟ ಮನೆತನದವರೊಬ್ಬರಿಗೆ ಕೆಲವು ಉಂಬಳಿ ಹಾಕಿ ಕೊಟ್ಟಿರಬಹುದಾಗಿ ತೋರುತ್ತದೆ. ಆದರೆ ರಟ್ಟರ ವಂಶದವರ ಶಿಲಾಶಾಸನಗಳು ೧೨೩೮ರ ತರುವಾಯ ಎಲ್ಲಿಯೂ ಸಿಗುವದಿಲ್ಲ. ಆದ್ದರಿಂದ ಇದರ ಮುಂದೆ ಅವರು ಸ್ವತಂತ್ರರಾಗಿ ಆಳಿರಲಿಕ್ಕಿಲ್ಲೆಂದು ತೋರುತ್ತದೆ.

ಹಾಲಿಬಸವಿದೇವರಿಗೆ ಸಿದ್ಧಾರ್ಥಿ ಸಂವತ್ಸರದ ಚೈತ್ರ ಬಹುಳ ಅಮಾವಾಸ್ಯ ಸೋಮವಾರ ಸೂರ್ಯ ಗ್ರಹಣದಲ್ಲಿ ಪುಲಗೆರೆಯ ಸೋಮನಾಥ ದೇವರ ಸನ್ನಿಧಿಯಲ್ಲಿ ದಾನಕೊಟ್ಟ ಬಗ್ಗೆ ಈ ಶಾಸನದಲ್ಲಿ ಹೇಳಲ್ಪಟ್ಟಿದೆ. ಚಾಂಡರಸರು ಪುಲಗಿರಿಯಲ್ಲಿ ಆಳುತ್ತಿದ್ದದರಿಂದ ಮಹಾಪ್ರಧಾನನಾದ ನಾಗರಸನು ಅಲ್ಲಿಗೆ ಬಂದಾಗ್ಗೆ ಹಾಲಿಬಸವಿದೇವನನ್ನು ಅಲ್ಲಿಯೇ ಕರಿಸಿಕೊಂಡು ಸೋಮನಾಥ ದೇವರ ಸನ್ನಿಧಿಯಲ್ಲಿ ಈ ದಾನವನ್ನು ಕೊಟ್ಟಿರಬಹುದೆಂದು ತೋರುತ್ತದೆ.

ದೇವರಿಗೆ ದಾನ ಕೊಟ್ಟ ವಿಷಯಗಳನ್ನು ನೋಡಿದರೆ ಅವೆಲ್ಲವೂ ಆಗಿನ ಕಾಲದ ನಾನಾ ಬಗೆಯ ಸುಂಕಗಳಿದ್ದ ಹಾಗೆ ತೋರುತ್ತದೆ. ಇದರ ಮೇಲಿಂದ ಈ ಕವಿಳಾಸಪುರವು ಆಗಿನ ಕಾಲಕ್ಕೆ ಒಂದು ದೊಡ್ಡ ವ್ಯಾಪಾರೀ ಪಟ್ಟಣವಾಗಿರಬಹುದೆಂದು ತೋರುತ್ತದೆ. ಇಂಥ ವ್ಯಾಪಾರಿ ಪಟ್ಟಣಗಳಲ್ಲಿ ಶೆಟ್ಟರ ಯಾಜಮಾನ್ಯವು ಹಿಂದಿನ ಕಾಲಕ್ಕೆ ವಿಶೇಷವಾಗಿರುವದು ಎಲ್ಲರಿಗೂ ಗೊತ್ತಿದೆ. ಇವರ ಅಧಿಕಾರವು ಸುಂಕಗಳ ಮೇಲೆಯೂ ಇರುತ್ತಿದ್ದದರಿಂದ ನಾಗರಸ ಮಹಾ ಪ್ರಧಾನನು ಹಾಲಿಬಸವಿದೇವನಿಗೆ ಕವಿಳಾಸಪುರದ ಸುಂಕ ಬಾಬುಗಳನ್ನು ಅಲ್ಲಿಯ ಚೌಡಿಶೆಟ್ಟಿಯರ ನಿಯಾಮದಿಂದ ದಾನ ಕೊಟ್ಟಿರಬಹುದು.

## ಶಿಲಾಲೇಖದ ಅಳತೆ.

ಈ ಶಿಲಾಶಾಸನವು ಹಾಲಶಂಕರಲಿಂಗನ ಗುಡಿಯ ಮುಂಗೋಡೆಗೆ ಮೂಡಲ ಮುಖವಾಗಿ ನಿಲ್ಲಿಸಲ್ಪಟ್ಟಿದೆ. ಇದರ ಅಳತೆ:— ಎತ್ತರು

೯ ಗೇಣು ೧೦ ಅಂಗುಲ, ಅಗಲು ೧ ಗೇಣು ೮ ಅಂಗುಲ, ದಪ್ಪ ೧ ಗೇಣು ೩ ಅಂಗುಲ, ಮೇಲೆ ಚಿತ್ರವಿರುವ ಸ್ಥಳ ೧ ಗೇಣು ೪ ಅಂಗುಲ, ಬಳಿಕ ಲೇಖವಿರುವಸ್ಥಳ ೬ ಗೇಣು ೮ ಅಂಗುಲ, ಕೆಳಗೆ ತೆರವಿದ್ದಸ್ಥಳ ೧ ಗೇಣು ೧೦ ಅಂಗುಲ.

ರಾ॥ ರಾ॥ ಚನ್ನಮಲ್ಲಪ್ಪ ಹಲಸಂಗಿ ಮತ್ತು ಪ್ರೊ॥ ಎಸ್. ಸಿ. ನಂದೀಮಠ ಎಮ್. ಏ. ಇವರು ಅರ್ಜುನವಾಡಕ್ಕೆ ಹೋಗಿ ಇದರ ಅಚ್ಚನ್ನು ತೆಗೆದುಕೊಂಡಿರುವರು. ಮತ್ತು ಇದನ್ನು ರಾ॥ ರಾ॥ ಹಲಸಂಗಿ ಚನ್ನಮಲ್ಲಪ್ಪನವರು ಬಹು ಪರಿಶ್ರಮ ಪೂರ್ವಕವಾಗಿ ಓದಿ ನಮ್ಮ ಕಡೆಗೆ ಕಳಿಸಿದ್ದಕ್ಕೆ ನಾವು ಈ ಉಭಯ ಮಹನೀಯರಿಗೆ ಬಹಳ ಆಭಾರಿಯಾಗಿದ್ದೇವೆ.

# ಪರಿಶಿಷ್ಟ ೨.

## ಕಠಿಣ ಶಬ್ದಗಳ ಅರ್ಥ.

ಅಕ್ಕವೆ = ಅಧೀನ
ಅಕ್ಕು = ದಕ್ಕು, ಅಧೀನವಾಗು
ಅಕ್ಕೆ = ಶೋಕ
ಅಗಡು = ತುಂಟತನ, ಕ್ಷುದ್ರತನ
ಅಗಮ್ಯ = ತಿಳಿಯಲಸಾಧ್ಯ
ಅಗಲ = ಊಟದ ಪಾತ್ರೆ
ಅಚ್ಚುಕ (ಅಚ್ಚುಗ) = ಸ್ವರೂಪ ಆಕೃತಿ (೨) ಗಟ್ಟಿಯಾಗಿರುವ ಸ್ಥಿತಿ
ಅಜ = ಬ್ರಹ್ಮ
ಅಟ್ಟಾಟಿಕೆ = ಬೆನ್ನುಹತ್ತುವದು ತೊಂದರೆ ಕೊಡುವದು, ಒತ್ತುವದು
ಅಟ್ಟೆ = ಮುಂಡವಿಲ್ಲದ ಶರೀರ
ಅಡಗ = ಮಾಂಸ
ಅಡಸು = ಮೇಲೆ ಬರು
ಅಡೆ = ಬೇಲಿ
ಅಣಕ = ಗಟ್ಟಿಯಾಗಿರುವ ಸ್ಥಿತಿ (೨) ಗೂಢಾರ್ಥ, ಇಂಗಿತಾರ್ಥ
ಅಣಚಿ = ಕರಿಮಣಿ
ಅಣಲ = ಅಂಗುಳ (೨) ಮುಖ
ಅಣೆ = ಸಮೀಪಕ್ಕೆ ಬರು (೨) ಹೊಡೆ
ಅತಿಗಳೆ = ದೂರಸರಿ, ತಿರಸ್ಕರಿಸು, ಅತಿಕ್ರಮಿಸು
ಅತೀತ = ಮೀರಿದ
ಅದ್ದು = ಕೆಡವು, ಮುಳುಗಿಸು
ಅರ್ಥಿ = ಇಚ್ಛೆಯುಳ್ಳವ, ಆಶೆಯುಳ್ಳವ, ಸೇವಕ
ಅನವರತ = ಯಾವಾಗಲೂ
ಅನಾಮಿಕ = ನೀಚ, ಪಾಪಿಷ್ಠ (೨) ಅಪ್ರಸಿದ್ಧ
ಅನಾಯತ = ಸ್ವೈರವೃತ್ತಿ, ಅನಾಚಾರ
ಅನು = ರೀತಿ, ಸೌಂದರ್ಯ
ಅನುದಿನ = ಯಾವಾಗಲೂ
ಅನುಭವ = ಜ್ಞಾನ
ಅನುಭಾವಿ=ಜ್ಞಾನಿ
ಅನುಶ್ರುತ=ನಿತ್ಯ
ಅರಸು=ಹುಡುಕು
ಅರೆ=ತಿಕ್ಕು
ಅಲಗು=ಕತ್ತಿ
ಅಲಸು=ಬೇಸರಪಡು
ಅಲೆ=ತೆರೆ(೨)ಸಂಚರಿಸು(೩) ಹಾಯು
ಅವಧರಿಸು=ಲಕ್ಷಿಸು
ಅವಧಾರು=ಲಕ್ಷಿಸು
ಅವಸರ=ವೇಳೆ
ಅವಸ್ಥೆ=ದುಃಖ
ಅವುಡು=ಮೆಲಕು

ಅಸಮಾಕ್ಷಲಿಂಗ=ಶಿವ
ಅಳಲು=ದುಃಖ (೨) ದುಃಖಪಡು
ಅಳವಡು=ಸಂಬಂಧಪಡು
ಅಳವು=ಸಾಮರ್ಥ್ಯ
ಅಳಿ=ಕ್ಷುದ್ರ (೨) ನಾಶವಾಡು
ಅಳಿವು=ನಾಶ
ಅಳುಕು=ಅಂಜು
ಅಳುಪು=ತೊಂದರೆಕೊಡು (೨) ಕಂಗೆ [ಡಿಸು
ಅಂಕ=ಗುರುತು(೨)ಕಾಳಗ
ಅಂಕಕಾರ=ಶೂರ
ಅಂಕೆ=ಆಜ್ಞೆ
ಅಂಗವಣೆ=ಸಾಮರ್ಥ್ಯ
ಅಂಜನ=ಕಾಡಿಗೆ
ಅಂಡಲೆ=ಒತ್ತು, ತೊಂದರೆಕೊಡು (೨) ತೊಂದರೆ
ಅಂತರ=ಒಳಗಿನ (೨) ಮನಸ್ಸು
ಅಂತರಿಸು=ದೂರವಾಗು
ಅಂದಣ=ಪಲ್ಲಕ್ಕಿ
ಅಂದಣಗಿತ್ತಿ=ಅಡಗುಲಜ್ಜಿ
ಅಂಬರ=ಆಕಾಶ
ಆಗು=ಸ್ಥಿತಿ
ಆಧಿ=ಚಿಂತೆ
ಆಪೋಷಣ = ಸೀಪುವದು (೨) ಆಹಾರ
ಆಪ್ಯಾಯನ = ತೃಪ್ತಿ
ಆಮಿಷ = ಆಶೆ
ಆಯತ=ಸುತ್ತುಗಟ್ಟಲ್ಪಟ್ಟ, ಒಳಗಾದ (೨) ಇಷ್ಟಲಿಂಗಕ್ಕೆ ಸಂಬಂಧಿಸಿದ
ಆಯು = ಆರಿಸು
ಆರಂಬ = ಒಕ್ಕಲುತನ
ಆರೂಢ = ಪರಿಪೂರ್ಣ ಜ್ಞಾನವನ್ನು ಹೊಂದಿದ, ಜ್ಞಾನಿ
ಆರೋಗಣೆ = ಊಟ
ಆಲಿ = ಕಣ್ಣು (೨) ಆಣೇಕಲ್ಲು
ಆಲಿಸು = ಕೇಳು
ಆಲು = ಕೂಗು
ಆಸುರ = ಆವೇಶ
ಆಳುತನ = ಭೃತ್ಯತ್ವ
ಆಳ್ದ = ಒಡೆಯ
ಇಟ್ಟಗೆ = ಇಟ್ಟಂಗಿ
ಇಟ್ಟೆ = ಹೆಮ್ಮುಷ್ಟಿಯ ಫಳ
ಇದಿರು = ಭಿನ್ನತೆ,
ಇನಿದು = ಸವಿ
ಇಲ್ಲವೆ = ಬಡತನ
ಈಡಾಡು = ಒಕ್ಕೊಡು
ಈಡು = ಎಳೆಯುವದು, ಇಡುವದು (೨) ಉದ್ದೇಶ (೩) ಹೆಚ್ಚಾಗುವಿಕೆ (೪) ಯೋಗ್ಯ (೫) ಜಾಮೀನು
ಈಯು = ಕೊಡು
ಈಸು = ಗೊಡು
ಉಂಡಲಿಗೆ = ಅನ್ನದ ಮುದ್ದೆ
ಉಂಡಿಗೆ = ಗುರ್ತು, ಮುದ್ರೆ
ಉತ್ತು = ತಿಕ್ಕು (೨) ರಂಟೆಹೊಡೆ
ಉನ್ಮದ = ಹುಚ್ಚು
ಉಯ್ಯಾಲೆ = ಜೋಕಾಲೆ
ಉರೆ = ಚನ್ನಾಗಿ
ಊಡು = ಉಣ್ಣಿಸು
ಎಗ್ಗ = ದಡ್ಡ, ಹುಚ್ಚ
ಎಡೆ ಸ್ಥಳ (೨) ನೈವೇದ್ಯ (೩) ಮಧ್ಯ

ಎರೆವಲೆ = ಜೋರೆಎಳೆ
ಏಗೈವುದು (ಏಗೂಪು) = ಏನು ಮಾಡುವುದು
ಏಡಿಸು = ಅಪಶಬ್ದನುಡಿ
ಏತ = ಮಟ್ಟಿ, ಯಾತ
ಏರಿ = ದಿನ್ನೆ (೨) ಒಡ್ಡು (೩) ಊರ್ಜಿತಾವಸ್ಥೆ
ಏವೆ = ಏನು ಮಾಡಲಿ
ಐದೆಳೆ = ಐದದಾಳಿ
ಒಕ್ಕಲಿತೆ = ಸೇವಕಿ
ಒಕ್ಕು = ಬಿಡು
ಒಗು = ಹೊರಚಲ್ಲು
ಒಚ್ಚತ = ಆನಂದ, ಪ್ರೀತಿ
ಒಟ್ಟಣ (ಒಟ್ಟಲು) = ಸಮೂಹ
ಒಡ್ಡ = ಪಣ್ಣ
ಒಡ್ಡು = ಸಮೂಹ
ಒಪ್ಪ = ರೂಪು
ಒಪ್ಪುಚ್ಚಿ = ಸ್ವಲ್ಪ, ತುಸು
ಒರೆಗಟ್ಟು = ಬಾಯಿಬಂಧಿಸು
ಒಳರು = ಶಕ್ತಿ
ಒಳವು = ಸಾಧ್ಯ
ಒಳು = ಸುಂದರ
ಓಗರ = ಅನ್ನ
ಓಜುಗಟ್ಟಿಗೆ = ಚಾಬೂಕ
ಓಜೆ = ನಿಯಮ, ರೀತಿ, ಕ್ರಮ,
ಓಡು = ಮಣ್ಣಿನ ಗಡಿಗೆ (೨) ಹುರಿಯುವ ಹಂಚು
ಓತ = ವಶಗತವಾದ
ಓತು = ಚನ್ನಾಗಿ
ಓಲಾಡು = ತೂಗಾಡು
ಓಲೈಸು = ಸೇವಿಸು
ಓವು = ಕಾಪಾಡು
ಕಕ್ಕುಲತೆ = ಆಶೆ, ಪ್ರೀತಿ
ಕಚ್ಚುಟ = ಲಂಗೋಟಿ
ಕಟ್ಟಳೆ = ತೂಕದ ಗುಂಡು
ಕಡವರ = ಚಿನ್ನ
ಕಡಹ = ಕಡಿಯುವದು, ಮಂಥನ (೨) ಒಲೆ
ಕಡೆಗಣಿಸು = ತಪ್ಪಿಸಿಕೊಂಡು ಹೋಗು
ಕಡೆಗೋಡಿವರೆ = ಹೊರಸೂಸು
ಕಮ್ಮಟ = ಟಂಕಸಾಲೆ
ಕರ = ಅತಿಶಯ, ದೊಡ್ಡ
ಕರುಳು = ಪ್ರೀತಿ, ದಯೆ,
ಕರೋಟಮಾಲೆ = ರುಂಡಮಾಲೆ
ಕಲ = ಮೂಕ (೨) ಚಿಂತೆ
ಕಲ್ಮಷ = ಹೊಲಸು
ಕಲ್ಯಾಣ = ಲಗ್ನ
ಕವಳಿ = ಮೂರ್ಛೆ
ಕವಳಿಕೆ = ಕಷ್ಟ (೨) ತಲೆ ಬುರುಡಿ
ಕವಿಲೆ = ಆಕಳು
ಕಳ = ರಣರಂಗ
ಕಳೆ = ತೆಗೆದುಕೊಳ್ಳು
ಕಳ್ಪದಮ್ಮ = ಖೊಟ್ಟಿನಾಣ್ಯ
ಕಂಕಾಳ = ಬೆನ್ನಿನ ಎಲುಬು
ಕಂಡೆಯ = ಒಂದುಬಗೆಯ ಕತ್ತಿ (೨) ತೀವ್ರತೆ, ದೊಡ್ಡಪ್ರಮಾಣ
ಕಂಥೆ = ರಗಟೆ
ಕಂಪಲು = ಗಡಿಗೆ

ಕಂಪ = ಸುವಾಸನೆ
ಕಂಪಣಿಗ = ಕಾವಲುಗಾರ, ಆಳು
ಕಂಪಲ (ಕಂಪಣ) = ದೇಶ
ಕಾಕು = ಕೀಳು
ಕಾಹು = ಸಂರಕ್ಷಣೆ
ಕಾಳಿಕೆ = ಕಪ್ಪು, (೨) ದೋಷ
ಕಿಗ್ಗಡಲ = ಸಣ್ಣ ಸಮುದ್ರ
ಕಿಲ್ಬಿಷ = ಹೊಲಸು, ಪಾಪ, ರೋಗ
ಕ್ರಿ = ಕ್ರಿಯೆ, ಕಾರ್ಯ
ಕೀಸು = ಗೀಚು, ತಿಕ್ಕು
ಕುಚಿತ = ಕೀಳ
ಕುತ್ತು = ಹೊಡೆ (೨) ಕೆಳಗೆ ಮಾಡು
ಕುಧರ = ದಿನ್ನೆ (ಮಣ್ಣಿನಗೋಡೆ)
ಕುಪ್ಪಳಿಸು = ನೆಲಕ್ಕೆ ಬೀಳು
ಕುರುಕು = ತಿನ್ನು
ಕುಲಜ = ಹೆಚ್ಚಿನ ಕುಲದವ
ಕುಲಿಶ = ವಜ್ರದ ಮೊಳೆ
ಕುಳಿ = ತಗ್ಗು
ಕುಂಡಲಿಗ = ಪಾತರಗಿತ್ತಿಯ ಹುಳು
ಕೂಪ = ಪ್ರೀತಿಸುವವ, ಪ್ರಿಯಕರ
ಕೂರ್ = ಪ್ರೀತಿಸು
ಕೂಸು = ಕನ್ನಿಕೆ
ಕೆಚ್ಚು = ಬಲಿಷ್ಠವಾಗು (೨) ಸೊಕ್ಕು (೩) ಗಂಟು
ಕಡೆ = ನಾಶವಾಗು
ಕೆಡೆಮೆಟ್ಟು = ರಭಸದಿಂದ ಮುಂದೆ ಹೋಗು
ಕೆನ್ನೆ = ಗಲ್ಲ
ಕೆವ್ಮನೆ = ನಿರರ್ಥಕವಾಗಿ
ಕೆಯಿ = ಹೊಲ
ಕೆರಳಿಕೆ = ಸಿಟ್ಟು
ಕೆಳೆ (ಕೆಳೆಯ) = ಸ್ನೇಹಿತ
ಕೆಂಚ = ಕೆಂಪು ವರ್ಣದವ
ಕೇತ = ತೊಂದರೆಪಡಿಸುವವ
ಕೈವಾರ = ಅಧೀನ
ಕೊಂತ = ಈಟಿ
ಕೊನರು = ಮೊಳಕೆ ಒಡೆ
ಕೊಳಗುಳ = ರಣರಂಗ
ಕೋಟಲೆ = ತೊಂದರೆ
ಕೋಡಂಗಿ = ವಿದೂಷಕ
ಕೋಳಾಟ = ಕಸೆದುಕೊಳ್ಳುವದು (೨) ದರೋಡೆ
ಕೌಳುಕೋಲು = ದಾಂಡಪಟ್ಟಿ
ಗಡಣ = ಸಮೂಹ
ಗರ = ಪಿಶಾಚಿ
ಗರಳ = ವಿಷ
ಗರುಡಿ = ವ್ಯಾಯಾಮಶಾಲೆ (೨) ಶಸ್ತ್ರ ಶಾಲೆ
ಗರುವತನ = ಶ್ರೇಷ್ಠತ್ವ
ಗಳಹು = ಬಹು ಭೂಷಣ ಮಾಡು
ಗ್ರಹ = ಭೂತ
ಗಂಜಳ = ಹೊಲಸು
ಗಂಡುಗೆದರು = ರಭಸನನ್ನು ತೋರು
ಗಾಡಿಗ = ಜಗಲಿಯ ಮೇಲಿನ ಭೂತ
ಗಾರುಡ = ಮಂತ್ರವಿದ್ಯೆ, ಕಣ್ಣುಕಟ್ಟು
ಗಾರ್ದಭ = ಕತ್ತೆ
ಗಾವಿಲ = ಹಳ್ಳಿಯ ಮನುಷ್ಯ
ಗಿಣಿಲು = ಗಿಂಡಿ
ಗುಡ್ಡ = ಶಿಷ್ಯ

ಗುಡಿ = ಡೇರೆ (೨) ನಿಶಾನಿ
ಗುಡಿಗಟ್ಟು = ನಿಶಾನಿಯನ್ನು ಏರಿಸು (೨) ಆನಂದಪಡು
ಗುಮ್ಮಡಿ=ಮೊಲೆ ಮೂಗು ಕೊಯಿಸಿಕೊಂಡಂಥ ಜೋಗಿಣಿ
ಗುಳಿ = ತಗ್ಗು
ಗುಳ್ಳೆ = ಒಂದು ಮೀನಿನ ಜಾತಿ
ಗುಂಡ = ಸೇವಕ
ಗುಂಪ = ನಿರ್ಮಲತ್ವ
ಗುಂಪಿಸು = ಹಿಂಜರಿ
ಗುಂಭಿತ = ಸೊಕ್ಕಿನ
ಗೂಡು = ಮನೆ
ಗೊತ್ತು = ಗುರುತು (೨) ನೇಮ (೩) ಮನೆ
ಗೊರಚೆ = ಆವೆ
ಗೋಪ = ದನಕಾಯುವವ
ಗೋವಳ = ದನಕಾಯುವವ
ಚಮ್ಮಾವುಗೆ = ಮಚ್ಚೆಯ ಜೋಡು
ಚಲ್ಲಣ = ಚಣ್ಣ
ಚಾಗು = ಸ್ಥಿತಿ
ಚಾಂಗು = ಸುಂದರ
ಚಿತ್ರರುಟ್ಟೆ = ಒಂದುತರದ ಕಾಯಿ ಇದರಲ್ಲಿ ೩ ಬೀಜಗಳ ಹೊರ್ತು ಏನೂ ತಿರುಳು ಇರುವದಿಲ್ಲ
ಚಿನ್ನಗೈಕ = ಅಕ್ಕಸಾಲಿಗ
ಚುಳುಕು = ಸೂಕ್ಷ್ಮ
ಚೋದ್ಯ = ಆಶ್ಚರ್ಯ
ಚೋಹ = ಸೋಗು, ವಸ್ತ್ರ, ವೇಷ
ಜಲಗರ = ಮಣ್ಣಿನಿಂದ ಸೋಸಿ ತೆಗೆದ ಬಂಗಾರ
ಜವ = ಯಮ
ಜಂಘೆ = ಕಣಕಾಲು
ಜಾತವೇದಿ = ಅಗ್ನಿ
ಜೀವಾಳ = ಚೈತನ್ಯ ಕೊಡುವಂಥಾದ್ದು
ಜುಗ = ೪ ಯುಗಗಳು ೧೮ ವೇಳೆ ತಿರುಗಿ ಬಂದಲ್ಲಿ ಒಂದು ಜುಗ
ಜೂಬು = ಕೋರೆಹುಳು
ಜೂಗೈಸು = ಸಿದ್ಧಪಡಿಸು, ಸರಿಮಾಡು
ಜೋಡ = ಮತ್ತೊಬ್ಬ
ಝುಂಕೆ = ಬೆದರಿಕೆ
ಟೊಣೆ = ಸುಳ್ಳು ಹೇಳು, ಠಕ್ಕಿಸು
ಡಳುಹು = ಬೂಟಾಟಿಕೆ
ಡಿಂಗರಿಗ = ಸೇವಕ
ಡಿಂಬು = ಹಕ್ಕೆಯಲ್ಲಿಯ ಭೂತ
ಡೋವಿಗೆ = ತಲೆಬುರುಡಿ
ತಗರ = ತುಡುಗ (೨) ಅಯೋಗ್ಯವಾದದ್ದು (೩) ಟಗರು
ತಗಹು = ಪ್ರತಿಬಂಧ (೨) ತೊಂದರೆ
ತಗು = ಯೋಗ್ಯವಾಗು, ಸರಿಮಾಡು
ತಡೆಗೆಡಹು = ಅಡ್ಡಹಾಕು
ತಣೆ = ತೃಪ್ತಿಹೊಂದು
ತತಿ = ಸಮೂಹ
ತದ್ದಿನ = ಮೃತತಿಥಿ, ಶ್ರಾದ್ಧ
ತನಿ = ಸ್ವಾದವುಳ್ಳ
ತಮಂಥ = ಕಗ್ಗತ್ತಲೆ
ತರಗು = ಒಣಗಿದ
ತರಸಲ್ಲು = ಒಳಗುಮಾಡು
ತರೆಯ=ಒಂದು ಬಗೆಯ ಮುಳ್ಳಿನಗಿಡ

ತರ್ಕೈಸು=ಅಪ್ಪಿಕೊಳ್ಳು (೨) ವ್ಯವಸ್ಥೆಯಿಂದ ಇಡು
ತವನಿಧಿ = ಧನರಾಶಿ (೨) ಪುಣ್ಯ
ತವರಾಜ = ಸಕ್ಕರೆ (೨) ಅಮೃತ
ತಾಗು = ನಿರೋಧ, ಸಂಕಟ
ತಾಳ = ತಾಲವ್ಯ, ಅಂಗುಳ
ತಾಂಡು = ಗುಂಪು
ತಿಗುರು = ಲೇಪನ
ತಿಟ್ಟನೆ = ಸುಮ್ಮನೆ
ತಿಂಥಿಣಿ = ಸಮೂಹ
ತೀವು = ತುಂಬು
ತುಯ್ಯಲು = ಪಾಯಸ
ತುಂಬಿ = ಗುಂಗೀಹುಳ
ತೂರ್ಯ (ತುರೀಯ) = ಸಂತೋಷ, ಪರಮಸುಖ
ತೆತ್ತಿಗ = ಹಿತಸ್ಥ
ತೆತ್ತು = ಹೊಣೆ (೨) ತೆಗೆದುಕೊಳ್ಳು
ತೆರಹು = ಸ್ಥಳ (೨) ಬರಿದಾದಸ್ಥಿತಿ (೩) ವೇಳೆ
ತೆರು = ಕೊಡು
ತೆರೆ = ನಿರಿಗೆ
ತೊಡರು = ಸರಪಳಿ (೨) ಪದಕ (೩) ಆಭರಣ(೪) ಬೇಡಿ(೫) ಮೇಲೆ ಬಂದು ಬೀಳು
ತೊಡಿಗೆ = ಆಭರಣ
ತೊಢೆಹ = ಮೇಲೆ ಹಚ್ಚುವದು (೨) ಗಿಲೀಟು
ತೊರೆ = ನದಿ
ದಕ್ಕಿ = ಒಡವೆ

ದಡಿ = ದೊಣ್ಣೆ
ದಮ್ಮಯ್ಯ = ಔದರ್ಯವುಳ್ಳ ಯಜಮಾನ
ದರದುರ = ಶಂಕೆ
ದಂಡೆ = ಕಸರತ್ತು
ದಂದುಗ = ಶ್ರಮ
ದಾಸೋಹ = ದಾಸಭಾವದಿಂದ ಆಚರಿಸುವದು
ದಿನಕರ = ಸೂರ್ಯ
ದಿಬ್ಯ = ದಿವ್ಯ (೨) ಶ್ರೇಷ್ಠವಾದ
ದಿಮ್ಮಿತ್ತು = ಗಡುತರ, ದೊಡ್ಡ
ದಿಂಡೆ=ದುಂಡಾದ ಕಲ್ಲು(೨) ಅಜ್ಞಾನಿ
ದೀವ = ಹೊಲದಲ್ಲಿ ಇಡುವ ಬೆದರಿಕೆ
ದೆಸೆ = ಒಳಗು
ದೇಸಿವಡೆ = ಶ್ರೇಷ್ಠವಾಗು
ದೇಹಾರ = ಕೆಟ್ಟಗತಿ (೨) ಆಡಂಬರ
ಧಾತು = ಧೈರ್ಯ, ಗಟ್ಟಿತನ
ಧಾರೆವಟ್ಟಲು = ಸೋಸುವ ಪಾತ್ರೆ
ಧಾವತಿ = ಶ್ರಮ
ಧೃತಿ = ಧೈರ್ಯ
ನಚ್ಚು = ನಂಬು
ನಟ್ಟ = ಮಧ್ಯ
ನಟ್ಟುವ = ಕುಣಿಯುವವ
ನನೆ = ಮೊಗ್ಗು
ನನ್ನಿ = ಪ್ರೀತಿ
ನಲಿ = ಆನಂದಪಡು
ನಾಣು = ನಾಚಿಕೆ
ನಾಯಿದ = ನಾವಲಿಗ
ನಾರಿವಾಣ = ಸುಣ್ಣಾಸಾದ ಪಾತ್ರೆ

ನಿಗಳ = ಬೇಡಿ
ನಿಚ್ಚ = ನಿತ್ಯ
ನಿಚ್ಚನಿಚ್ಚ = ಯಾವಾಗಲೂ
ನಿಧಾನ = ದ್ರವ್ಯ ಸಂಚಯ
ನಿಧಿ = ದ್ರವ್ಯ
ನಿಮಿರ್ = ಸೆಟೆ
ನಿಯತ = ಬಿಗಿತವಾದ, ಬಿಗಿಹಿಡಿದ
ನಿರಂಜನ = ಶುದ್ಧವಾದ
ನಿರಾಳ = ಅಲುಗಾಡದ ಸ್ಥಿತಿ, ಸಮಾಧಾನ ಸ್ಥಿತಿ (೨) ಸ್ವಚ್ಛ
ನಿರಿ = ವ್ಯವಸ್ಥೆ (೨) ಪದಾರ್ಥಗಳನ್ನು ಒಟ್ಟಿಗೆ ಸರಿಯಾಗಿ ಸೇರಿಸುವದು
ನಿಲುಕಡೆ = ಸ್ಥಿತಿ
ನಿವಾರಿಸು = ಹಿಂದಕ್ಕಟ್ಟು (೨) ಕಾಯು
ನಿಷ್ಪತ್ತಿ = ತಿಳಿದುಕೊಳ್ಳುವದು (೨) ಜ್ಞಾನ (೩) ತೋರಿಕೆ
ನಿಳೆ = ಪಾತಾಳ
ನಿಃಕರಿಸು = ನಷ್ಟಮಾಡು
ನಿಃಕಲ = ನಿರಾಕಾರತತ್ವ
ನೃ = ಮನುಷ್ಯ
ನೆರೆ = ಕೂಡು (೨) ವಿಶೇಷವಾಗಿ
ನೇಣು = ಹಗ್ಗ
ನೋನು (ನೂನು) = ಬೇಡಿಕೊಳ್ಳು (೨) ಹರಿಕೆಹೊರು (೩) ಪೂಜೆಮಾಡು
ನೋಂಪಿ = ಹರಿಕೆ (೨) ಪೂಜೆ
ಪಚಾರಿಸು = ಸಿಟ್ಟುಮಾಡು ಹೀಯಾಳಿಸು
ಪಟ್ಟಿಯ = ಕತ್ತಿ
ಪಡಿ = ದಾನಕೊಟ್ಟಂಥಾದ್ದು
ಪತ್ತಿಗ = ಸ್ನೇಹಿತ
ಪನ್ನಗ = ಸರ್ಪ
ಪರ = ಮಿಗಿರಿದ, ಶ್ರೇಷ್ಠ
ಪರದಾರ = ಪರಸ್ತ್ರೀ ಹಾದರ
ಪರಿಣಮಿಸು = ಫಲವಾಗು (೨) ಆನಂದಪಡು
ಪರಿಣಾಮ = ಅಂತ್ಯ (೨) ಸಂತೋಷ
ಪರಿಭವ = ಅಪಮಾನ
ಪಲ್ಲಟ = ಬದಲು, ಭೇದ
ಪಸಾರ = ಒಡಿವೆ (೨) ಮಾರತಕ್ಕ ಪದಾರ್ಥ
ಪಂಗುಳ = ಹೆಳವ
ಪ್ರತಿ = ಎರಡು, ಇದಿರು, ವಿರುದ್ಧ, ಸಮವಾದ, ಜೋಡು
ಪಾತೆ = ಮಡಿ
ಪಾಯು = ಶಿಶ್ನ
ಪುಟವಿಡು = ಬೆಂಕಿಯಲ್ಲಿ ಹಾಕು
ಪುರುಳು = ಯೋಗ್ಯವಾದದ್ದು, ಶಕ್ತಿ, ಸಾರ
ಪುಳಕ = ರೋಮಾಂಚ
ಪೂರಾಯ = ಸಂಪೂರ್ಣ
ಪೆಂಪು = ಸೌಂದರ್ಯ
ಪೊಣ್ಮು = ಏಳು, ಹೊರಬೀಳು
ಪೊಲ್ಲುಗ = ಸರಿಯಾದ ವರ್ತನೆ ಇಲ್ಲದವ
ಬಗಿ = ಹರಿ, ಅಗಿ (೨) ಇಭ್ಭಾಗಮಾಡು
ಬಗೆ = ಇಚ್ಛಿಸು

ಬಚ್ಚ = ತೆರಿದ
ಬಚ್ಚಣಿ=ಸಣ್ಣಹುಡುಗ (೨) ಅಜ್ಞಾನಿ
ಬಜಾವಣೆ = ಬಾರಿಸುವುದು
ಬಡಿವಡೆ = ಹೊಡೆಯಲ್ಪಡು (೨) ಪ್ರಯತ್ನಿಸು
ಬಣಬೆ = ಬಣಿವೆ
ಬಯಕೆ = ಶೀವು
ಬರಬರ = ತೀವ್ರವಾಗಿ
ಬರು = ಬರಿದಾದ
ಬಲ್ಲಹ = ಜ್ಞಾನಿ
ಬಲ್ಲಿತ್ತು = ಗಟ್ಟಿಯಾದ
ಬಲ್ಲಿದ = ಶಕ್ತಿಯುಳ್ಳವ
ಬವರ = ಯುದ್ಧ
ಬಸುಗು = ದ್ರವವು ಹೊರಚಲ್ಲು
ಬಳ್ಳ = ಸೇರು (೨) ಮಾಪು
ಬಳಿ = ಒರಿಸು (೨) ವಂಶ (೩) ದಾನ
ಬಳಿವಳಿ = ಹಾದಿ (೨) ವಂಶ
ಒಳುವೆ = ಬಹಳ
ಬಳ್ಳು = ನರಿ
ಬಂಟ = ಸೈನಿಕ
ಬಂಡು = ಪರಾಗ
ಬಾಗಿನ( = ಬಾಯಿನ) = ಕಾಣಿಕೆ
ಬಾಣಸ = ಅಡಿಗೆ
ಬಾದುಮ = ಗೊಂಬೆ
ಬಾರ = ತೊಗಲಿನ ಪಟ್ಟಿ
ಬಾಳ = ಖಡ್ಗ
ಬಿದಿರು = ಸಿಡಿ
ಬಿದ್ದ = ಊಟ, ಔತಣ
ಬಿನ್ನಾಣ = ವಿಜ್ಞಾನ, ಜ್ಞಾನ (೨) ಜಾಣತನ (೩) ರೀತಿ (೪) ಯುಕ್ತಿ
ಬಿಮ್ಮು = ಹೆಚ್ಚುವಿಕೆ (೨) ಸೊಕ್ಕು
ಬಿಯ್ಯ = (ಬೀಯ) = ಅಕ್ಕಿ, ಊಟ
ಬಿರಿ = ಸೀಳು, ಒಡೆ
ಬಿಲಿ = ಕೊಳ್ಳು
ಬೀಗು = ಉಬ್ಬು, ಗರ್ವಿಸು
ಬೀಯ್ಯವಾಗು = ವ್ಯಯವಾಗು, ನಷ್ಟವಾಗು
ಬೀಸರ = ನಾಶ (೨) ಬೇಸರ
ಬೀಸು = ಒಗೆ, ತೊಳೆ
ಬೀಳುಡಿಗೆ = ಉಟ್ಟು ತೊಟ್ಟು ಬಿಟ್ಟಂಥ ಉಡಿಗೆ
ಬೆಚ್ಚು = ಬೆರಿಸು (೨) ಅಂಜು (೩) ಬೆಸಿಗೆ
ಬೆಡಗು = ಸೌಂದರ್ಯ
ಬೆದಕು = ಹುಡುಕು
ಬೆನಕ = ವಿನಾಯಕ
ಬೆರಣೆ = ಕುಳ್ಳು
ಬೆರೆ = ಕೂಡು
ಬೆವಹಾರ = ವ್ಯವಹಾರ, ವ್ಯಾಪಾರ
ಬೆಸ = ಆಜ್ಞೆ (೨) ಅಸಮ
ಬೆಸಗೊಳ್ಳು = ಪ್ರಶ್ನೆಮಾಡು
ಬೆಸನ ವ್ಯಸನ (೨) ಮೋಹ
ಬೆಳಸು = ಬೆಳೆ
ಬೆಳ್ಪಗೆ = ಬಿಳಿದಾದ ವರ್ಣ
ಬೆಂತರ = ಪಿಶಾಚಿ (೨) ಹೊರಗಿದ್ದ ಸ್ಥಿತಿ
ಬೇಗೆ = ಕಾವು
ಬೇಟ = ಆಶೆ (೨) ವಿರಹ (೩) ರತಿಸುಖ
ಬೈಚಿಡು = ಮುಚ್ಚು

ಬೊಜಗ = ವಿಟಪುರುಷ
ಬೊಬ್ಬುಳಿಕೆ = ಗುಳ್ಳಿ
ಬೊಲ್ಲ = ಮುಖ ಬಿಳಿದಾದ ಕುದುರೆ
ಬೊಳ್ಳಿ = ಬಢಾಯಿ
ಬೋಡ = ಹಲ್ಲಿಲ್ಲದವ
ಬೋಯಿತಿ = ಅಂಬಿಗರವಳು
ಬೋರಿಗೆ (ಬೊಹರಿಗೆ) = ಕಸಬರಿಗೆ
ಭಂಗ = ಅಪಮಾನ
ಭಂಗಿತ = ಮಾನಗೇಡಿ
ಭಂಡ = ನಾಚಿಕಿಲ್ಲದವ (೨) ಅಪಮಾನ (೩) ಚೇಷ್ಟೆ (೪) ಪಾತ್ರೆ
ಭಾಜನ = ಪಾತ್ರೆ
ಭಾಂಡ = ಪದಾರ್ಥಗಳನ್ನು ಇಡುವ ಚೀಲ
ಭಿತ್ತಿ = ಗೋಡೆ
ಭೂತಿಗ = ದೆವ್ವ ಹಡಿದವ
ಮಚ್ಚರ = ಮತ್ಸರ
ಮಡಗು = ಇಡು (೨) ಮುಚ್ಚಿಡು
ಮಡಿಲು = ಉಡಿ
ಮಡುಹು = ಕೊಲ್ಲು
ಮಣಿಹ = ಅಧಿಕಾರ (೨)ಕಾರ್ಯ
ಮತ್ತರ = ಭೂಮಿಯ ಒಂದು ಅಳತೆ
ಮದ್ದು = ಔಷದ
ಮನ್ನಣೆ = ಮಾನ
ಮರುಜೀವಣಿ=ಸಂಜೀವನೀ ಬೇರು
ಮರುದೊತ್ತು = ತೊತ್ತಿನ ತೊತ್ತು
ಮರುಳು = ಭೂತ
ಮರೆ = ಆಶ್ರಯ
ಮಸಕ=ಇಂದ್ರಿಯ ವಿಕಾರ (೨) ಶಿಟ್ಟು
ಮಹಳ = ಶ್ರಾದ್ಧ

ಮಳಲೊಟ್ಟೆ = ಉಸಕಿನ ಗುಂಪಿ
ಮಂಜರ = ಬೆಕ್ಕು
ಮಂಡೆ = ತಲೆ
ಮಾಗಡ = ಮಾಘಮಾಸದ ಸ್ನಾನ
ಮಾಟ = ಕ್ರಿಯೆ
ಮಾಡ = ದೊಡ್ಡಮನೆ
ಮಾಣು = ಬಿಡು (೨) ಬೇಡ
ಮಾತಂಗಿ = ಹೊಲತಿ
ಮಾನಿಸ = ಮನುಷ್ಯ
ಮಾರಾಂಕ = ಇದಿರಾಳಿ, ಶತ್ರು
ಮಾರು = ಪ್ರತಿ, ಬದಲು
ಮಿಟ್ಟೆ = ದಿನ್ನೆ
ಮಿಡಿ = ಹಿಮ್ಮಡ
ಮೀಯು = ಸ್ನಾನಮಾಡು
ಮುಕುಳಿತ = ಅರ್ಧತೆರೆದ
ಮುಡುಹು = ಭುಜ
ಮುರುಟು = ಮುರಿಗಿಯಾಗು
ಮುಂಡಿಗೆ = ಕಂಬ
ಮೂಕೊರಿತೆ = ಮೂಗುಕೊಯ್ಸಿಲ್ಪಟ್ಟವಳು
ಮೂಗುವಡು = ಮಾತನಾಡದಿರು
ಮೂದಲೆ = ಹೀಯಾಳಿಸು
ಮೂಲಿಗ = (೧) ಪೂರ್ವಜ (೨) ಕಾರಣಿಕ
ಮೆಲು = ತಿನ್ನು
ಮೇಳಾಪ = ಸಮೂಹ
ಮೈದೆಗೆ = ಅದೃಶ್ಯನಾಗು
ಮೈಸಿರಿ = ಶೃಂಗಾರ
ಮೊನೆ = ಹದನ (೨) ತುದಿ (೩) ಕಾಳಗ

ಮೋಟ=ಮೋಂಡ ಅವಯವಗಳುಳ್ಳವ
ಮೌಳಿ = ತುರಾಯಿ
ಯಲವದಮರ = ಬೂರಲಗಿಡ
ರಜ್ಜೆ = ಕೀಳು ನುಡಿ (೨) ಭಂಡಸ್ತ್ರೀ
ರಸ = ಪಾರಜ
ರಾಗ = ಪ್ರೀತಿ
ರಾಯರಾಜ = ದೇವೇಂದ್ರ
ರಾಯರಾಜಗುರು = ಪರಮೇಶ್ವರ
ರಾವಣ = ಔಡಲ
ರೂಢೀಶ್ವರ = ಪರಮಾತ್ಮ
ರೂಹು = ರೂಪು
ಲಾಂಛನ = ಚಿನ್ಹ, ವೇಷ
ಲೀಯ = ಮನಸ್ಸು ಒಳಕೊಳ್ಳುವದು
ಲೆಂಕ = ಸೇವಕ
ಲೆಂಕತನ = ಭೃತ್ಯತ್ವ
ಲೆಂಗಿ = ಸೇವಕ
ಲೋಗರು = ಜನರು
ವರ್ತಿಸು = ತಿರುಗಿಸು
ವರ್ಮ = ಮರ್ಮ
ವಾಮಕ್ಷೇಮ = ಸುಖದುಃಖ
ವಾಯ = ಸುಳ್ಳು (೨) ಕಾಪಟ್ಯ
ವಾರಿಕಲ್ಲು = ಆಣೇಕಲ್ಲು
ವಾಳಿಯಾವು=ಗೊಡ್ಡಾಕಳು
ವಿಕಳ = ಮನಸ್ಸಿನ ಉದ್ವೇಗ
ವಿಗರ್ಭಣೆ = ಶಿಟ್ಟು (೨) ನಿಂದೆ
ವಿನಿಯೋಗ = ಉದ್ಯೋಗ
ವಿಧಾವಿಸಿ = ವಿಧಾನೋಕ್ತವಾಗಿ
ವಿಯತ್ = ಆಕಾಶ
ವಿಂಧ್ಯ = ಪರ್ವತ

ವೆಗ್ಗಳ = ಹೆಚ್ಚು
ವೈಶಿಕ = ಕಾಪಟ್ಯ
ವ್ಯಾಪ್ತಿ = ವಿಸ್ತಾರ
ವ್ಯಾಳೇಶ = ಮಹಾಶೇಷ
ವ್ಯೋಮ = ಆಕಾಶ
ಶ್ರವ ಶ್ರಮ
ಶಿವದಾಸ = ಮಜ್ಜಿಗೆ
ಶ್ರವ (ಶ್ರಮ) = ಅಭ್ಯಾಸ
ಶ್ವಪಚ = ಹೊಲೆಯ
ಸಕಲ = ಸಗುಣ ತತ್ವವುಳ್ಳ
ಸಕೃತ್ = ಒಮ್ಮೆ
ಸಟ್ಟುಗ = ಹುಟ್ಟು
ಸನ್ನಿಹಿತ = ಸಮೀಪ (೨) ಭಾವ ಲಿಂಗಕ್ಕೆ ಸಂಬಂಧಿಸಿದ
ಸಮನಿಸು = ಒದಗು (೨) ಒಪ್ಪಿಗೆಯಾಗು
ಸಮಯ = ಕೂಟ, ಗುಂಪು, ನಿಯಮ ಸಂಸ್ಥೆ, ಭೇದ, ಸಮಾಜ, ವರ್ಗ
ಸಮವೇಧಿಸು = ಒಳಸೇರು
ಸಮ್ಯಕ್ = ಯೋಗ್ಯ
ಸಮೀರಣ = ವಾಯು
ಸರವೆ = ಹಗ್ಗ, ಸರ
ಸವಣ = ಜೈನ ಸನ್ಯಾಸಿ
ಸ್ವ = ಸ್ವರ್ಗ
ಸಂಚ = ಸಮೂಹ
ಸಂಪುಟ = ಕೂಡಿಕೊಳ್ಳುವದು (೨) ಸಂಬಂಧ (೩) ಪೆಟ್ಟಿಗೆ
ಸಾರಾಯ = ಮರ್ಮಜ್ಞ
ಸಾರಿ = ನಿಶ್ಚಯವಾಗಿ
ಸಾರೆ = ಸಮೀಪ

ಸಾಲಿಗ = ನೇಕಾರ
ಸಿನೆ = ಶೂನ್ಯ
ಸಿಕ್ಕು = ತೊಡಕು
ಸಿಂಬುಕ = ಗುಲಾಮ
ಸೀಯು = ಸುಡು
ಸುಯಿಧಾನ = ಏಕಾಗ್ರತೆ (೨) ಶಾಂತಿ (೩) ಪದಾರ್ಥ
ಸುರಿಗೆ = ಕತ್ತಿ
ಸುಂಕ = ಕರ
ಸೂಕರ = ಹಂದಿ
ಸೂನೆಗಾರ = ಕಟುಕ
ಸೊಡರು = ದೀಪ, ಬೆಳಕು
ಸೊಣಗ = ನಾಯಿ
ಸೊಮ್ಮು = ಒಡವೆ ದ್ರವ್ಯ
ಸೊಲ್ಲು = ಧ್ವನಿ
ಸೋರೆ = ಕುಂಬಳಕಾಯಿ
ಸೋಹು (ಸೋವು) = ಗುರ್ತು
ಹಗರಣ = ಚಕ್ಕಂದ (೨) ಆನಂದ
ಹತ್ತೆ = ಸಮೀಪ
ಹದಿರು = ಬೊಗಳು, ಒದರು
ಹದುಳ = ಕ್ಷೇಮ
ಹದುಳಿಗ = ಸುಖವುಳ್ಳವ
ಹನ್ನಿಬ್ಬರು = ಹನ್ನೆರಡು
ಹಮ್ಮು = ನಾನೆಂಬಭಾವ (೨) ಸೊಕ್ಕು
ಹರದ = ವ್ಯಾಪಾರಿ
ಹರಿ = ಸಿಂಹ (೨) ಚಲನೆ (೩) ಮುಂದುವರೆ
ಹರಿವು = ಸಂಚಾರ
ಹರೆ = ನಗಾರಿ

ಹವಿ = ಧ್ಯಾನ, ಹಾಲು
ಹಳೆಯ = ಸೇವಕ
ಹಂಗು = ಋಣವಲ್ಲಿರುವದು (೨) ಪರ ಸ್ವರಾವಲಂಬನ
ಹಂಜರ = ಪಂಜರ
ಹಾಸು = ಆರಿವೆ (೨) ಹಾಸಿಕೆ (೩) ಶ್ರಮಪಡು (೪) ಸರಾಳಿ
ಹಿದಿರೆ = ಬಣವೆ
ಹಿಳಿ = ಹಿಂಡು (೨) ಮುರಿ
ಹುದುವಾಳಿಗೆ = ಕೂಡ ಇರುವ ಸ್ಥಿತಿ
ಹುಯ್ಯಲು = ರೋದನ
ಹುಳ್ಳಿ = ಉರಿಯುವ ಕಟ್ಟಿಗೆ
ಹೂಸು = ಒರಿಸು, ಹಚ್ಚು
ಹೆಮ್ದೊರೆ = ದೊಡ್ಡಹೊಳೆ
ಹೆರೆಹಿಂಗು = ಹಿಂದಕ್ಕೆ ಸರಿ (೨) ಒಳ ಸೇರು
ಹೇರು = ಒಜ್ಜೆ
ಹೇವ = ಆಸಹ್ಯತನ
ಹೇಳಿಗೆ = ಬುಟ್ಟಿ (೨) ಹಾವಿನಬುಟ್ಟಿ
ಹೊಡೆವಡು = ನಮಸ್ಕಾರ ಮಾಡು
ಹೊದ್ದು = ಸಂಬಂಧಿಸು (೨) ಸಂಬಂಧ
ಹೊನಲು = ಹಳ್ಳ
ಹೊರಹಂಜಿ = ಹೊರಗಿನ ವೇಷ
ಹೊರಹೊಮ್ಮು = ಹೊರಕ್ಕೆಬರು
ಹೊರೆ = ಕಾಪಾಡು (೨) ಸಾಮೀಪ್ಯ (೩) ಭಾರವಾದದ್ದು (೪) ತೊಂದರೆ (೫) ಪದರು
ಹೊಲಬು = ರೀತಿ, ಮಾರ್ಗ

# ಪರಿಶಿಷ್ಟ ೩.

## ಶುದ್ಧಾಶುದ್ಧ ಪತ್ರಿಕೆ.

| ಪುಟ | ಓಳಿ | ಅಶುದ್ಧ | ಶುದ್ಧ |
|---|---|---|---|
| ೭ | ೧೯ | ತರಸಲ್ಲು | ತರಿಸಲು |
| ೧೭ | ೨೦ | ಗರಿದೊರೆ | ಗರಿದೋರೆ |
| ೨೧ | ೧೦ | ಕುಚಿತ್ತಾಚಾರ | ಕುಚಿತಾಚಾರ |
| ೨೪ | ೧೪ | ಅಂದಡಿಕೆಗೆ | ಒಂದಡಿಕೆಗೆ |
| ೨೮ | ೧೧ | ಎಂತಯು? ಪೂರೈಸುವುದು | ಎಂತಯ್ಯಪೂರೈಸುವುದು? |
| ೩೪ | ೭ | ಉಂಡಿಗೆಯ | ಉಂಡಲಿಗೆಯ |
| ,, | ೧೨ | ರ್ವಜೀವ | ಸರ್ವಜೀವ |
| ,, | ೧೪ | ಹೆಸರಾಯಿತ್ತ | ಹೆಸರಾಯಿತ್ತಲ್ಲದೆ |
| ೩೬ | ೪ | ಭಂಡವ | ಭಾಂಡನ |
| ,, | ೬ | ಭಂಡವನು | ಭಂಡನ |
| ,, | ೧೦ | ಪ್ರಮಾಣಿ | ಪ್ರಮಾಣು |
| ,, | ೧೯ | ಸುಮ್ಮಾನ | ಸುಮ್ಮನೆ |
| ೩೭ | ೪ | ತಥ್ಯಾನ | ತದ್ಯಾಸ |
| ೪೨ | ೧೫ | ಸಜ್ಜನವೆನ್ನಲಿಲ್ಲವಯ್ಯ | ಸಜ್ಜನವೆನ್ನಲ್ಲಿಲ್ಲ |
| ,, | ೧೬ | ಡಂಭ | ಡಂಭಕ |
| ೪೩ | ೧೧ | ನಾನಿಲ್ಲದ | ನೀನಿಲ್ಲದ |
| ,, | ೧೪ | ಕರುಣ | ಕರುಣಿಸಿ |
| ,, | ೧೫ | ರರ್ತಿಸಿ | ವರ್ತಿಸಿ |
| ೪೪ | ೩ | ಭವದಲ್ಲಿ | ಭಾವದಲ್ಲಿ |
| ೪೬ | ೮ | ಭಂಗಾರ | ಭಂಗಗಾರ |
| ೫೫ | ೭ | ಕೆಡದಂತೆ | ಕೆಡೆದಂತೆ |
| ,, | ೯ | ಕೆತ್ತಿಹವಯ್ಯ | ತೆತ್ತಿಹವಯ್ಯ |
| ೬೦ | ೧೭ | ಗೆಲವಲ್ಲದೆ | ಗೆಲಸವಲ್ಲದೆ |
| ೬೨ | ೬ | ಮಾನವನ | ಮಾನವನೇ |
| ೬೩ | ೨೦ | ಲಿಂಗವಾಕ ದಾರಣ | ಲಿಂಗವಾದ ಕಾರಣ |

| ಪುಟ | ಓಳಿ | ಅಶುದ್ಧ | ಶುದ್ಧ |
|---|---|---|---|
| ೬೫ | ೨೭ | ಆಯಕಂತೆ ಹೊರಲು | ಆಕೆಂಗೆ ತೋರಲು |
| ೬೭ | ೧೨ | ಕೆಡೆಮೆಟ್ಟೆ | ಕೆಡೆಮೆಟ್ಟೆ |
| ೬೮ | ೨೬ | ಹಾರುವೆ, ಹಾರುವೆನವ್ವಾ | ಹಾರುವ ಹಾರುವನಪ್ಪೆ |
| ೭೦ | ೭ | ಹುಳಿ | ಹುಳ್ಳಿ |
| ೭೧ | ೪ | ಹುಸಿ | ಹೂಸಿ |
| ,, | ೧೮ | ತಂದೆ ತಾಯಿ ನೀನು | ತಂದೆ ನೀನು |
| ೭೩ | ೧೨ | ಒಜೆ | ಓಜೆ |
| ೭೪ | ೨೬ | ನಿಷ್ಠೈದೆ | ನೈಷ್ಠಿತೆ |
| ೭೯ | ೧೨ | ಭಾಂಡ | ಖಾಂಡ |
| ೮೦ | ೧ | ಐದೂದೆ | ಐದುದೆ |
| ,, | ೧ | ಐದೂದೆ | ಐದುದೆ |
| ,, | ೨ | ಐದೂದೆ | ಐದುದೆ |
| ,, | ೫ | ತಾಂಡವಗಳು | ತಾಂಡುಗಳು |
| ,, | ೧೮ | ಪ್ರಳಯವಾಹಂದು | ಪ್ರಳಯವಾದಂದು |
| ,, | ೧೯ | ಕಾಣೆನಿಂದು ಕಾಣೆ | ಕಾಣೆನಿಂದೂ ಕಾಣೆ |
| ೮೧ | ೧೭ | ಉಬ್ಬಿ | ಉಬ್ಬುಬ್ಬಿ |
| ೮೨ | ೧೩ | ಮಾಯ | ವಾಯು |
| ೮೩ | ೧ | ಬೆಕ್ಕು | ಚಕ್ಕು |
| ೮೪ | ೨೫ | ವೈಲಗೆ ಮೆಳವಾಡುತ್ತ | ವೈಲಾರಗೆ ಮೇಳವಾಡುತ್ತ |
| ೮೬ | ೨೪ | ಕೊಂದಾರೆಂದು | ಕೊಂದಿಹರೆಂದು |
| ೮೭ | ೨೭ | ಉದಮದ | ಉನ್ಮದ |
| ೮೮ | ೧ | ವಲಿಪ್ಪೆಯಯ್ಯ | ಲಿಪ್ಪರಯ್ಯ |
| ,, | ೨ | ತಂದಿಕ್ಕಿತ್ತೆ | ತಂದಿಕ್ಕ ಹೇಳಿತ್ತೆ |
| ೮೯ | ೨೧ | ಶೋತ್ರೋತ್ಕಟ | ಶೃತ್ಯೋತ್ಕಟ |
| ೯೧ | ೪ | ನೊಲಿಸಿ | ನೊಲಿಸಿದುದ |
| ೯೩ | ೩ | ಮಾಡಲಾಗದು | ಧರಿಸಲಾಗದು |
| ,, | ೩ | ಮಾಡಲಾಗದು | ಜಪಿಸಲಾಗದು |
| ,, | ೮ | ತಿಂಬವರೇನೆಂಬೆ | ತಿಂಬವರನೇನೆಂಬೆ |

| ಪುಟ | ಓಳಿ | ಅಶುದ್ಧ | ಶುದ್ಧ |
|---|---|---|---|
| ,, | ೨೧ | ಉಡುವ | ಉಣಿಸುವ |
| ,, | ೨೧ | ಜೋಡೆ | ಜೋಡು |
| ೯೮ | ೧೨ | ಆಗಡವ | ಅಗಡವ |
| ೧೦೦ | ೧೮ | ಜಿವರಟ್ಟ | ಜಿರೆದಟ್ಟ |
| ೧೦೧ | ೧೦ | ಬಸುಗುತ್ತ ಬಡುವಂತೆ | ಬಸುಗುತ್ತ ಬಾಲವ ಬಡಿವಂತೆ |
| ೧೦೩ | ೧ | ಕ್ರಿಯಾಕಾರವೇ | ಕ್ರಿಯಾಕಾಲವೇ |
| ೧೦೪ | ೪ | ಮೇಲೊಡ್ಡವಾಯಿತ್ತೆಂದೆ | ಮೇಲೊಡ್ಡಾಯಿತ್ತೆಂದು |
| ೧೦೫ | ೧೭ | ಮಚ್ಚುವ | ಮುಚ್ಚುವ |
| ೧೦೬ | ೨೩ | ಭಾಷೆಯಂ | ಭಾಷೆಯ |
| ,, | ೨೪ | ಕರೆದಡೋಎನಿಸಿವರೆ | ಕರೆವಡೋಸರಿಸಿವರೆ |
| ೧೦೭ | ೪ | ಖಂಡೆಯ | ಕಂಡೆಯ |
| ,, | ೮ | ಮೂರುಕೋಲ | ಮಾರುಗೋಲ |
| ೧೦೭ | ೮ | ಮೂರುಕೋಲ | ಮಾರುಗೋಲ |
| ,, | ೯ | ಕಳಗಿಂದ | ಕಳದಿಂದ |
| ,, | ೯ | ಕಡೆಗಳಕ್ಕೆ | ಕಡೆಗಳಕ್ಕೋ |
| | | ಓಡುವೆ | ಊಡಿಸುವೆ |
| ,, | ೧೧ | ಗಂಡುಸೇ | ಗಂಡುಗೂಸೇ |
| ,, | ೧೧ | ನಿನಗೊಬ್ಬಗೆಂದುಟ್ಟೆ | ಎನಗೊಬ್ಬ ಗಂಡನುಂಟೆಂದು ಗಂಡುಡಿಗೆಯನುಟ್ಟೆ |
| ೧೦೮ | ೯ | ಆರಂಭವ | ಆರಂಬವ |
| ೧೧೧ | ೨ | ಇದಿರಿತ್ತಿ | ಇದಿರೆದ್ದು |
| ೧೧೩ | ೨ | ಸಿರಿಯಕ್ಕನೆ | ಸಿರಿಯಕ್ಕನು |
| ,, | ೬ | ಮುಸುಕಿ | ಮುಸುಕಿಟ್ಟಂತೆ |
| ೧೧೫ | ೭ | ಒರೆಯಾವಿನ | ವಾಳಿಯಾವಿನ |
| ೧೧೬ | ೨೩ | ವಾಯ | ವಾಯು |
| ೧೧೭ | ೧೨ | ಪಾತಕ | ಪಾಕ |
| ,, | ೧೭ | ಪಾತಕ | ಪಾಕ |

| ಪುಟ | ಓಳಿ | ಅಶುದ್ಧ | ಶುದ್ಧ |
|---|---|---|---|
| ೧೧೮ | ೧೩ | ಒಪ್ಪುವ | ಒಪ್ಪುವ |
| ೧೧೯ | ೨೩ | ನುಡಿವುತ್ತಿದ್ದಾನೆ | ನಗುತ್ತಿದ್ದಾನೆ |
| ೧೨೦ | ೧೬ | ಕಾಯದಕರಣವ | ಕಾಯದ ಕಯ್ಯಲು ಕರಣವ |
| ,, | ೧೯ | ಆಳಿಯ | ಆಳಿಕೆ |
| ೧೨೩ | ೮ | ಒಡೆಇಕ್ಕದೆ | ಒರೆಯಹಾಕದೆ |
| ,, | ೧೭ | ಸುಮುಹೂರ್ತವಲ್ಲದೆ, | ಸುಮುಹೂರ್ತವಲಲ್ಲದೆ. |
| | | ಚಿತ್ತವೇದ್ಯವಾಗದು. | ಚಿತ್ತವೇದ್ಯವಾಗದು, |
| ,, | ೧೫ | ಕರುಣಕಲ್ಲದೆ, | ಕರುಣಕಲ್ಲದೆ. |
| ೧೨೪ | ೨೧ | ಅಟ್ಟೆಯಾಡಿತ್ತಲ್ಲಾ | ಅಟ್ಟೆಯಾಡಿತ್ತಲ್ಲಾ. |
| ೧೨೫ | ೪ | ಶಿವಾಚಾರವೆಂದರಿವ | ಶಿವಾಚಾರವೆಂದರಿಯುವ |
| ,, | ೨೨ | ಮನಪ್ರೇರಕನೆಂದು | ಮನಃಪ್ರೇರಕ ನಾ ನಿಮ್ಮ |
| ,, | ೨೪ | ಎಂದಿಪ್ಪೆನು ಪ್ರಭುವೇ | ಎಂದಿಪ್ಪೆನು ಪರಮ ಪ್ರಭುವೇ |
| ೧೨೬ | ೧೧ | ಆದರೆಂತನಬಹುದೆ? ಭಕ್ತಿರತಿಯ | ಆದರಂತೆನಬಹುದೆ ಭಕ್ತಿರತಿಯ ? |
| ೧೨೮ | ೫ | ಒಡ್ಡದಿರಯ್ಯ | ಒಡ್ಡಿರಯ್ಯ |
| ,, | ೨೩ | ಒಂದಳು | ಒಂದಗಳು |
| ೧೨೯ | ೬ | ಸಂಬಧ | ಸಂಬಂಧ |
| ೧೨೯ | ೭ | ಕೆಡಿಸಿತ್ತು. | ಕೆಡಿಸಿತ್ತು |
| ,, | ೭ | ಗುಣದಿಂದ | ಗುಣದಿಂದ. |
| ,, | ೨೪ | ನಿಲಸಾಲೆ | ನಿಲಸಾಲೆ ನೀಡುವರಿಲ್ಲ. ನೀ ನೀಡದೆ ನಿಲಸಾಲೆ |
| ,, | ೨೫ | ನಿಲಸಲೆ | ನಿಲಸಾಲೆ |
| ೧೩೦ | ೧೭ | ಜಲ | ಜಲ. |
| ೧೩೧ | ೩ | ಪ್ರಮಾದವಶ | ಪ್ರೇಮದ ವಶ |
| ,, | ೪ | ಹುಸಿಯೆನೆಂಬುವದಿಲ್ಲ | ಹುಸಿ ಎಂಬುವರಿಲ್ಲ |
| ,, | ೧೪ | ಕಡೆಯನೇ | ಕಥೆಯನೇ |
| ೧೩೨ | ೧೬ | ಮಾಟವರದು | ಮಾಟವರತು |

| ಪುಟ | ಓಳಿ | ಅಶುದ್ಧ | ಶುದ್ಧ |
|---|---|---|---|
| ೧೩೫ | ೧೧ | ಸದ್ಭಾವರ | ಸದ್ಭಕ್ತರ |
| ,, | ೨೩ | ಬೇಸರವ್ರೋಗವ | ಬೇಸರವಾದ |
| ೧೩೮ | ೯ | ಮುನ | ಮುನ್ನ |
| ೧೪೦ | ೩ | ಅವರಿಸಲೊಡಸೆ | ಆವರಿಸಲೊಡನೆ |
| ೧೪೧ | ೧ | ಇದೇನಯ್ಯ | ಇದ್ದೆನಯ್ಯ |
| ,, | ೧ | ನಾನಿರಿಸಿದಂತೆ | ನೀನಿರಿಸಿದಂತೆ |
| ,, | ೧೧ | ಹೆಂಗೂಸು | ಹೆಂಗುಸು |
| ,, | ೧೨ | ಗಂಡುಗೂಸು | ಗಂಡುಸು |
| ೧೪೨ | ೧೮ | ಹಸಿಯ | ಹುಸಿಯ |
| ೧೪೩ | ೫ | ಒಲಿಯುಡಿಯ | ಒಲಿಯುಡೆಯ |
| ,, | ೧೬ | ಕೊಂಡಿಸು | ಕೊಂಡೆಸು |
| ೧೪೪ | ೧೬ | ಭಿನ್ನವಾಯಿತ್ತು | ಅಭಿನ್ನವಾಯಿತ್ತು |
| ,, | ೨೩ | ಭಂಡವ | ಭಂಡಾವ |
| ೧೪೬ | ೨೬ | ಭ್ರಮೆಯುಳಿದು | ಭ್ರಮೆಯುಳಿದುದು |
| ೧೪೭ | ೩ | ಮನಗೊಳ್ಳಲು | ಮೌನಗೊಂಡವು |
| ,, | ೯ | ಸೂತ್ರಾರ್ಜಿತನು | ಸುತ್ರಾಮಜಿತನು |
| ,, | ೯ | ಊರ್ವರಾಜಿತನು | ಉರುರಾಜಿತನು |
| ,, | ೧೦ | ಅರ್ಜಿತನು | ಅಚ್ಯುತಜಿತನು |
| ,, | ೧೫ | ಉದಯಪುರುಷ | ಉದಯನ್ಮುಖಪುರುಷ |
| ೧೪೭ | ೧೭ | ತದ್ವಿಯತ್ಪುರುಷ ಪುರುಷ ಪುರುಷ ಪುರುಷರಿಲ್ಲದ ಪ್ರಭೆಯ | ತದ್ವಿಯತ್ಪುರುಷಾತ್ ಪುರುಷರಿಲ್ಲದ ಪ್ರಭೆಯ ಬೆಳಗಿವೆ |
| ,, | ೨೬ | ಬೆಳಗಿನ ಬೆಳಗಿಗು | ಬೆಳಗಿಂಗೆ ಬೆಳಗು |
| ,, | ೨೬ | ಬೆಳಗುವ ಬೆಳಗು | ಬೆಳಗು ಬೆಳಗ |
| ,, | ೨೬ | ಕೂಟವ | ಕೂಟದ ಸುಖವ |

